ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ಸಮರ್ಥ ರಾಮದಾಸರು

ಎ. ರಾ. ಕರಂದೀಕರ

ಅನುವಾದ

ದು. ನಿಂ. ಬೆಳಗಲಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಋಣ ನಿರ್ದೇಶನ

ರಾಮದಾಸ ಸ್ವಾಮಿಯವರ ನಿರ್ಯಾಣವಾಗಿ 1982ರ ಫೆಬ್ರವರಿಗೆ ಮುನ್ನೂರು ವರ್ಷಗಳು ಪೂರ್ತಿಯಾದವು. ಈ ಪ್ರಸಂಗದ ನಿಮಿತ್ತವಾಗಿ ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಈ ಸಂಸ್ಥೆಯು ಸಮರ್ಥರ ಒಂದು ಚರಿತ್ರೆಯನ್ನು ಪ್ರಕಟಿಸಲು ಸಂಕಲ್ಪ ಮಾಡಿತು. ಚರಿತ್ರೆ ಬರೆಯುವ ಕೆಲಸವನ್ನು ನನಗೆ ಒಪ್ಪಿಸಿದ್ದು, ಸಮರ್ಥರ ಜೀವನ ಹಾಗೂ ವಿಚಾರ ಇವುಗಳ ಚಿಂತನೆಗಾಗಿ ಒಂದು ಸಂಧಿ ನನಗೆ ದೊರೆಯಿತು. ನ್ಯಾಷನಲ್ ಬುಕ್ ಟ್ರಸ್ಟಿನ ಅಧಿಕಾರಿಗಳಿಗೆ ನಾನು ಋಣಿಯಾಗಿದ್ದೇನೆ.

ಪುಣೆಯಲ್ಲಿಯ ಸಮರ್ಥ ರಾಮದಾಸ ಪ್ರಬೋಧನ ಸಂಶೋಧನೆ ಸಂಸ್ಥೆಯ ಮತ್ತು ಆ ಸಂಸ್ಥೆಯು ನಿಯಮಿಸಿದ ಶ್ರೀ ಶಿವ-ಸಮರ್ಥ ತ್ರಿಶತಾಬ್ದಿ ಮಹೋತ್ಸವ ಕೇಂದ್ರ ಸಮಿತಿಯ ಪರಿಶ್ರಮವು ಈ ಚರಿತ್ರೆಯ ಕಲ್ಪನೆಯನ್ನು ಪೂರ್ಣಗೊಳಿಸಲು ಕಾರಣವಾಯಿತು. ಸಮರ್ಥರ ನಿರ್ಯಾಣದ ತ್ರಿಶತಾಬ್ದಿ ಮಹೋತ್ಸವವು ಸರ್ವತ್ರ ಆಚರಿಸಲ್ಪಡಬೇಕೆಂದು ಶ್ರೀ ಅಮರೇಂದ್ರ ಗಾಡಗೀಳ ಇವರು ಒಬ್ಬಂಟಿಗರಾಗಿ ಅಪಾರ ಕಷ್ಟವನ್ನು ಪಡೆದರು. ಪ್ರಸ್ತುತ ಚರಿತ್ರೆಯನ್ನು ಬರೆಯುತ್ತಿರುವಲ್ಲಿ ಅವರು ನನಗೆ ಎಲ್ಲ ರೀತಿಯ ಸಹಾಯವನ್ನು ತತ್ಪರತೆಯಿಂದ ಹಾಗೂ ಮನೋಭಾವದಿಂದ ಒದಗಿಸಿದರು. ಸಮರ್ಥರ ಬಗೆಗಿನ ಎಲ್ಲ ಗ್ರಂಥಗಳನ್ನು ಅವರು ನನಗೆ ಸಂಗ್ರಹಿಸಿ ಕೊಟ್ಟರು. ಪ್ರಸ್ತುತ ಚರಿತ್ರೆಯ ಬೆರಳಚ್ಚು ಮುದ್ರಣ ಪ್ರತಿಯನ್ನು ತಯಾರಿಸಲು ಕೂಡ ಅವರ ಸಹಾಯ ದೊರೆಯಿತು. ಶ್ರೀ ಅಮರೇಂದ್ರ ಗಾಡಗೀಳ ಮತ್ತು ಅವರ ಸಹಕಾರಿಗಳಿಗೆ ನಾನು ಮನಃಪೂರ್ವಕವಾಗಿ ಕೃತಜ್ಞನಾಗಿದ್ದೇನೆ.

ವಿ. ರಾ. ಕರಂದೀಕರ

# ಅನುಕ್ರಮಣಿಕೆ

# ಹದಿನೇಳನೆಯ ಶತಮಾನ

ಹದಿನೇಳನೆಯ ಶತಮಾನವು ಮಹಾರಾಷ್ಟ್ರದಲ್ಲಿ ಭಾಗ್ಯವನ್ನು ಪಡೆದ ಅವತಾರವಾಗಿತ್ತು. ಮಹಾರಾಷ್ಟ್ರದ ಕರ್ತೃತ್ವಕ್ಕೆ ಈ ಶತಕದಲ್ಲಿ ಒಂದು ಚಿಗುರು ಹುಟ್ಟಿದಂತಿತ್ತು. ಇದಕ್ಕಿಂತ ಪೂರ್ವದ ಮೂರು ಶತಮಾನಗಳಲ್ಲಿ ಯಾವ ಸಾಧನೆಯೂ ಇಲ್ಲದ ಹಿನ್ನೆಲೆಯಲ್ಲಿ ಈ ವಸಂತಕಾಲ ಒಂದು ವಿಶೇಷ ತೇಜಸ್ಸಿನಿಂದ ಮೂಡಿದಂತೆ ಕಾಣುವುದು.

ಹದಿಮೂರನೆಯ ಶತಮಾನದ ಕೊನೆಯ ದಶಕವು ಸಂತ ಜ್ಞಾನೇಶ್ವರರು ಪಡೆದ ಸಂಜೀವನ ಸಮಾಧಿ ಮತ್ತು ಯಾದವರ ರಾಜ್ಯಭಾರದ ಅವನತಿಯ ಪ್ರಾರಂಭವನ್ನು ಕಂಡಿತು. ಹದಿನಾಲ್ಕನೆಯ ಶತಮಾನದ ಮೊದಲನೆಯ ದಶಕದಲ್ಲಿ ರಾಮದೇವರಾಯ ಯಾದವನ ಪೂರ್ಣ ಪರಾಭವವಾಯಿತು. ಅಳಿದುಳಿದ ಪ್ರತಿಕಾರದ ಮೂಲೋತ್ಪಾಟನೆಯಾಗಿ ಎರಡನೆಯ ದಶಕದಲ್ಲಿ ದೇವಗಿರಿಯ ಮೇಲೆ ಅಲ್ಲಾವುದ್ದೀನ ಖಿಲ್ಜಿಯ ಧ್ವಜ ಹಾರಿತು. ಇದರ ಮುಂದಿನ ಇಪ್ಪತ್ತೈದು ಮೂವತ್ತು ವರ್ಷಗಳು ಅಸ್ಥಿರ ವಾತಾವರಣದಲ್ಲಿ, ಗೊಂದಲದಲ್ಲಿ ಕಳೆದವು. ಸನ್ 1347ರಲ್ಲಿ ಹಸನಗಂಗೂ ಬಹಮನಿಯು ತನ್ನ ರಾಜ್ಯವನ್ನು ಸ್ಥಾಪಿಸಿದನು. ಅನಂತರ 1648ರಲ್ಲಿ ತೋರಣ ಕಿಲ್ಲೆಯನ್ನು ಪಡೆದು ಶಿವಾಜಿಯು ಸ್ವರಾಜ್ಯ ಸ್ಥಾಪನೆಯ ಮುಹೂರ್ತವನ್ನು ಪ್ರತಿಷ್ಠಾಪಿಸಿದನು. ಅಲ್ಲಿಯವರೆಗೆ ಮುನ್ನೂರು ವರ್ಷಗಳು ಕಳೆದುಹೋಗಿದ್ದವು. ಈ ಮುನ್ನೂರು ವರ್ಷಗಳಲ್ಲಿ ಮೊದಲಿನ ನೂರಾಎಪ್ಪತ್ತೇಳು ವರ್ಷಗಳು ಮಾತ್ರ ಅಂಧಃಕಾರ ಯುಗವೆಂದು ತಿಳಿಯಲ್ಪಡುತ್ತದೆ. ಈ ಅವಧಿಯೊಳಗೆ ಮಹಾರಾಷ್ಟ್ರದಲ್ಲಿ ಯಾವ ಕ್ಷೇತ್ರದಲ್ಲಿಯೂ ಹೆಸರು ಹೇಳುವಂಥ ಒಬ್ಬನೂ ಕರ್ತೃತ್ವಶಾಲಿಯಾದದ್ದು ಕಾಣಸಿಗುವುದಿಲ್ಲ. ಹದಿನೇಳನೆಯ ಶತಮಾನಕ್ಕಿಂತ ಮೊದಲು ಕರ್ತೃತ್ವದ ಉನ್ನತ ಧ್ವಜವು ಕೇವಲ ಸಂತ ಏಕನಾಥರ ರೂಪದಲ್ಲಿ ಕಾಣುತ್ತದೆ. ಏಕನಾಥರ ಪಾರಮಾರ್ಥಿಕ ಕ್ಷೇತ್ರದ ಉತ್ತರಾಧಿಕಾರವನ್ನು ಅನಂತರ ಬಂದ ಸಂತಶ್ರೇಷ್ಠ ತುಕಾರಾಮ ಪಡೆದರು. ಹದಿನೇಳನೆಯ ಶತಮಾನದ ಕೊನೆಯಲ್ಲಿ ಶಿವಾಜಿಯ ಉದಯವಾಯಿತು. ಮಹಾರಾಷ್ಟ್ರದ ಕರ್ತೃತ್ವಶಕ್ತಿಗೆ ಅನೇಕ ಬಗೆಯ ಹೊಸ ಚಿಗುರುಗಳು ಮೂಡತೊಡಗಿದವು.

ತುಕಾರಾಮ ರಾಮದಾಸರಿಗಿಂತ ಸುಮಾರು ಹತ್ತು ವರ್ಷ ಹಿರಿಯರಾಗಿದ್ದರೆ, ರಾಮದಾಸರು ಶಿವಛತ್ರಪತಿಗಿಂತ ಇಪ್ಪತ್ತೆರಡು ವರ್ಷ ಹಿರಿಯರಾಗಿದ್ದರು. ಹದಿನೇಳನೆಯ ಶತಮಾನದಲ್ಲಿ ಮಹಾರಾಷ್ಟ್ರದೊಳಗೆ ವಿವಿಧ ಕ್ಷೇತ್ರಗಳಲ್ಲಿ ಉದಯಿಸಿದ

ಕರ್ತೃತ್ವ ಪುರುಷರಲ್ಲಿ ಸಂತ ತುಕಾರಾಮ, ಸಮರ್ಥ ರಾಮದಾಸ ಮತ್ತು ಶಿವಾಜಿ ಮಹಾರಾಜ ಈ ಮೂರು ಜನರು ಅಸಾಮಾನ್ಯರಾಗಿದ್ದರು.

ನಮ್ಮ ದೇಶದಲ್ಲಿ ಇತಿಹಾಸದ ಪ್ರಜ್ಞೆ ಎಂದಿಗೂ ಇರಲಿಲ್ಲ. ಅದಕ್ಕಾಗಿ ಈ ಮೂರು ಜನ ಮಹಾಪುರುಷರ ಜೀವನದ ಸಾಧಾರವೆಂಬ ಆಲೇಖವನ್ನು ಮಾಡಲಿಕ್ಕಾಗದು. ಇದೊಂದು ದುರ್ದೈವದ ಸಂಗತಿ. ವಸ್ತುನಿಷ್ಠ ವಿವರಗಳ ಮಹತ್ವವನ್ನು ನಮ್ಮ ಪ್ರಜ್ಞಾವಂತರು ಎಂದೂ ತಿಳಿದಿರಲಿಲ್ಲ. ವಿವಿಧ ಬಖ್ಯೆರುಗಳು, ಪತ್ರವ್ಯವಹಾರ ಮತ್ತು ಐತಿಹಾಸಿಕ ಕಾಗದಪತ್ರಗಳ ಮೂಲಕ ಶಿವಾಜಿ ಮಹಾರಾಜರ ಬಗ್ಗೆ ಅನೇಕ ಉಲ್ಲೇಖಗಳು ದೊರೆಯುತ್ತವೇನೋ ಸರಿ, ಆದರೆ ಅವರ ಚರಿತ್ರೆಯ ಸಮಗ್ರ ಚಿತ್ರವನ್ನು ಸಿದ್ಧಪಡಿಸುವ ದೃಷ್ಟಿಯಲ್ಲಿ ಈ ಉಲ್ಲೇಖಗಳು ಕೊನೆಗೆ ಅಪೂರ್ಣವೆನಿಸುತ್ತವೆ. ರಾಜಕೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸಿದ ಶಿವಛತ್ರಪತಿಯ ಚರಿತ್ರೆಯ ಸ್ಥಿತಿ ಈ ರೀತಿಯದಾದರೆ, ಯಾರ ವಿಷಯದಲ್ಲಿ ಕಾಗದಪತ್ರಗಳು ಇಲ್ಲವೆ ಪತ್ರವ್ಯವಹಾರಗಳ ಯಾವ ಉಲ್ಲೇಖಗಳೂ ಬರುವ ಸಾಧ್ಯತೆಯಿಲ್ಲವೋ ಅಂಥ ಸಂತತುಕಾರಾಮ, ಸಮರ್ಥ ರಾಮದಾಸ ಮತ್ತು ಇವರಂಥ ಪಾರಮಾರ್ಥಿಕ ಪುರುಷರ ಚರಿತ್ರೆಗಳ ಬಗೆಗೆ ಯಾವ ಅಪೇಕ್ಷೆಯನ್ನು ಮಾಡಬಹುದು ? ದಟ್ಟಮಂಜಿನಲ್ಲಿ ನೋಡುತ್ತಿರಲು ವಿಸ್ತೀರ್ಣವಾದ ಪ್ರದೇಶದಲ್ಲಿ ಕೆಲಕೆಲವು ಭಾಗಗಳು ಅಸ್ಪಷ್ಟವಾಗಿ ಗುರುತಿಸಲ್ಪಡುವಂತೆ, ದಂತಕಥೆ ಮತ್ತು ಆಖ್ಯಾಯಿಕೆಗಳ ಆಧಾರಗಳ ಮೂಲಕ ಈ ಸತ್ಪುರುಷರ ಚರಿತ್ರೆಗಳ ಮೇಲೆ ದೃಷ್ಟಿಯನ್ನು ಹಾಯಿಸಬೇಕಾಗುತ್ತದೆ.

ಒಂದು ಸಂಗತಿ ನಿಜ, ಸಮರ್ಥರ ಚರಿತ್ರೆಯ ವಿಷಯದಲ್ಲಿ ಎಷ್ಟೋ ಲೇಖನಗಳು ಇಂಗ್ಲಿಷರ ಆಡಳಿತ ಬರುವ ಪೂರ್ವದಲ್ಲಿ ಬರೆಯಲ್ಪಟ್ಟಿವೆ. ಸಮರ್ಥರ ವಿಷಯದಲ್ಲಿ ಅವರ ಶಿಷ್ಯರು, ಅನುಯಾಯಿಗಳು ಬರೆದಷ್ಟು ಲೇಖನಗಳನ್ನು, ಅನ್ಯರು ಯಾವ ಸಂತರ ಬಗೆಗೂ ಬರೆದಿಲ್ಲ. 'ವಾಕನೀಸರ ಟಿಪ್ಪಣಿ' ಈ ಹೆಸರಿನಿಂದ ಗುರುತಿಸಲ್ಪಡುವ ಸಮರ್ಥರ ಆಯುಷ್ಯದಲ್ಲಿಯ ಒಂದು ಮಹತ್ವದ ಘಟನೆಗಳ ಉಲ್ಲೇಖವು, ಅವರು ಸಮಾಧಿ ಹೊಂದಿದ ಕೇವಲ ನಾಲ್ಕು ದಿನಗಳಲ್ಲಿ ಬರೆಯಲ್ಪಟ್ಟಿದೆ. ಸಮರ್ಥರ ಚರಿತ್ರೆಯಲ್ಲಿಯ ವಿವಿಧ ಘಟನೆಗಳ ಮೂವತ್ತೊಂಬತ್ತು ಉಲ್ಲೇಖಗಳು ಈ ಟಿಪ್ಪಣಿಯಲ್ಲಿವೆ. ದಿವಾಕರಭಟ್ಟ ಗೋಸಾವಿ ಇವರು ಸಮರ್ಥರ ಪ್ರಮುಖ ಶಿಷ್ಯರಲ್ಲಿ ಒಬ್ಬರು. ಇವರ ಆಜ್ಞೆಯಂತೆ ಅಂತಾಜಿ ಗೋಪಾಳ ವಾಕನೀಸ ಕುಡಾಳಕರ ಇವರು ಈ ಟಿಪ್ಪಣಿಗಳನ್ನು ಬರೆದಿಟ್ಟರು. ಅನಂತರ ಒಂದು ತಿಂಗಳೊಳಗೆ ಗೋಪಾಳ ಅಂಬಾಜಿ ಶಹಾಪುರಕರ ಇವರು ಅದರ ಒಂದು ಪ್ರತಿಯನ್ನು ಸಿದ್ಧಪಡಿಸಿದರು. ಸಮಕಾಲೀನ ಲೇಖಕರೆಂದು ಗುರುತಿಸಲ್ಪಡುವ ಈ ಇಬ್ಬರು ಲೇಖಕರು ಸಮರ್ಥರ ಚರಿತ್ರೆಯ ಬಗೆಗೆ ಲೇಖನ ಬರೆದಿದ್ದಾರೆ. ದಿನಕರ ಸ್ವಾಮಿಗಳ 'ಸ್ವಾನುಭವ ದಿನಕರ' ಮತ್ತು ಗಿರಿಧರ ಸ್ವಾಮಿಯವರ 'ಸಮರ್ಥ ಪ್ರತಾಪ' ಹೀಗೆ ಅವರ ಎರಡು ಗ್ರಂಥಗಳಿವೆ. ಈ ಎರಡೂ ಗ್ರಂಥಗಳು ಓವಿ*ಬದ್ಧವಾಗಿವೆ. ದಿನಕರ ಸ್ವಾಮಿಯವರು ಪ್ರತ್ಯಕ್ಷ ಸಮರ್ಥ

*ಓವಿ = ಮರಾಠಿ ಸರಳಪದ್ಯಾತ್ಮಕ ನುಡಿ.

ರಿಂದ ಅನುಗ್ರಹವನ್ನು ಪಡೆದಿದ್ದರು. ಆದರೆ ಗಿರಿಧರ ಸ್ವಾಮಿಯವರು, ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಸಮರ್ಥರ ಸಹವಾಸಲಾಭವನ್ನು ಪಡೆದಿರಬಹುದು.

ಇದರನಂತರ ಮಹತ್ವದ ಗ್ರಂಥ, ಹನುಮಂತ ಸ್ವಾಮಿಯವರ ಬಖೈರು. ಈ ಬಖೈರನ್ನು ಗದ್ಯದಲ್ಲಿ ಬರೆದಿದ್ದು, ಇದು ವಿಶೇಷ ಮಹತ್ತ್ವದ ಸಂಗತಿಯಾಗಿದೆ. ಸಮರ್ಥ ಸಂಪ್ರದಾಯದಲ್ಲಿ ಹನುಮಂತ ಸ್ವಾಮಿಯವರ ಸ್ಥಾನವು ವೈಶಿಷ್ಟ್ಯಪೂರ್ಣವಾದುದು. ಸಮರ್ಥರ ಅಣ್ಣ ಗಂಗಾಧರ ಸ್ವಾಮಿಯವರ ಮೊಮ್ಮಗನ ಮೊಮ್ಮಗ ಈ ಹನುಮಂತಸ್ವಾಮಿ. ಸಮರ್ಥರು ಸ್ಥಾಪಿಸಿದ ಮಠಗಳಲ್ಲಿ ಚಾಫಳದ ಮಠವು ಎಲ್ಲವುಗಳಿಗಿಂತ ಮಹತ್ವದ್ದು. ಸನ್ 1783ರಿಂದ ಮೂವತ್ತೈದು ವರ್ಷ ಹನುಮಂತ ಸ್ವಾಮಿಯವರು ಚಾಫಳ ಮಠದ ಅಧಿಪತಿಗಳಾಗಿದ್ದರು. ಅವರಿಗೆ ಅನೇಕ ಕಾಗದಪತ್ರಗಳನ್ನು ನೋಡಲು ದೊರೆತ ಸಾಧ್ಯತೆಯಿದೆ. ಹನುಮಂತ ಸ್ವಾಮಿಯವರೇ ಈ ಸಂಗತಿಯನ್ನು ಬಾಯಿಂದ ಹೇಳಿದ್ದಾರೆ. ಅವರ ಆಜ್ಞೆಯಂತೆ ಚಾಫಳ ಮಠದ ರಂಗೋಲಕ್ಷ್ಮಣ ಮೋಢೆ ಮತ್ತು ಛತ್ರಪತಿಗಳ ಮನೆತನದ ಸುಪ್ರಸಿದ್ಧ ಬಖೈರುಕಾರ ಮಲ್ಹಾರ ರಾಮರಾವ್ ಚಿಟಣೀಸ ಈ ಇಬ್ಬರು ಅದನ್ನು ಬರೆದಿದ್ದಾರೆ. ಈ ಬಖೈರಿನ ಸುಮಾರಿಗೆ ಬರೆಯಲ್ಪಟ್ಟ ಇನ್ನೊಂದು ಗ್ರಂಥವೆಂದರೆ ಆತ್ಮಾರಾಮ ಬುವಾಎಕ್ಕೆಹಾಳಿಕರ ಇವರ ಹದಿನಾರು ಸಾವಿರ ಓವಿಗಳ 'ದಾಸವಿಶ್ರಾಮಧಾಮ.' ಸನ್ 1803 ರಿಂದ 1808ರ ಅವಧಿಯಲ್ಲಿ ಇದು ಬರೆಯಲ್ಪಟ್ಟಿದೆ. ವಿಸ್ತಾರದಲ್ಲಿ ಈ ಗ್ರಂಥವು ಎಲ್ಲಕ್ಕಿಂತ ದೊಡ್ಡದಾಗಿದೆ. ಇದಲ್ಲದೆ ಸಮರ್ಥ ಸ್ಥಾಪಿಸಿದ ತಂಜಾವೂರ ಮಠದ ಅಧಿಪತಿಗಳಾದ ಭೀಮಸ್ವಾಮಿ, ತಂಜಾವೂರಕ್ಕೆ ಹೋದ ಎರಡನೆಯ ಶಿಷ್ಯ ಅನಂತಸ್ವಾಮಿ, ಅವರ ಶಿಷ್ಯ ಮೇರುಸ್ವಾಮಿ, ಸುಪ್ರಸಿದ್ಧ ಸಂತಚರಿತ್ರಕಾರ ಮಹಿಪತಿ, ಉದ್ಧವಸುತ, ಹರಿಹರಸ್ವಾಮಿ, ರಾಜಾರಾಮ ಪ್ರಾಸಾದಿ ಮೊದಲಾದವರು ಬರೆದ ಚಿಕ್ಕಪುಟ್ಟ ಸಮರ್ಥರ ಚರಿತ್ರೆಗಳಿವೆ.

ಇತರ ಸಂತರ ತುಲನೆಯಲ್ಲಿ ಸಮರ್ಥರ ಬಗೆಗಿನ ಸಾಂಪ್ರದಾಯಿಕ ಈ ಲೇಖನಗಳು ಒಂದಿಷ್ಟು ಅಧಿಕವಾಗಿವೆ. ಆದರೂ ಈ ಎಲ್ಲ ಲೇಖನಗಳ ವಿಶ್ವಸನೀಯತೆಯು ಸಂದೇಹಪಡುವಂತಿದೆ ಎಂದು ಹೇಳಲಾಗದು. ಸಾಧಾರ ಮತ್ತು ಸಪ್ರಮಾಣ ಲೇಖನಗಳ ಕ್ರಮಬದ್ಧತೆ ಇವುಗಳಲ್ಲಿ ಯಾವುದಕ್ಕೂ ಇಲ್ಲ. ಕೇವಲ ಘಟನೆಗಳನ್ನು ಒಂದಿಷ್ಟು ಉಲ್ಲೇಖ ಮಾಡಿರುವ 'ವಾಕನೀಸರ ಟಿಪ್ಪಣಿ'ಯ ಒಂದು ಅಪವಾದವನ್ನು ಬಿಟ್ಟರೆ, ಇತರ ಎಲ್ಲ ಗ್ರಂಥಗಳಲ್ಲಿ ಪುರಾಣಗಳ ರೀತಿಯಿಂದ ವರ್ಣಿಸಿದ ಅನೇಕ ಅದ್ಭುತ ಕಥೆಗಳಿವೆ. ದಂತಕಥೆಗಳು ಹಾಗೂ ಆಖ್ಯಾಯಿಕೆಗಳು ಇದ್ದೇ ಇವೆ. ಚಮತ್ಕಾರ ಮತ್ತು ಅದ್ಭುತ ಕಥೆಗಳ ಬಗ್ಗೆ ಸ್ವತಃ ಸಮರ್ಥರು ವಿಶ್ವಾಸವನ್ನಿಡುತ್ತಿರಲಿಲ್ಲ. ಅವರ ಸಾಹಿತ್ಯದಲ್ಲಿ ನಮಗಿದು ಸ್ಪಷ್ಟವಾಗಿ ಕಂಡುಬರುತ್ತದೆ. 'ಜನಸ್ವಭಾವ ಗೋಸಾವಿ' ಈ ಹೆಸರಿನ ಒಂದು ಪ್ರಕರಣದಲ್ಲಿ ಅವರು, ಮರುಳು ಮಾಡುವ ಗುರುಗಳು ಯಾವ ಯಾವ ಪ್ರಕಾರಗಳಿಂದ ಮುಗ್ಧ ಜನರನ್ನು ಮೋಸಗೊಳಿಸುತ್ತಾರೆಂಬುದನ್ನು ನಿಖರವಾಗಿ ವರ್ಣಿಸಿದ್ದಾರೆ. ಜನತೆ ಇಂಥ ಚಮತ್ಕಾರಗಳ ಮೇಲೆ ವಿಶ್ವಾಸವನ್ನಿಡಕೂಡದು,

ಆದರೆ ಸ್ವಂತ ಬುದ್ಧಿಯಿಂದ ವಿಚಾರಮಾಡಬೇಕು ಎಂದವರು ತಿಳಿಹೇಳಿದ್ದಾರೆ. ಆದರೆ ಅವರ ಈ ಹೇಳಿಕೆಯನ್ನು ಸಮರ್ಥರ ಚರಿತ್ರೆ ಬರೆಯುತ್ತಿರುವ ಅವರ ಶಿಷ್ಯರು, ಅನುಯಾಯಿಗಳು ನಿರ್ಲಕ್ಷಿಸಿದ್ದಾರೆ. ಆದ್ದರಿಂದ ಸಮರ್ಥರ ಚರಿತ್ರೆಯ ರೂಪರೇಷೆಗಳನ್ನು ನಿರ್ಧರಿಸುವುದರಲ್ಲಿ ಸಂಪ್ರದಾಯಸ್ಥರು ರಚಿಸಿರುವ ಈ ಲೇಖನಗಳನ್ನು ನೋಡುವ ಸಂದರ್ಭದಲ್ಲಿ ಅವರು ಮಾಡಿರುವ ಅದ್ಭುತ ಹಾಗೂ ಅತಿಶಯೋಕ್ತಿಪೂರ್ಣ ವರ್ಣನೆಗಳ ಮರೆಯಲ್ಲಿರುವ ಐತಿಹಾಸಿಕ ಸತ್ಯದ ಸ್ವರೂಪವನ್ನು ನಾವು ಕಾಳಜಿಪೂರ್ವಕವಾಗಿ ಶೋಧಿಸಬೇಕಾಗುತ್ತದೆ.

ಹನುಮಂತ ಸ್ವಾಮಿಯವರ ಬಖೈರಿನಲ್ಲಿಯ ಸಮರ್ಥರ ಮನೆತನದ ಪೂರ್ವ ವೃತ್ತಾಂತವನ್ನು ವಿಶ್ವಸನೀಯವೆಂದು ನಂಬಲು ಅಡ್ಡಿಯಿಲ್ಲ. ಸಮರ್ಥರಿಗಿಂತ ಮೊದಲು ಇಪ್ಪತ್ತೆರಡು ಪೀಳಿಗೆಗಳವರೆಗೆ ಈ ವಸ್ತುಸ್ಥಿತಿಯು ಹೋಗಿ ಮುಟ್ಟುತ್ತದೆ. ಸಮರ್ಥರ ಮೂಲ ಹೆಸರು ನಾರಾಯಣ. ತಂದೆ ಸೂರ್ಯಾಜಿಪಂತ, ತಾಯಿ ರಾಣೂಬಾಯಿ.ಮನೆತನದ ಹೆಸರು ಠೋಸರ. ಕೃಷ್ಣಾಜಿಪಂತ ಈ ವಂಶದ ಮೂಲಪುರುಷರು. ಇವರು ಮೂಲ ಬೀದರ ಭಾಗದಲ್ಲಿ ವಾಸಿಸುತ್ತಿದ್ದರು. ಬರಗಾಲ ಹಾಗೂ ಅನಿಶ್ಚಿತ ರಾಜಕೀಯ ಪರಿಸ್ಥಿತಿಯ ತೊಂದರೆಯಿಂದ ಒಂಬತ್ತನೆಯ ಶತಮಾನವು ಕಳೆದ ಬಳಿಕ, ಅವರು ಯಾವಾಗಲೋ ಈಗಿನ ಮರಾಠಾವಾಡದ ಅಂಬಡ ತಾಲ್ಲೂಕಿಗೆ ಬಂದರು. ಕೃಷ್ಣಾಜಿಪಂತರಿಗೆ ಐವರು ಗಂಡು ಮಕ್ಕಳು. ಇವರಲ್ಲಿ ಮೊದಲಿನ ನಾಲ್ವರ ಜನ್ಮವು, ಅವರು ಸ್ಥಾನಾಂತರ ಮಾಡುವುದಕ್ಕಿಂತ ಮೊದಲು ಆಗಿತ್ತು. ಐದನೆಯ ಮಗ ದಶರಥನ ಜನ್ಮವು ತಂದೆ ಅಂಬಡ ಭಾಗಕ್ಕೆ ಬಂದ ಬಳಿಕ ಆಗಿತ್ತು. ಮೊದಲಿನ ನಾಲ್ವರಿಗೆ ಹಿವರೆ ಮತ್ತು ರಾಕ್ಷಸಭುವನ ಭಾಗದಲ್ಲಿ ನಲವತ್ತೆಂಟು ಗ್ರಾಮಗಳ ಶಾನುಭೋಗವೃತ್ತಿ ದೊರೆಯಿತು. ಇವುಗಳಲ್ಲಿ ಹನ್ನೆರಡು ಗ್ರಾಮಗಳನ್ನು ಪ್ರತ್ಯೇಕ ಬಂಧುಗಳು ಹಂಚಿಕೊಂಡರು. ಈ ಸಮಯ ಎಲ್ಲರಿಗಿಂತ ಚಿಕ್ಕವನಾದ ತಮ್ಮನು ವಯಸ್ಸಿನಿಂದ ಇನ್ನೂ ಸಣ್ಣವ. ಆತ ದೊಡ್ಡವನಾದ ಬಳಿಕ ಪಾಲುಕೊಡಲು ಹಿರಿಯ ಬಂಧುಗಳು ಸಿದ್ಧರಾದರು. ಆದರೆ ತಾನಾಗಿಯೇ ಬಂದ ಇಂಥ ವೃತ್ತಿಯನ್ನು ಸ್ವೀಕರಿಸಲು ದಶರಥಪಂತ ಒಪ್ಪಲಿಲ್ಲ. ಗೋದಾವರಿ ನದಿಯ ಪರಿಸರದ ಹನ್ನೆರಡು ಗ್ರಾಮಗಳ ವೃತ್ತಿಯನ್ನು ಅವರು ತಮ್ಮ ಸ್ವಸಾಮರ್ಥ್ಯದಿಂದ ಸಂಪಾದಿಸಿದರು.

ಹಿವರೆ ಗ್ರಾಮದಿಂದ ಆರು ಮೈಲಿನ ಮೇಲಿರುವ ವಡಗಾಂವ ಎಂಬ ಹೆಸರಿನ ಒಂದು ಹಳ್ಳಿಯು ಪಾಳುಬಿದ್ದಿತ್ತು. ಅಲ್ಲಿ ಒಂದಿಷ್ಟು ಗವಳಿ ಜನ ವಾಸಿಸುತ್ತಿದ್ದರು. ಇತರ ವಸತಿಯಿರಲಿಲ್ಲ. ಲಖಮಾಜಿ ಗವಳಿ ಈತನ ಸಹಾಯದಿಂದ ಅಲ್ಲಿ ಹೊಸ ಗ್ರಾಮವನ್ನು ಸ್ಥಾಪಿಸಿದರು. ಅದು ಇಂದಿನ ಜಾಂಬ ಗ್ರಾಮವು. ಈ ಹೊಸ ಹಳ್ಳಿಯ ಶಾನುಭೋಗವೃತ್ತಿ ದಶರಥಪಂತರ ಕಡೆಗೆ ಮತ್ತು ಗೌಡಿಕೆ ಲಖಮಾಜಿ ಗವಳಿಯ ಕಡೆಗೆ ಹಂಚಲ್ಪಟ್ಟವು. ಸನ್ 988ರಲ್ಲಿ ದಶರಥಪಂತರು ಜಾಂಬಕ್ಕೆ ಬಂದು ವಾಸಿಸ ತೊಡಗಿದರು. ಅವರ ಮರಣಾನಂತರ ಅವರ ಆರು ಜನ ಮಕ್ಕಳು ಪ್ರತ್ಯೇಕವಾಗಿ ಎರಡೆರಡು ಗ್ರಾಮಗಳನ್ನು ಹಂಚಿಕೊಂಡರು. ಹಿರಿಯ ಮಗನಾದ ರಾಮಾಜಿಪಂತರ

ಪಾಲಿಗೆ ಜಾಂಬ ಗ್ರಾಮವು ಬಂದಿತು. ಈ ರಾಮಾಜಿ ಪಂತರ ವಂಶದಲ್ಲಿ ಸುಮಾರು ಆರು ನೂರು ವರ್ಷ ಕಳೆದ ಬಳಿಕ ಸೂರ್ಯಾಜಿಪಂತರ ಜನ್ಮವಾಯಿತು. ಸೂರ್ಯಾಜಿ ಪಂತರು ಠೋಸರ ಮನೆತನದ ಮೂಲಪುರುಷ ಕೃಷ್ಣಾಜಿಪಂತರಿಂದ ಇಪ್ಪತ್ತೆರಡನೆ ಯವರಾಗಿದ್ದರು.

ಸೂರ್ಯಾಜಿಪಂತರ ತಂದೆ ಅವರು ಚಿಕ್ಕವರಿದ್ದಾಗ ತೀರಿಕೊಂಡಿದ್ದರು. ಕುಟುಂಬ ದಲ್ಲಿ ಆನುವಂಶಿಕವಾಗಿ ಬಂದ ಸೂರ್ಯೋಪಾಸನೆ ಜರುಗುತ್ತಲಿತ್ತು. ಕೆಲವು ನಿಯಮ ಗಳು ಹಾಗೂ ಕುಲಾಚಾರಗಳಿದ್ದವು. ಇವೆಲ್ಲವುಗಳನ್ನು ಸೂರ್ಯಾಜಿಪಂತರು ನಿಷ್ಠೆ ಯಿಂದ ಆಚರಿಸುತ್ತಿದ್ದರು. ಅವರು ಅತೀವ ಸಾತ್ತ್ವಿಕ ಹಾಗೂ ಧಾರ್ಮಿಕ ಪ್ರವೃತ್ತಿ ಯವರಾಗಿದ್ದರು. ದಿನನಿತ್ಯ ಒಂದು ಸಾವಿರ ಸೂರ್ಯ ನಮಸ್ಕಾರಗಳನ್ನು ಹಾಕು ತ್ತಿದ್ದರು ಮತ್ತು ಹನ್ನೆರಡು ನೂರು ಗಾಯತ್ರಿ ಮಂತ್ರಗಳನ್ನು ಜಪಿಸುತ್ತಿದ್ದರು. ಸೂರ್ಯನ ಮತ್ತು ಪ್ರಭು ಶ್ರೀರಾಮಚಂದ್ರನ ಉಪಾಸನೆಯನ್ನು ಸೊರ್ಯಾಜಿ ಪಂತರು ಮಾಡುತ್ತಿದ್ದರು. ಪ್ರತಿಸಲ ರಾಮನವಮಿ ಉತ್ಸವವನ್ನು ಅವರು ದೊಡ್ಡ ಪ್ರಮಾಣದಲ್ಲಿ ಆಚರಿಸುತ್ತಿದ್ದರು. ಅಂದು ಇಡೀ ದಿನವನ್ನು ಪೂಜೆ, ಅರ್ಚನೆ ಮತ್ತು ಜಪತಪಗಳಲ್ಲಿ ಕಳೆಯುತ್ತಿದ್ದರು. ಉದರ ನಿರ್ವಹಣೆಯ ಸಾಧನವೆಂದರೆ ಶಾನುಭೋಗ ವೃತ್ತಿ. ದಿನ ಕಳೆಯುವವರೆಗೆ ಎಲ್ಲ ಸಮಯವನ್ನು ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿ ಸಾಯಂಕಾಲದ ಆಹ್ನಿಕ ಮುಗಿದ ಬಳಿಕ ರಾತ್ರಿ ಬಹಳ ಹೊತ್ತಿನ ವರೆಗೆ ಸೂರ್ಯಾಜಿಪಂತರು ತಮ್ಮ ಶಾನುಭೋಗ ವೃತ್ತಿಯ ಕಾರ್ಯಗಳನ್ನು ನೋಡುತ್ತಿದ್ದರೆಂದು ಉಲ್ಲೇಖವಿದೆ. ಅವರ ಪತ್ನಿ ರಾಣೂಬಾಯಿ ಕೂಡ ಪತಿಯಂತೆ ಧಾರ್ಮಿಕ ಪ್ರವೃತ್ತಿಯವರಾಗಿದ್ದರು.

ಲಗ್ನವಾದ ಬಳಿಕ ಸೂರ್ಯಾಜಿಪಂತರಿಗೆ ಬಹಳ ವರ್ಷಗಳವರೆಗೆ ಮಕ್ಕಳಾಗಲಿಲ್ಲ. ಮುಂದೆ ಹುಟ್ಟಿದ ಇಬ್ಬರು ಮಕ್ಕಳಲ್ಲಿ ಒಬ್ಬನು ಮಹಾಸತ್ಪುರುಷನೆಂದು ಹೆಸರು ವಾಸಿಯಾದನು. ಯಾರೇ ಆಗಲಿ ಮಹಾಪುರುಷರ ಜನ್ಮಪೂರ್ವದಲ್ಲಿ ಅವರ ತಂದೆ ತಾಯಿಗಳಿಗೆ ಒಂದಿಷ್ಟು ದೃಷ್ಟಾಂತಗಳಾದ ಬಗೆಗೆ ಕಥೆಗಳು ಶ್ರದ್ಧಾಭಾವದಿಂದ ಹೇಳ ಲ್ಪಡುತ್ತವೆ. ಸಮರ್ಥರ ಜನ್ಮವಾಗುವುದಕ್ಕಿಂತ ಮೊದಲು ಸೂರ್ಯನಾರಾಯಣ ಮತ್ತು ಪ್ರಭು ರಾಮಚಂದ್ರರ ದರ್ಶನವು ಸೂರ್ಯಾಜಿಪಂತರಿಗೆ ಆದ ವಿಷಯವನ್ನು ಹಿಂದಿನ ಚರಿತ್ರಕಾರರು ವರ್ಣಿಸಿದ್ದು ಕಂಡುಬರುತ್ತದೆ. ಅದು ಅವರ ರೀತಿಯಂತಿದೆ, ಹಳೆಯ ಪದ್ಧತಿಯ ಹಾಗೆ ಹೇಳಿದಂತಿದೆ.

ಶಕೆ 1527ರಲ್ಲಿ ಮಾರ್ಗಶೀರ್ಷಶುದ್ಧ ತ್ರಯೋದಶಿ, ಅಂದರೆ ಸನ್ 1605ರಲ್ಲಿ ರಾಣೂಬಾಯಿಗೆ ಮೊದಲಮಗುವಾಯಿತು. ಆತನ ಹೆಸರನ್ನು ಗಂಗಾಧರನೆಂದು ಇಟ್ಟರು. ಈತನಿಗೆ ಮುಂದೆ ಶ್ರೇಷ್ಠ ಮತ್ತು ರಾಮೀರಾಮದಾಸ ಹೀಗೆ ಬೇರೆ ಹೆಸರು ಗಳಿದ್ದವು. ಗಂಗಾಧರ ಪಂತರ ವಿವಾಹವು ಅವರ ಏಳನೆಯ ವರ್ಷದಲ್ಲಿ ಜರುಗಿತು. ಅವರ ಇಡೀ ಆಯುಷ್ಯವು ಜಾಂಬದಲ್ಲಿ ಕಳೆಯಿತು. ಒಂದಿಷ್ಟು ಭಕ್ತಿ ವೈರಾಗ್ಯಪರ ರಚನೆಗಳು ಅವರ ಹೆಸರಿನಲ್ಲಿವೆ. ಆದರೆ ಇವು ವಿಶೇಷ ಮಹತ್ತ್ವದ್ದು ಎಂದೆನಿಸು

ವುದಿಲ್ಲ. 'ಭಕ್ತಿರಹಸ್ಯ' ಮತ್ತು 'ಸುಗಮೋಪಾಯ' ಅವರ ಎರಡು ಗ್ರಂಥಗಳ ಹೆಸರುಗಳು. ಅವು ಪದ್ಯರೂಪದಲ್ಲಿದೆ. ನಾಮಸ್ಮರಣೆಯ ಮಹಾತ್ಮ್ಯೆಯನ್ನು ವಿಶೇಷವಾಗಿ ವರ್ಣಿಸಿದ್ದಾರೆ.

ಶಕೆ 1530ರ ಚೈತ್ರ ಶುದ್ಧ ನವಮಿಯ ದಿನ ಅಂದರೆ ಸನ್ 1608ರಲ್ಲಿ ಸರಿಯಾಗಿ ಮಧ್ಯಾಹ್ನದ ಸಮಯ ಸೂರ್ಯಾಜಿಪಂತರಿಗೆ ದ್ವಿತೀಯ ಪುತ್ರರತ್ನವಾಯಿತು. ಮಗುವಿಗೆ ನಾರಾಯಣನೆಂದು ನಾಮಕರಣ ಮಾಡಿದರು. ಇವನೇ ಮುಂದೆ ಸಮರ್ಥ ರಾಮದಾಸ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದನು. ಭಗವಾನ್ ಶ್ರೀರಾಮಚಂದ್ರರ ಜನ್ಮತಿಥಿಯ ದಿನ ಮತ್ತು ಸರಿಯಾಗಿ ಅದೇ ವೇಳೆಗೆ ನಾರಾಯಣನ ಜನ್ಮವಾಗುವುದು ಇದೊಂದು ವಿಲಕ್ಷಣ ಯೋಗಾಯೋಗವೆಂದು ಹೇಳಬೇಕಾಗುತ್ತದೆ. ನಾರಾಯಣನ ತಂದೆ ತಾಯಿಗಳಿಗೆ ಈ ಯೋಗಾಯೋಗವು ವಿಶೇಷವಾಗಿ ಕಂಡಿರಬಹುದು. ಬಹಳ ದಿನಗಳವರೆಗೆ ಪುತ್ರಸಂತಾನವಿಲ್ಲದ ಚಿಂತೆ ಸೂರ್ಯಾಜಿಪಂತ ಹಾಗೂ ರಾಣೂಬಾಯಿ ದಂಪತಿಗಳಿಗಿತ್ತು. ಇಬ್ಬರು ಗಂಡು ಮಕ್ಕಳ ಜನ್ಮದಿಂದ ಅವರ ಸಾಂಸಾರಿಕ ಜೀವನವು ಸಂತೋಷಪೂರ್ಣವಾಯಿತು. ಈ ಇಬ್ಬರು ಗಂಡು ಮಕ್ಕಳೆಂದರೆ ತಾವು ಮಾಡಿದ ಈಶ್ವರನ ಆರಾಧನೆಯ ಫಲವೆಂದು ಅವರ ಭಕ್ತಿ ಪಾರಾಯಣಪರ ಮನಸ್ಸಿಗೆ ಆಗಿದ್ದರೆ ಅದು ಸ್ವಾಭಾವಿಕ.

# ಜಾಂಬದಲ್ಲಿ ಬಾಲ್ಯ

ಹಿರಿಯನಾದ ಗಂಗಾಧರ ಮತ್ತು ಅವನಿಗಿಂತ ಸುಮಾರು ಎರಡೂವರೆ ವರ್ಷ ಚಿಕ್ಕವನಾದ ನಾರಾಯಣ ಬಾಲಕರಾಗಿ ಮನೆಯಲ್ಲಿ ಆಡುತ್ತ ಓಡಾಡುತ್ತಲಿದ್ದರು. ಅವರ ಬಾಲಲೀಲೆಗಳನ್ನು ಕಂಡು ಮಾತೋಶ್ರೀ ರಾಣೂಬಾಯಿಯವರ ಮನಸ್ಸು ಸಂತೋಷಪಡುತ್ತಲಿತ್ತು. ಪ್ರತಿಯೊಬ್ಬ ಬಾಲಕನಿಗೆ ಜನ್ಮಜಾತವೆಂದು ಗುರುತಿಸಲ್ಪಡುವ ಕೆಲವು ಸ್ವಭಾವಗಳಿರುತ್ತವೆ. ಗಂಗಾಧರನು ನಾಲ್ಕು ಜನರಂತೆ ಶಾಂತ ಸ್ವಭಾವದವನು ಮತ್ತು ತಂದೆತಾಯಿಗಳ ಮಾತು ಮೀರದವನು ಆಗಿದ್ದನು. ಆದರೆ ನಾರಾಯಣನು ತುಂಟ, ಜಗಳಗಂಟ ಪ್ರವೃತ್ತಿಯವನು, ತನ್ನ ಮನಬಲ್ಲಂತೆ ನಡೆಯುತಕ್ಕವನು ಆಗಿದ್ದನು. ಪ್ರಾರಂಭದಿಂದ ಭಯವೆಂಬುದು ನಾರಾಯಣನಿಗೆ ಗೊತ್ತೇ ಇರಲಿಲ್ಲ.

ಚಿಕ್ಕಮಕ್ಕಳು ಅತಿಯಾಗಿ ಹಟ ಮಾಡಿದರೆ ಮತ್ತು ಮಾತು ಕೇಳದಿದ್ದರೆ, ಆಗ ತಂದೆತಾಯಿಗಳು ಅವರಿಗೆ 'ಬೈರಾಗಿ ಬಾವಾ'ನ ಭಯ ತೋರಿಸುತ್ತಿದ್ದರು. "ಬೈರಾಗಿ ಬಾವಾ ಹಿಡಿದುಕೊಂಡು ಹೋಗುವನು" ಎಂದೆನ್ನುತ್ತಿದ್ದರು. ಪ್ರಸಂಗಾನುಸಾರವಾಗಿ ರಾಣೂಬಾಯಿ ನಾರಾಯಣನಿಗೆ ಹೀಗೆ ಹೇಳಿ ಭಯ ತೋರಿಸುತ್ತಿದ್ದರು. ಆದರೆ ಅವನ ಮೇಲೆ ಯಾವ ಪರಿಣಾಮವೂ ಆಗುತ್ತಿರಲಿಲ್ಲ. ಬೈರಾಗಿ ಬಾವಾ ಬರಲಿ, ಅವನನ್ನೇ ನಾನು ಹೊಡೆಯುತ್ತೇನೆ" ಎಂದವನು ಹೇಳುತ್ತಿದ್ದನು. ಹುಡುಗನು ಮನೆಯಿಂದ ದೂರಹೋಗಬಾರದೆಂದು "ಹೊರಗೆ ಹೋದರೆ ಕಳ್ಳರು ನಿನ್ನ ಆಭರಣ ಕಸಿದುಕೊಂಡು ಹೋಗುವರು" ಎಂದು ತಾಯಿ ಹೇಳಿದರೆ, "ಸಂತೋಷದಿಂದ ಒಯ್ಯಲಿ. ಆದರೆ ನಾನು ಹೊರಗೆ ಹೋಗುವವನೇ" ಎಂದು ನಾರಾಯಣನು ಉತ್ತರಿಸುತ್ತಿದ್ದನು. ಕಳ್ಳರ ಭೀತಿ ಆತನಿಗಿರಲಿಲ್ಲ ಎಂಬುದು ಇದರಿಂದ ಗೊತ್ತಾಗುತ್ತದೆ. ಅದರಂತೆಯೇ ಮೈಮೇಲೆ ಆಭರಣ ಹಾಕಿಕೊಂಡು ಪ್ರದರ್ಶಿಸುವುದಕ್ಕಿಂತ ಹೊರಗೆ ತಿರುಗಾಡುವ ಮೋಹವು ಬಾಲಕ ನಾರಾಯಣನಲ್ಲಿ ಅಧಿಕವಾಗಿತ್ತೆಂಬುದು ಕೂಡ ಅದರಲ್ಲಿದೆ. ತಾಸುಗಟ್ಟಲೆ ನದೀ ನೀರಲ್ಲಿ ಮುಳುಗುವುದು, ಮನಸೋಕ್ತ ಈಜುವುದು, ಗೋಲಿ ಆಡುವುದು, ಮರ ಏರುವುದು, ಎತ್ತರದಿಂದ ಜಿಗಿಯುವುದು ಹೀಗೆ ನಾರಾಯಣನ ಹವ್ಯಾಸಗಳಾಗಿದ್ದವು. ಯಾವಾಗಲೋ ಒಮ್ಮೆ ಒಂದು ಮರದಿಂದ ಆವೇಶದಲ್ಲಿ ಕೆಳಗೆ ನದಿಗೆ ಹಾರಿದಾಗ, ನಾರಾಯಣನ ಕೆನ್ನೆಗೆ ಪೆಟ್ಟು ತಾಗಿ ಗಂಟು ಎದ್ದಿತ್ತು. ಅದು ಮುಂದೆ ಆಜನ್ಮಪರ್ಯಂತ ಬಾಲ್ಯ ಸಾಹಸದ ಕುರುಹಾಗಿ ಉಳಿದಿತ್ತು. ನಾರಾಯಣನ ಈ ಬಗೆಯ ನಡತೆಯಿಂದ, ಆತ ಸಾಕ್ಷಾತ್ ಮಾರುತಿಯ ಅವತಾರವೆಂದು ಕೌತುಕದಿಂದ ಹೇಳಲಾಗುತ್ತಿತ್ತು.

ಸಮಾಕಾಲ ಸಂಗಡಿಗರನ್ನು ಸೇರಿಸಿಕೊಂಡು ಆಡುತ್ತಿರುವುದು, ಕಾಡುಮೇಡು ಗಳನ್ನು ಸುತ್ತುವುದು ಹೀಗೆ ಈ ಬಗೆಯ ಪ್ರವೃತ್ತಿಯಿಂದ ಮನೆಯ ಯಾವ ಕೆಲಸ ವಲ್ಲಿಯೂ ನಾರಾಯಣನ ಗಮನವಿರುತ್ತಿರಲಿಲ್ಲ. ಮನೆಯಲ್ಲಿ ಒಂದರ್ಧ ಕೆಲಸವಿದ್ದರೆ ಅದಕ್ಕಾಗಿ ನಾರಾಯಣ ಉಪಯೋಗವಾಗಬಹುದೆಂಬ ಭರವಸೆ ತಾಯಿಗೆ ಎಂದೂ ಇರುತ್ತಿರಲಿಲ್ಲ. ಒಮ್ಮೆ ಮನೆಯಲ್ಲಿ ಯಾವುದೋ ಧಾರ್ಮಿಕ ಕಾರ್ಯವಿತ್ತು. ಬಹಳಷ್ಟು ಜನರು ಊಟಕ್ಕೆ ಬರುವವರಿದ್ದರು. ಸಹಜವಾಗಿ ರಾಣೂಬಾಯಿ ನಾರಾಯಣನಿಗೆ ಹೇಳಿದರು : "ನಾರೋಬಾ, ನಾಳೆ ಮನೆಯಲ್ಲಿ ಊಟವಿದೆ. ಮಜ್ಜಿಗೆ ಬೇಕಾಗಬಹುದು. ಆದರೆ ನಿನಗೆ ಹೇಳಿ ಏನು ಪ್ರಯೋಜನ ?" ಈ ಉದ್ಗಾರವನ್ನು ಕೇಳಿದ ಬಳಿಕ ನಾರಾಯಣನು ಏನೂ ಹೇಳಲಿಲ್ಲ. ಆದರೆ ಅಲ್ಲಿಂದ ಎದ್ದು ಗ್ರಾಮದ ಕುಂಬಾರರ ಮನೆಗೆ ಹೋದನು. ಅವರಿಂದ ಹತ್ತು-ಹನ್ನೆರಡು ಗಡಿಗೆಗಳನ್ನು ಆತ ಬೇಡಿ ಪಡೆದನು. ಸಾಯಂಕಾಲ ಆ ಗಡಿಗೆಗಳನ್ನು ತನ್ನ ಪರಿಚಿತರ ಬೇರೆ ಬೇರೆ ಮನೆ ಗಳಿಗೆ ಹೋಗಿ ಇಟ್ಟನು. "ನಾಳೆ ಮುಂಜಾನೆ ಮಜ್ಜಿಗೆ ಬೇಕು" ಎಂದು ಪ್ರತಿ ಮನೆ ಯಲ್ಲಿ ಹೇಳಿದನು. ಮರುದಿನ ಬೆಳಿಗ್ಗೆ ತೀರ ನಸುಕಿನಲ್ಲಿ ಆ ಎಲ್ಲ ಮನೆಗಳಿಗೆ ಮತ್ತೆ ಹೋಗಿ ನಾರಾಯಣನು ಆ ಗಡಿಗೆಗಳನ್ನು ಸಂಗ್ರಹಿಸಿದನು. ಮೆಲ್ಲಗೆ ತಮ್ಮ ಅಡುಗೆ ಮನೆಯಲ್ಲಿ ತಂದಿಟ್ಟನು. ರಾಣೂಬಾಯಿ ಎದ್ದ ಬಳಿಕ ನೋಡುತ್ತಾರೆ, ಎಲ್ಲ ಕಡೆಗೆ ಮಜ್ಜಿಗೆ ತುಂಬಿದ ಗಡಿಗೆಗಳೇ.

ಒಮ್ಮೆ ಹೀಗೆಯೇ ಯಾವುದೋ ಕೆಲಸದ ನಿಮಿತ್ತ, ಯಾರೋ ಗ್ರಾಮಾಧಿಕಾರಿ ಸೂರ್ಯಾಜಿ ಪಂತರ ಭೇಟಿಗಾಗಿ ಬಂದಿದ್ದರು. ಆಗವರು ಪೂಜಾಕಾರ್ಯದಲ್ಲಿ ಮಗ್ನ ರಾಗಿದ್ದರು. ಆದುದರಿಂದ ಆ ಅಧಿಕಾರಿ ಹಾಗೇ ನಿಲ್ಲಬೇಕಾಯಿತು. ಅವರು ಸಹಜ ವಾಗಿ, "ಮನೆಯಲ್ಲಿ ಅಧ್ಯಾತ್ಮ ನಡೆದಿದೆ. ಆದರೆ ಹೊರಗೆ ಯಾರಾದರೂ ಭೇಟಿಗಾಗಿ ಬಂದರೆ ಕೂಡಲು ಕೋಣೆಯಿಲ್ಲ. ಸಾದಾ ಕೂಡುವ ಸ್ಥಳವೂ ಇಲ್ಲ" ಎಂದು ಅಂದರು. ಇದು ಕಿವಿಗೆ ಬಿದ್ದ ಕೂಡಲೇ ನಾರಾಯಣನು ತನ್ನ ಸ್ನೇಹಿತರನ್ನು ಸೇರಿಸಿದನು. ಅವರೆಲ್ಲರ ಸಹಾಯ ಪಡೆದು ಅರಣ್ಯದಿಂದ ಮರಗಳ ಕಟ್ಟಿಗೆ ಕಡಿದು ತಂದನು. ಇಡೀ ರಾತ್ರಿ ಗೋಡೆಗಳನ್ನು ಸಿದ್ಧಪಡಿಸಿದನು. ಆ ಅಧಿಕಾರಿ ಮರುದಿನ ಮತ್ತೆ ಬಂದಾಗ, ಕೂಡಲು ಒಂದು ಕೋಣೆ ಸಿದ್ಧವಾಗಿತ್ತು. ತೊಂದರೆಯ ಪ್ರಸಂಗಗಳಲ್ಲಿ ಸಹಾಯ ಸಲ್ಲಿಸುವ ಮತ್ತು ಮನೆಯಲ್ಲಿ ಅವಶ್ಯವಿದ್ದ ಕೆಲಸಗಳನ್ನು ನಿರ್ವಹಿಸುವ ಅದ್ಭುತ ಸಾಮರ್ಥ್ಯ ನಾರಾಯಣನಲ್ಲಿತ್ತು. ಆದರೆ ಇವುಗಳನ್ನು ಮಾಡಲು ಒಂದು ಬಗೆಯ ಸಾಹಸಬೇಕೆಂಬುದು ಇದರಿಂದ ಕಂಡುಬರುತ್ತದೆ.

ಹೀಗೆಯೇ ಒಮ್ಮೆ, "ನಾರೋಬಾ, ನೀ ಎಂದು ಜಾಣನಾಗುವಿ ?" ಎಂದು ತಾಯಿ ಕೇಳಿದರು. "ಅಮ್ಮಾ, ಜಾಣತನ ಎಂದರೇನು ?" ಎಂದು ನಾರಾಯಣನು ಪ್ರಶ್ನಿಸಿದನು. ಅತೀ ಆಳವಾದ ಪ್ರಶ್ನೆ ಇದಾಗಿತ್ತು. ಆದರೆ ತಾಯಿ, "ಗಂಡಸರು ಧನ ಧಾನ್ಯ ಸಂಗ್ರಹಿಸಿ ಮನೆಗೆ ತಂದರೆ, ಅವರನ್ನು ಜಾಣ ಎಂದೆನ್ನುತ್ತಾರೆ" ಎಂದು ವ್ಯಾವ ಹಾರಿಕವಾಗಿ ಉತ್ತರಿಸಿದರು. ಮರುದಿನ ನಾರಾಯಣನು ಒಬ್ಬ ರೈತನ ಹೊಲಕ್ಕೆ

ಹೋದನು. ಆತನ ಹೊಲದಿಂದ ಒಂದು ಕಾಲು ಮಣ ಧಾನ್ಯದ ಮೂಟೆಯನ್ನು ಹೆಗಲ ಮೇಲೆ ಹೊತ್ತುಕೊಂಡು ಓಡೋಡುತ್ತ ಮನೆಗೆ ಬಂದನು. ತನ್ನ ಬುದ್ಧಿವಂತಿಕೆಯ ಈ ಬಗೆಯ ಸಾಕಷ್ಟು ಪ್ರಮಾಣವನ್ನು ಮಗನು ಎದುರು ತಂದಿಟ್ಟಾಗ, ತಾಯಿ ಚಕಿತಳಾಗಿರಬಹುದು. ಧಾನ್ಯದ ಒಡೆಯನಾದ ರೈತನು ಬೆನ್ನ ಹಿಂದೆಯೇ ಅಲ್ಲಿಗೆ ಬಂದಿದ್ದು ಸ್ವಾಭಾವಿಕ. ರಾಣೂಬಾಯಿ ಯಾವ ಬಗೆಯಿಂದ ಆತನಿಗೆ ತಿಳಿಹೇಳಿದಳೆಂಬುದನ್ನು ನಾವು ಊಹಿಸಬಹುದು. ಹಳೆಯ ಚರಿತ್ರೆ ಗ್ರಂಥಗಳಲ್ಲಿ ಈ ಕಥೆಗೆ ಪವಾಡದ ಸ್ವರೂಪ ಕೊಟ್ಟಿದ್ದಾರೆ. ಆ ರೈತನು ಅಲ್ಲಿಂದ ಎಷ್ಟು ಮೂಟೆ ತುಂಬಿ ಧಾನ್ಯ ಎತ್ತುತ್ತಿದ್ದನೋ, ಒಂದು ಮೂಟೆ ಆ ಸ್ಥಳದಲ್ಲಿ ಇದ್ದೇ ಇರುತ್ತಿತ್ತೆಂದು ವರ್ಣಿಸಲ್ಪಟ್ಟಿದೆ. ಅದನ್ನೂ ಗಮನಕ್ಕೆ ತೆಗೆದುಕೊಳ್ಳುವ ಕಾರಣವಿಲ್ಲ.

ಆದರೆ ಚಮತ್ಕಾರವೆಂದು ಭಾವಿಸುವ, ಬುದ್ಧಿಯ ತೀಕ್ಷ್ಣತೆಯನ್ನು ತೋರುವ ಮತ್ತು ಸಮರ್ಥರು ಮುಂದೆ ತಮ್ಮ ಬದುಕಿನಲ್ಲಿ ಮಾಡಿದ ಅಲೌಕಿಕ ಕಾರ್ಯದ ತಿಳಿವಳಿಕೆಯ ಪೂರ್ವ ಸೂಚನೆ ಕೊಡುವ ಒಂದು ಪ್ರಸಂಗವು ಅನೇಕ ಗ್ರಂಥಗಳಲ್ಲಿ ವರ್ಣಿತವಾಗಿದೆ. ಅದರ ಉಲ್ಲೇಖವನ್ನು ಮಾಡಲೇಬೇಕು. ನಾರಾಯಣನು ಯಾವಾಗಲೂ ಕಾಡುಮೇಡುಗಳನ್ನು ಸುತ್ತುವುದು ಮತ್ತು ಮನೆಯ ಸುತ್ತ ಅಲಕ್ಷ್ಯ ಮಾಡುವುದು ನಡೆದೇ ಇತ್ತು. ಈ ವಿಷಯದ ಬಗೆಗೆ ರಾಣೂಬಾಯಿ ತಮ್ಮ ಕೋಪವನ್ನು ವ್ಯಕ್ತಪಡಿಸುತ್ತ, "ನಾರೋಬಾ, ಮನೆಯತ್ತ ನಿನಗೆ ಯಾವಾಗಲೂ ಚಿತ್ತವಿಲ್ಲ. ಸದಾಕಾಲ ನೀನು ಹೊರಗೆ ತಿರುಗಾಡುವದೇನೂ ಒಳ್ಳೆಯದಲ್ಲ. ಗಂಡಸರಿಗೆ ಒಂದಿಷ್ಟು ಸಂಸಾರದ ಚಿಂತೆ ಇರಬೇಕಾಗುತ್ತದೆ" ಎಂದು ಒಮ್ಮೆ ಆತನಿಗೆ ಹೇಳಿದರು. ಇದನ್ನು ಕೇಳಿ ನಾರಾಯಣನು ಎದ್ದು, ಒಂದು ಕತ್ತಲೆಯ ಕೋಣೆಯಲ್ಲಿ ಹೋಗಿ ಕುಳಿತುಕೊಂಡನು. ಇತ್ತ ರಾಣೂಬಾಯಿ ತಮ್ಮ ಕೆಲಸದಲ್ಲಿ ತೊಡಗಿದರು. ಅವರಿಗೆ ಯಾವ ಕಲ್ಪನೆಯೂ ಇರಲಿಲ್ಲ. ಬಹಳಷ್ಟು ವೇಳೆ ಕಳೆಯಿತು. ಸಂಜೆಯಾಯಿತು. ನಾರಾಯಣನು ಎಲ್ಲಿಯೂ ಕಾಣಲಿಲ್ಲ. ಹುಡುಕಾಟ ಆರಂಭವಾಯಿತು. ಆತನ ನಿತ್ಯದ ಸ್ಥಳಗಳನ್ನು ನೋಡಲಾಯಿತು. ಕಾಡಿನಲ್ಲಿ ಶೋಧಿಸಲಾಯಿತು. ಆದರೆ ಆತನು ಎಲ್ಲಿಯೂ ಸಿಗಲಿಲ್ಲ. ರಾಣೂಬಾಯಿ ಚಿಂತೆಯಲ್ಲಿ ಮುಳುಗಿದರು. ಹುಡುಗ ಎಲ್ಲಿ ಹೋದ? ಆತ ತನ್ನ ಮಾತನ್ನು ಮನಸ್ಸಿಗೆ ಹಚಿಕೊಂಡನೇನೋ! ಸ್ವಲ್ಪ ವೇಳೆಯಲ್ಲಿ ಸಹಜವಾಗಿ ಯಾವುದೋ ಕೆಲಸದ ನಿಮಿತ್ತ ನಾರಾಯಣ ಕುಳಿತ ಕೋಣೆಗೆ ಹೋದರು. ಆದರೆ ಕತ್ತಲಲ್ಲಿ ಕಾಲುತಾಕಿ ಭಯಪಟ್ಟರು, ನೋಡಿದರೆ ಮಗ ಅಲ್ಲಿಯೇ ಕುಳಿತಿದ್ದಾನೆ.

ಆತನಿಗಾಗಿ ಇಡೀ ಗ್ರಾಮವನ್ನು ಶೋಧಿಸುತ್ತಿರುವಲ್ಲಿ, ಆತನೇ ಇಲ್ಲಿ ಕತ್ತಲೆ ಕೋಣೆಯಲ್ಲಿ ಕುಳಿತು ಏನನ್ನು ಮಾಡುತ್ತಿರಬಹುದೆಂಬುದು ರಾಣೂಬಾಯಿಯ ಗಮನಕ್ಕೆ ಬಂದಿರಲಿಲ್ಲ. "ಎಲಾ, ಇಲ್ಲಿ ಕುಳಿತು ಏನನ್ನು ಮಾಡುತ್ತಿರುವಿ?" ಎಂದು ಕೇಳಿದರು. "ಅಮ್ಮಾ, ಜಗತ್ತಿನ ಚಿಂತೆ ಮಾಡುತ್ತಿರುವೆನು" ಎಂದು ನಾರಾಯಣನು ಉತ್ತರಿಸಿದನು. ಇಷ್ಟು ಹೇಳುವುದರಲ್ಲಿ, ನಾರಾಯಣನನ್ನು ಹುಡುಕುತ್ತ ಹೊರಗೆ

ಕೊಂಡರೂ ಕೂಡ ಬೇಗ ಓದಲಿಲ್ಲ. ಸೇರಿದ ಎಲ್ಲ ಜನರು ಹೋದ ಬಳಿಕ ಅವರು ಆ ಪತ್ರವನ್ನು ಓದಿದರು. ಆ ಪತ್ರವನ್ನು ಓದಿದ ಕೂಡಲೇ ಸೂರ್ಯಾಜಿಪಂತರಿಗೆ ಶಾಶ್ವತ ಸಮಾಧಿ ಸ್ಥಿತಿ ಒದಗಿತೆಂದು ಅನಂತರದ ಕಥೆ ಹೇಳುತ್ತದೆ. ಅವರು ಆ ಸಮಾಧಿ ಸ್ಥಿತಿಯಿಂದ ಎಚ್ಚರವಾಗಲೇ ಇಲ್ಲ. ಇದರರ್ಥ, ತಾತ್ಕಾಲಿಕವಾಗಿ ಅವರ ದೇಹಾವಸಾನವಾಯಿತು. ಆ ಪತ್ರವನ್ನು ಓದಿದ ಬಳಿಕ ಗಂಗಾಧರನ ಬುದ್ಧಿಯೂ ಮಂಕಾಯಿತು. ಆದರೆ ಆತ ಒಂದಿಷ್ಟು ಸಮಯ ಕಳೆದ ಬಳಿಕ ಮರಳಿ ಪ್ರಜ್ಞೆಯನ್ನು ಪಡೆದನು. ಆ ಪತ್ರದ ಪರಿಣಾಮವು ಆತನ ಮನಸ್ಸಿನ ಮೇಲೆ ಹೀಗೆ ಆಯಿತು. ಇದರಿಂದ ಆತನು ತನ್ನ ಲೆಕ್ಕಣಿಕೆಯನ್ನು ದೇವರಿಗೆ ಅರ್ಪಿಸಿಬಿಟ್ಟನು. ಶಾನುಭೋಗ ವೃತ್ತಿಯನ್ನು, ಅಂದರೆ ಸರಕಾರಿ ನೌಕರಿಯನ್ನು ಅನಂತರ ಆತ ಮಾಡಲಿಲ್ಲ. ಆತನ ವಯಸ್ಸು ಆ ಸಮಯ ಕೇವಲ ಹದಿಮೂರು, ಹದಿನಾಲ್ಕು ವರ್ಷಗಳಿರಬಹುದು. ಈ ಎಲ್ಲ ಘಟನೆಗಳ ಪರಿಣಾಮವು ನಾರಾಯಣನ ಮೇಲೆ ಬಹಳಷ್ಟಾಯಿತು. ಆತ ಮೊದಲಿನ ಸ್ಥಿತಿಗೆ ಬರಬೇಕಾದರೆ ಒಂದು ವರ್ಷ ಹಿಡಿಯಿತೆಂದು ದಿನಕರ ಹೇಳಿದ್ದಾರೆ. ಈ ಆಘಾತದಿಂದ ಆತ ಚೇತರಿಸಿಕೊಳ್ಳಬೇಕಾದರೆ ಒಂದು ವರ್ಷ ಕಳೆಯಿತೆಂದು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಆಗಿಹೋದ ಘಟನೆಯ ಪರಿಣಾಮದಿಂದ ಗಂಗಾಧರನು ಸರಕಾರಿ ನೌಕರಿಯನ್ನು ಮಾಡಬಾರದೆಂದು ನಿರ್ಧರಿಸಿದನು. ಅದರಂತೆ ನಾರಾಯಣನು ಸಂಸಾರದ ಬಂಧನದಲ್ಲಿ ಸಿಲುಕಬಾರದೆಂಬ ನಿರ್ಣಯವನ್ನು ತೆಗೆದುಕೊಂಡನೆಂದು ಅರ್ಥಮಾಡಿಕೊಳ್ಳಬೇಕೆ? ಇದಾದ ಬಳಿಕ ಒಂದು ವರ್ಷದಲ್ಲಿ ಆತ ಮನೆಬಿಟ್ಟು ಹೊರಟು ಹೋದನು.

ದಿನಕರರು ಈ ವಸ್ತುಸ್ಥಿತಿಯನ್ನು ಹೀಗೆ ಕೆಲವು ರೂಪಕಗಳ ಆಧಾರದಿಂದ ಮತ್ತೆ ಕೆಲವು ಅದ್ಭುತಗಳ ಸಮ್ಮಿಶ್ರಣದಿಂದ ಏಕೆ ಹೇಳಿದರೆಂಬ ಪ್ರಶ್ನೆ ಏಳದಿರುವುದಿಲ್ಲ. ಅಧ್ಯಯನ ಮಾಡಿದವರು ಈ ಕಥೆಯ ಅರ್ಥವನ್ನು ಹೀಗೆ ಮಾಡಿದ್ದಾರೆ. ಆ ಪತ್ರದಿಂದ ಯಾವುದೋ ಬಹುದೊಡ್ಡ ಸರಕಾರಿ ಆರೋಪವು ಸೂರ್ಯಾಜಿಪಂತರ ಮೇಲೆ ಬಂದಿರಬೇಕು. ಆ ಆಘಾತದಿಂದ ಅವರಿಗೆ ಮೃತ್ಯು ಒದಗಿರಬೇಕು. ನಾರಾಯಣನ ಎಳೆಯ ವಯಸ್ಸಿನ ಮೇಲೆ ಕೂಡ ಅಂಥ ಆಘಾತ ಒದಗಿ ಆತ ಅದರಿಂದ ಚೇತರಿಸಿಕೊಳ್ಳಬೇಕಾದರೆ ಒಂದು ವರ್ಷ ಹಿಡಿಯಿತು. ಇಂಥ ಬೇರೆ ಸಂಕಟಗಳು ಬರಬಹುದೆಂದು ಆತನಿಗೆ ಅನ್ನಿಸಿರಬಹುದಾದ ಸಾಧ್ಯತೆಯಿದೆ. ಮನೆಯಲ್ಲಿಯ ಸಂಸ್ಕಾರದಿಂದಾಗಲಿ ಇಲ್ಲವೆ ವ್ಯಕ್ತಿತ್ವದ ಮೂಲಭೂತ ಸುಪ್ತ ಪ್ರೇರಣೆಯಿಂದಾಗಲಿ, ಈಶ್ವರನ ಶೋಧಕ್ಕಾಗಿ ತನ್ನ ಮನೆಮಾರನ್ನು ತ್ಯಾಗಮಾಡಬೇಕೆಂದು ಆತ ನಿರ್ಧರಿಸಿರಬಹುದು. ಮರು ವರ್ಷವೇ ಆತ ಮನೆಯನ್ನು ತ್ಯಜಿಸಿ ಹೋಗಿರಬಹುದು, ಎಂದು ಹೀಗೆ ತರ್ಕಿಸಲು ಸಾಧ್ಯವಿದೆ. ನಿಶ್ಚಯವಾಗಿ ಏನೂ ಹೇಳಲಾಗುವುದಿಲ್ಲ. ಹನ್ನೆರಡನೆಯ ವರ್ಷಕ್ಕೆ ಮನೆಯಿಂದ ಹೋಗಬೇಕಾದರೆ ಯಾವುದಾದರೂ ತಾತ್ಕಾಲಿಕ ಕಾರಣವು ಒದಗಿರಬೇಕೆಂಬುದು ಕೂಡ ಅಷ್ಟೇ ಸತ್ಯಸಂಗತಿಯಾಗಿದೆ. ನಾರಾಯಣನು ಹುಡುಗಾಟಿಕೆಯವನಿದ್ದನು, ಮನಬಲ್ಲಂತೆ ವರ್ತಿಸುವವನಾಗಿದ್ದನು ಮತ್ತು ಬುದ್ಧಿವಂತನಾಗಿ

ದ್ದನು. ಯಾವುದೇ ಕೆಲಸವನ್ನಾಗಲಿ ತತ್‌ಕ್ಷಣ ಮಾಡುವವನಾಗಿದ್ದನು, ಹಾಗೆ ವರ್ತಿಸಲು ಒಂದು ಬಗೆಯ ಸಾಹಸವಿತ್ತೆಂದು ಎಲ್ಲ ಚರಿತ್ರಕಾರರು ಈ ವರ್ಣನೆಯನ್ನು ಮಾಡಿದ್ದಾರೆ. ಪಾರಮಾರ್ಥದ ಪ್ರೇರಣೆಗೆ ಈ ಸಂಬಂಧವನ್ನು ಜೋಡಿಸಲಾಗದು. ಅದಕ್ಕಾಗಿ ಮೇಲೆ ವಿವರಿಸಿದ ಘಟನೆಗಳು ಶೋಧ ಮಾಡಲು ಬರುವಂತಿವೆ.

ಇಂಥ ಒಂದಿಷ್ಟು ಪ್ರಸಂಗದಿಂದ ನಾರಾಯಣನ ಮನಸ್ಸು ಅಂತರ್ಮುಖವಾಗಿದ್ದು ಮತ್ತು ಸಂಪೂರ್ಣ ಬದಲಿಸಿದ್ದು ಮಾತ್ರ ಸಾಧ್ಯವಿದೆ. ಅಂಥ ಕೆಲವು ಸಂಕೇತಗಳು ಆತನ ಆಯುಷ್ಯದಲ್ಲಿ ದೊರೆಯುತ್ತವೆ. ಠೋಸರ ಮನೆತನದಲ್ಲಿ ಹಿರಿಯರು ಮಕ್ಕಳನ್ನು ಅನುಗ್ರಹಿಸುವ ಪದ್ಧತಿ ರೂಢಿಯಲ್ಲಿತ್ತು. ಸೂರ್ಯಾಜಿಪಂತರು ಗಂಗಾಧರನಿಗೆ ಅನುಗ್ರಹವನ್ನು ಕೊಟ್ಟರು. ಆ ಸಮಯ ತಂದೆ ತನ್ನನ್ನೂ ಅನುಗ್ರಹಿಸಬೇಕೆಂದು ಹಟ ಹಿಡಿದಿದ್ದನು. ಆದರೆ ಆತನ ವಯಸ್ಸು ಬಹಳ ಕಡಿಮೆಯಿತ್ತು. ಇದರಿಂದಾಗಲಿ ಇಲ್ಲವೆ ಬೇರೆ ಕಾರಣದಿಂದಾಗಲಿ ಸೂರ್ಯಾಜಿಪಂತರು ಆ ಸಮಯ ಆತನ ಹಟವನ್ನು ಪೂರೈಸಿರಲಿಲ್ಲ. ಸೂರ್ಯಾಜಿಪಂತರ ನಿಧನವಾದ ಬಳಿಕ ಅನುಗ್ರಹಿಸುವ ಕಾರ್ಯವನ್ನು ಗಂಗಾಧರನು ಮಾಡತೊಡಗಿದನು. ತನಗೆ ಅನುಗ್ರಹ ದೊರೆಯಬೇಕೆಂದು ಒಮ್ಮೆ ನಾರಾಯಣನು ಆತನಿಗೆ ಹೇಳಿದನು. ಆದರೆ "ನೀನಿನ್ನೂ ಚಿಕ್ಕವ. ಈಗಲೇ ಅವಸರ ಮಾಡಬೇಡ" ಎಂದು ಗಂಗಾಧರನು ತಮ್ಮನಿಗೆ ತಿಳಿಹೇಳಿದನು. ತಂದೆ ಬೇಡವೆಂದು ಹೇಳಿದ್ದರು. ಆದರೆ ಈತ ತನಗಿಂತ ಎರಡು, ಎರಡೂವರೆ ವರ್ಷ ಹಿರಿಯವನಾದ ಅಣ್ಣನು ಕೂಡ ತನ್ನ ಬಯಕೆಯನ್ನು ಪೂರೈಸದಿರುವುದನ್ನು ಕಂಡು ನಾರಾಯಣನು ಅತೀವ ನೋವಿಗೀಡಾದನು. ಆತ ಅನ್ಯಮನಸ್ಕನಾಗಿ ಗ್ರಾಮದ ಅಗಸೆ ಹತ್ತಿರದ ಮಾರುತಿ ದೇವಾಲಯದಲ್ಲಿ ಹೋಗಿ ಕುಳಿತನು.

ಕಥೆಯ ಮುಂದಿನ ವಿವರಣೆ ಈ ರೀತಿಯದಿದೆ: ಅಲ್ಲಿ ದೇವರೆದುರು ಧರಣಿ ಹೂಡಿ ಕುಳಿತ ನಾರಾಯಣನಿಗೆ ದಣಿವಾದಂತಾಗಿ ನಿದ್ರೆ ಆವರಿಸಿತು. ನಡುರಾತ್ರಿಯಲ್ಲಿ ಪ್ರತ್ಯಕ್ಷ ರಾಮಚಂದ್ರ ಪ್ರಭು ಆತನಿಗೆ ಮಂತ್ರೋಪದೇಶ ಮಾಡಿ ಮಾರುತಿಯನ್ನು ಸ್ವಾಧೀನಪಡಿಸಿದನು. ಅದು ಶಕೆ 1538ರ ಶ್ರಾವಣ ಶುದ್ಧ ಅಷ್ಟಮಿಯ ಮಧ್ಯರಾತ್ರಿಯಾಗಿತ್ತು. ಹಳೆಯ ಚರಿತ್ರೆ ಗ್ರಂಥಗಳಿಂದ ಈ ವಿವರಣೆಯು ತಿಳಿದು ಬರುತ್ತದೆ. ಇತರ ಘಟನೆಗಳ ವಿವರಗಳ ತಿಥಿಗಳು ಕೂಡುವುದಿಲ್ಲ. ಆಗ ಇದನ್ನು ಬದಿಗೆ ಸರಿಸಬೇಕು. ಆದರೆ ಮೊದಲು ತಂದೆ, ಅನಂತರ ಅಣ್ಣ ನಿರಾಶೆಗೊಳಿಸಿದ ಬಳಿಕ ಮಾರುತಿಯ ಚರಣದಡಿಯಲ್ಲಿ ಬಂದು ಕುಳಿತ. ಮನಸ್ವೀ ಪ್ರವೃತ್ತಿಯ ನಾರಾಯಣನಿಗೆ, ತನಗೀಗ ದೇವರದೊಂದೇ ಆಧಾರ, ಆತನ ಶೋಧವನ್ನು ತಾನು ಮಾಡಲೇಬೇಕೆಂದು ಭಾವನೆಯಾಗಿರಬೇಕು. ದೇವರ ದರ್ಶನವನ್ನು ಪಡೆಯಬೇಕಾದರೆ ಪುರಾಣಗಳಲ್ಲಿ ಹಾಗೂ ಇತರ ಧಾರ್ಮಿಕ ಗ್ರಂಥಗಳಲ್ಲಿ ವರ್ಣಿಸಿದಂತೆ, ಸಂಸಾರ ಮತ್ತು ಮನೆಮಾರನ್ನು ತ್ಯಾಗಮಾಡಬೇಕಾಗುವುದೆಂಬ ಸಂಗತಿಯು ನಾರಾಯಣನ ಮನಸ್ಸಿನಲ್ಲಿ ಬಂದಿರುವುದು ಸಾಧ್ಯವಿದೆ. ಹೀಗೆ ಯಾವುದೇ ನಿರ್ಧಾರವನ್ನು ಮಾಡಿದಾಗ ಅವನ ಮನೋವೃತ್ತಿಯು ಬದಲಾಗಿರಬೇಕೆಂದು ಊಹಿಸಬಹುದು.

ಪ್ರಪಂಚವನ್ನು ತ್ಯಾಗಮಾಡುವ ಸಮಯ ಬೇಗ ಒದಗಿಬಂದಿತು. ಜನರೂಢಿಯಂತೆ ನಾರಾಯಣನ ವಿವಾಹವನ್ನು ಮಾಡಬೇಕೆಂಬ ವಿಚಾರ ರಾಣೂಬಾಯಿಯ ಮನಸ್ಸಿನಲ್ಲಿ ಬಂದಿರಬೇಕು. ಹೀಗೆ ಮೇಲಿಂದ ಮೇಲೆ ಆಕೆ ಮಾತನಾಡಿಯೂ ತೋರಿಸಿರಬೇಕು. ಆ ವೇಳೆಗೆ ಗಂಗಾಧರನ ಲಗ್ನವಾಗಿತ್ತು. ಮಕ್ಕಳ ತಂದೆಯಂತೂ ಸ್ವರ್ಗಸ್ಥರಾಗಿದ್ದರು. ಚಿಕ್ಕ ಮಗನ ಲಗ್ನ ಮಾಡುವುದು ತನ್ನ ಹೊಣೆಯೆಂಬುದು ರಾಣೂಬಾಯಿಗೆ ಸ್ವಾಭಾವಿಕವಾಗಿ ಅನ್ನಿಸುತ್ತಲಿತ್ತು. ಈ ದೃಷ್ಟಿಯಿಂದ ಹಿರಿಯ ಮಗನೊಡನೆ ಆಕೆ ಏನಾದರೂ ಮಾತನಾಡುತ್ತಿರಬೇಕು. ಅದು ನಾರಾಯಣನ ಕಿವಿಗೆ ಬಿದ್ದಿರಬೇಕು. ಆತನ ಮನಸ್ಸು ಮಾತ್ರ ಬೇರೆ ಮಾರ್ಗವನ್ನು ಅನುಸರಿಸಿತ್ತು. ಆದರೆ ತಾಯಿಯ ಅಂತಃಕರಣವು ಆತನ ಭಾವನೆಗಳನ್ನು ತಿಳಿಯಲು ಸಾಧ್ಯವಿರಲಿಲ್ಲ. ತಮ್ಮ ಈ ಹಟಮಾರಿ ಹುಡುಗನ ಕಾಲಿಗೆ ಸಂಸಾರದ ಬಂಧನವು ಬಿದ್ದರೆ ಸರಿಯಾದ ದಾರಿಗೆ ಬರುವನೆಂದು ರಾಣೂಬಾಯಿಯ ಮನಸ್ಸಿನಲ್ಲಿರಬೇಕು. ಆದರೆ ವಿವಾಹದ ಮಾತನ್ನು ತೆಗೆದ ಕೂಡಲೇ ನಾರಾಯಣನು ಅದನ್ನು ಹಾರಿಸಿಬಿಡುತ್ತಿರುವುದು ಆಕೆಗೆ ಕಂಡು ಬಂದಿತು. ಒಮ್ಮೆ ಅದಾರೋ ಲಗ್ನದ ಸಂಬಂಧವಾಗಿ ವಿಷಯವನ್ನು ಎತ್ತಿದಾಗ ನಾರಾಯಣನು ಊರ ಹೊರಗೆ ಹೋಗಿ ನದೀ ತೀರದ ಒಂದು ಎತ್ತರವಾದ ಗಿಡವನ್ನೇರಿ ಕುಳಿತನು. ಜನರು ಕರೆಯಲು ಹೋದರು. ಕೆಳಗಿಳಿಯುವಂತೆ ಆತನಿಗೆ ತಿಳಿಹೇಳತೊಡಗಿದರು. ಆದರೆ ಆತ ಒಮ್ಮೆಲೇ ನದಿಯ ಪಾತ್ರಕ್ಕೆ ಹಾರಿದನು. ಬಹಳ ಹೊತ್ತು ಮೇಲಕ್ಕೆ ಬರಲೇ ಇಲ್ಲ. ಕೊನೆಗೆ ಅಣ್ಣ ಗಂಗಾಧರನು ಅತ್ತ ಬಂದು ಹೇಳಿದ ಬಳಿಕ ಹೊರಬಂದನು. ಆತನಿಗೆ ತಿಳಿ ಹೇಳಿ ಮನೆಗೆ ಕರೆತಂದನು. ನದಿಯಲ್ಲಿ ಕಲ್ಲು ತಾಗಿ ನಾರಾಯಣನ ಕೆನ್ನೆಗೆ ಗಂಟು ಎದ್ದಿತ್ತು. ಅದೇ ಮುಂದೆ ಆಜನ್ಮಪರ್ಯಂತ ಇತ್ತು ಎಂಬ ಸಂಗತಿಯು ಇದೇ ಸಮಯದಲ್ಲಿ ನಡೆದದ್ದು ಎಂದು ಕೆಲವು ಜನ ಚರಿತ್ರಕಾರರು ಹೇಳಿದ್ದಾರೆ.

ಲಗ್ನದ ಮಾತು ತೆಗೆದರೆ ನಾರಾಯಣನು ಅತ್ತ ಗಮನವೀಯುತ್ತಿಗಲಿಲ್ಲ. ಹೀಗೆ ತಿರುಗಿ ಏನಾದರೂ ಅಸಡ್ಡೆ ಮಾಡುವುದನ್ನು ಕಂಡು ರಾಣೂಬಾಯಿ ಭಯಪಟ್ಟರು. ನಾರಾಯಣನ ಮನಸ್ಸನ್ನು ಸ್ವಲ್ಪಮಟ್ಟಿಗೆ ಗಂಗಾಧರನು ಅರಿತಿದ್ದನೆಂದು ಗೊತ್ತಾಗುತ್ತದೆ. ಇಬ್ಬರೂ ಸಹೋದರರ ವಯಸ್ಸಿನಲ್ಲಿ ಬಹಳಷ್ಟು ಅಂತರವಿರಲಿಲ್ಲ. ಪರಸ್ಪರ ವಿಚಾರ ವಿಮರ್ಶೆ ಮಾಡುವುದು ಸ್ವಾಭಾವಿಕ. ಆದ್ದರಿಂದ ನಾರಾಯಣನ ಪ್ರವೃತ್ತಿ ಗಂಗಾಧರನ ಅರಿವಿಗೂ ಬಂದಿರಬೇಕು. ನಾರಾಯಣನ ಮನಸ್ಸು ವಿವಾಹಕ್ಕೆ ಅನುಕೂಲ ಕಾಣದು, ಆ ಬಗೆಗೆ ವಿಚಾರಿಸಬಾರದೆಂದು ಆತ ರಾಣೂಬಾಯಿಗೆ ಸೂಚಿಸಿದ್ದನು. ಆದರೆ ಆ ಮಾತೃಹೃದಯವು ಇದಕ್ಕೆ ಹೇಗೆ ಮೌನ ತಳೆಯಬಹುದು ? ಒಂದು ದಿನ ರಾಣೂಬಾಯಿ, ನಾರಾಯಣನನ್ನು ಹತ್ತಿರ ಕೂಡಿಸಿಕೊಂಡು, "ನಾರೋಬಾ, ನಾ ಹೇಳುವ ಮಾತನ್ನು ನೀ ನಡೆಸಿಕೊಡಲಾರೆಯಾ ? ತಾಯಿಯಂಥ ಬೇರೆ ದೇವರಿಲ್ಲವೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ನನ್ನ ಮಾತನ್ನು ನೀ ಕೇಳುವದಿಲ್ಲವೆ ?" ಎಂದು ತಿಳಿಹೇಳಿಕೆಯ ವಾತ್ಸಲ್ಯದ ಧ್ವನಿಯಲ್ಲಿ ಅಂದರು. ತಾಯಿಯ

ನುಡಿಯನ್ನು ಪಾಲಿಸುವ ವಿಷಯ ಹೊರಟ ಮೇಲೆ ನಾರಾಯಣನ ಮನಸ್ಸು ಒಂದಿಷ್ಟು ಕರಗಿರಬೇಕು. ಮನಸ್ಸಿನ ಮೇಲಾದ ಸಂಸ್ಕಾರದ ಪರಿಣಾಮವೂ ಇರ ಬೇಕು. ಆತನು ತಾಯಿಗೆ ಹೇಳಿದನು : "ಹಾಂ, ಅವಶ್ಯ ಕೇಳುವೆ, ನಿನ್ನ ಮಾತು ಮೀರಿ ನಡೆಯುವುದಿಲ್ಲ." ಆಗ ರಾಣೂಬಾಯಿ, "ಲಗ್ನದ ಮಾತು ತೆಗೆದ ಕೂಡಲೇ ನೀನು ಗಮನಿಸುವದಿಲ್ಲ. ಸಿಟ್ಟಿನಿಂದ ಏದಾದರೂ ಮಾಡುವಿ, ಇದು ಸರಿಯಲ್ಲ. ಹೀಗೆ ಮಾಡಬೇಡ. ಅಂತರ್ಪಟ ಹಿಡಿಯುವವರೆಗಂತೂ ಇಲ್ಲವೆಂದು ಅನ್ನಬೇಡ" ಎಂದು ಅಂದರು. "ನಿನ್ನ ಅಪ್ಪಣೆಯಂತಾಗಲಿ" ಎಂದು ನಾರಾಯಣನು ಈ ಮಾತಿಗೆ ಹೇಳಿ ದನು. ಅನಂತರ ಯಾವಾಗಲಾದರೂ ವಿವಾಹದ ವಿಷಯ ಹೊರಟರೆ ಮೊದಲಿನಂತೆ ವಿರೋಧಿಸುವುದನ್ನು ಆತ ಬಿಟ್ಟುಕೊಟ್ಟನು.

ರಾಣೂಬಾಯಿಯವರಿಗೆ ನಿಜವಾಗಿಯೂ ಬಹಳ ಸಂತೋಷವಾಯಿತು. ಅವರು ನಾರಾಯಣನಿಗಾಗಿ ವಧುವನ್ನು ಶೋಧಿಸತೊಡಗಿದರು. ಗಂಗಾಧರನ ಸಹಕಾರವು ತಾಯಿಗೆ ಇದ್ದೇ ಇತ್ತು. ಆದರೆ ಈ ವಿಷಯದಲ್ಲಿ ಆತನ ಮನಸ್ಸು ಸಂದೇಹ ಗೊಂಡಿತ್ತು. ನಾರಾಯಣನು ಮಾತುಕೊಟ್ಟಿದ್ದನೇನೋ ಸರಿ, ಆದರೆ ಯಾವ ಮಾರ್ಗದಿಂದಾದರೂ ತಮ್ಮನು ಆ ಮಾತಿನಿಂದ ಬಿಡುಗಡೆಯ ಯತ್ನವನ್ನು ಮಾಡ ದಿರಲಾರನೆಂದು ಆತನಿಗೆ ಗೊತ್ತಿತ್ತು. ತಾಯಿ ಸೂಚಿಸಿದಂತೆ ಗಂಗಾಧರನು ಪಕ್ಕ ದಲ್ಲಿದ್ದ ಆಸನ ಗ್ರಾಮಕ್ಕೆ ಹೋದನು. ಅಲ್ಲಿ ಆತನ ಸೋದರಮಾವ ಭಾನಜಿಪಂತ ಬೋಧಲಾಪುರಕರ ಇರುತ್ತಿದ್ದರು. ರಾಣೂಬಾಯಿಯ ಮಾತಿಗೆ ಮನ್ನಣೆಯಿತ್ತು ಅವರು ತಮ್ಮ ಮಗಳನ್ನು ನಾರಾಯಣನಿಗೆ ಕೊಡಲು ಒಪ್ಪಿದರು. ವಧುವಿಗಾಗಿ ವರನ ಸ್ಥಳವು ತಾನೇ ತಮ್ಮ ಮನೆಗೆ ಬಂದಿದ್ದು, ಅಲ್ಲದೆ ಸಂಬಂಧದಿಂದ ಹುಡುಗನು ಪರಿಚಿತನೇ ಎಂಬುದು ಆತನಿಗೆ ತಿಳಿದಿರುವುದು ಸ್ವಾಭಾವಿಕ. ಎರಡೂ ಕಡೆಗಳಿಂದ ಲಗ್ನದ ಸಿದ್ಧತೆ ನಡೆಯಿತು. ಸಮಾರಂಭಕ್ಕಾಗಿ ಬೀಗರು, ಆಪ್ತೇಷ್ಟರು ಸೇರಿದರು. ಸೀಮಾಂತ ಪೂಜೆಯಾದ ಬಳಿಕ ವರನನ್ನು ವೈಭವದಿಂದ ವಧುವಿನ ಮನೆಗೆ, ಲಗ್ನ ಮಂಟಪಕ್ಕೆ ಕರೆತಂದರು. ವಧು ಮತ್ತು ವರ ಇವರನ್ನು ಲಗ್ನವೇದಿಕೆಯ ಮೇಲೆ ನಿಲ್ಲಿಸಿ ಪುರೋಹಿತರು ಅಂತರ್ಪಟ ಹಿಡಿದರು. ಅವರು ಮಂಗಲಾಷ್ಟಕವನ್ನು ಪಠಿಸ ತೊಡಗಿದರು.

ಮೊದಲ ಶ್ಲೋಕವು ಮುಗಿದ ನಂತರ ವಧುವರರ ತಲೆಯ ಮೇಲೆ ಅಕ್ಷತೆ ಹಾಕುವ ಸಮಯ ಪುರೋಹಿತರು "ಸಾವಧಾನ....ಸಾವಧಾನ...." ಎಂದು ಅಂದರು. ಅದನ್ನು ಕೇಳಿ "ಈ ಶಬ್ದದ ಅರ್ಥವೇನು ?" ಎಂದು ನಾರಾಯಣನು ತನ್ನ ಹತ್ತಿರ ನಿಂತ ಬೀಗನನ್ನು ವಿಚಾರಿಸಿದನು. ಆತ ಸಹಜವಾಗಿ ವಿನೋದದಿಂದ, "ಒಂದು ಕಾಲು ಮಣ ಭಾರವಾದ ಬಂಧನ ಕಾಲಲ್ಲಿ ಬೀಳುತ್ತಲಿದೆ ಎಚ್ಚರದಿಂದಿರು ಎಂದು ಪುರೋಹಿತ ಹೇಳುತ್ತಿದ್ದಾನೆ" ಎಂದು ಹೇಳಿದನು. ನಾರಾಯಣನು ಮೊದಲಿನಿಂದಲೂ ಎಚ್ಚರ ದಿಂದಲೇ ಇದ್ದನು. ಅಂತರ್ಪಟ ಹಿಡಿಯುವವರೆಗೆ ವಿರೋಧಿಸಬಾರದೆಂದು ತಾಯಿಗೆ ಕೊಟ್ಟ ಮಾತು ಪೂರ್ತಿಯಾಗಿತ್ತು. ಬೀಗರ ಬಾಯಿಂದ ಆ ಮಾತು ಪೂರ್ತಿಯಾಗುವ

ಮೊದಲೇ ನಾರಾಯಣನು ವಾಯುವೇಗದಲ್ಲಿ ಮಂಟಪದಿಂದ ಹೊರಬಿದ್ದನು. ಏನಾಗುತ್ತಲಿದೆ ಎಂದು ಯಾರೂ ತಿಳಿಯುವ ಮೊದಲೇ ಕಾಣದಂತಾದನು. ಎಲ್ಲೆಡೆ ಗಲಿಬಿಲಿ ಉಂಟಾಯಿತು. ಅಕ್ಕಪಕ್ಕದ ಕಾಡುಗಳಲ್ಲಿ, ಹೊಲಗಳಲ್ಲಿ ಎಲ್ಲರೂ ತುಂಬಾ ಶೋಧ ಮಾಡಿದರು. ಆದರೆ ನಾರಾಯಣನು ಸಿಕ್ಕಲಿಲ್ಲ. ರಾಣೂಬಾಯಿಯವರಿಗೆ ಅಪಾರ ದುಃಖವಾಯಿತು. ತನಗೆ ತಿಳಿದಂತೆ ಗಂಗಾಧರನು ತಾಯಿಯನ್ನು ಸಮಾಧಾನಪಡಿಸಿದನು. ಅದೇ ದಿನ ಬೇರೆ ಯೋಗ್ಯ ವರನನ್ನು ಹುಡುಕಿ ಆ ವಧುವಿನ ಲಗ್ನವನ್ನು ಪೂರೈಸಿದರು. ಹೀಗೆ ಹನುಮಂತಸ್ವಾಮಿಯವರ ಬಖೈರಿಯಲ್ಲಿ ಹೇಳಲಾಗಿದೆ.

'ಸಾವಧಾನ' ಎಂಬ ಶಬ್ದ ಕಿವಿಗೆ ಬಿದ್ದ ಕೂಡಲೇ ನಾರಾಯಣನು ಲಗ್ನವೇದಿಕೆಯಿಂದ ಮರೆಯಾದದ್ದು ಅಘಟಿತ ಘಟನೆಯಾಯಿತು. ಅನೇಕ ಮಹಾಪುರುಷರು ಆಗಿಹೋದರು. ಸಾಧುಸಂತರಾದರು. ಅವರಲ್ಲಿ ಅನೇಕರು ಸಂಸಾರವನ್ನು ತ್ಯಜಿಸಿದ್ದರೆ, ಹಲಕೆಲವರು ವೈವಾಹಿಕ ಬಂಧನದಲ್ಲಿ ಸಿಕ್ಕಿಹಾಕಿಕೊಳ್ಳಲಿಲ್ಲ. ಮತ್ತೆ ಕೆಲವರು ಲಗವಾದ ಬಳಿಕ ಪ್ರಬಲ ವೈರಾಗ್ಯದಿಂದ ಪತ್ನಿಯರನ್ನು ತ್ಯಜಿಸಿ ಅರಣ್ಯಗಳಲ್ಲಿ ಆಶ್ರಯ ಪಡೆದರು. ಆದರೆ ಲಗ್ನವೇದಿಕೆಯಿಂದ ವಿವಾಹ ಮಂಟಪ ತ್ಯಜಿಸಿ ಹೊರಟುಹೋದ ಉದಾಹರಣೆ ಎಲ್ಲಿಯೂ ದೊರೆಯಲಾರದೆಂದು ಈ ಪ್ರಸಂಗದ ವಿಶೇಷತೆಯನ್ನು ಸಮರ್ಥರ ಶಿಷ್ಯರು ಮತ್ತು ಭಕ್ತರು ಹೇಳಿದ್ದಾರೆ. ಅವರ ದೃಷ್ಟಿಯಲ್ಲಿ ಇದು ಯೋಗ್ಯವಾಗಿದೆ. ಆದರೆ ವಿವಾಹ ಮಂಟಪದಿಂದ ಹೊರಟುಹೋಗುವ ಈ ಪ್ರಸಂಗವು ಸಮರ್ಥರ ಜೀವನದಲ್ಲಿ ಪ್ರತ್ಯಕ್ಷ ನಡೆದಿದೆಯೋ ಇಲ್ಲವೋ ಈ ವಿಷಯ ಕುರಿತು ಭಿನ್ನಾಭಿಪ್ರಾಯಗಳಿವೆ. ಆದರೆ ಈ ಬಗೆಗೆ ಬೇರೆ ಬೇರೆ ಅಭಿಪ್ರಾಯಗಳಿದ್ದರೂ ಸೂರ್ಯಾಜಿಪಂತರ ಈ ಹುಡುಗನು ಪರಮಾರ್ಥ ಸಾಧನಕ್ಕಾಗಿ ಕೇವಲ ಹನ್ನೆರಡು ವರ್ಷದವನಿದ್ದಾಗ ಮನೆಬಿಟ್ಟು ಹೊರಟು ಹೋದ ಬಗೆಗೆ ಎಲ್ಲ ಚರಿತ್ರಕಾರರ ಒಮ್ಮತವಿದೆ.

ನಾರಾಯಣನ ಬಾಲ್ಯ ಇಲ್ಲಿಗೆ ಮುಗಿಯಿತು. ರಾಮದಾಸ ಆಗುವುದಕ್ಕಾಗಿ ಆತ ಮನೆ-ಮಾರು ತ್ಯಜಿಸಿದನು. ನಾರಾಯಣನು 'ಸಮರ್ಥ'ನಾಗುವ ಪ್ರಕ್ರಿಯೆ ಇಲ್ಲಿಂದ ಪ್ರಾರಂಭವಾಯಿತು. ಆ ಪದವಿಯನ್ನು ಪಡೆಯುವ ಪೂರ್ವದಲ್ಲಿ ಆತ ಅದೆಷ್ಟೋ ದಾರಿಯನ್ನು ಸವೆಯಿಸಿ ಸಾಗಬೇಕಾಯಿತು.

# ತಪಸ್ಸು ಮತ್ತು ತೀರ್ಥಯಾತ್ರೆ

ಗೋದಾವರಿ ನದಿಯು ಜಾಂಬ ಗ್ರಾಮದಿಂದ ನಾಲ್ಕೈದು ಮೈಲಿ ಮೇಲಿದೆ. ಲಗ್ನ ಮಂಟಪದಿಂದ ಜಾರಿಕೊಂಡು ನಾರಾಯಣನು ಗೋದಾವರಿ ತೀರಕ್ಕೆ ಬಂದನು. ಆತ ನದಿಗೆ ಬಂದು ಮುಟ್ಟಿದಾಗ, ಅಲ್ಲಿ ತೀರದ ಶ್ಮಶಾನದಲ್ಲಿ ಒಂದು ಹೆಣ ಸುಡುತ್ತಲಿತ್ತೆಂಬ ಉಲ್ಲೇಖವನ್ನು ಅಲ್ಲಲ್ಲಿ ಮಾಡಿದ್ದಾರೆ. ಮಾನವ ಜೀವನದ ಕ್ಷಣಭಂಗುರತ್ವವನ್ನು ಮನಸ್ಸಿಗೆ ಬಿಂಬಿಸುವ ಆ ಚಿಂತೆಯು ನಾರಾಯಣನ ಚಿತ್ತದಲ್ಲಿ ವೈರಾಗ್ಯದ ಅಗ್ನಿಯನ್ನು ಇನ್ನೂ ಹೆಚ್ಚಿಗೆ ಪ್ರಜ್ವಲಿಸುವುದಕ್ಕೆ ಕಾರಣೀಭೂತವಾಗಿರಬೇಕು. ನಾರಾಯಣನು ನದಿಯಲ್ಲಿ ಈಜಿ ಆ ಕಡೆಗೆ ಹೋದನು. ಗೋದಾವರಿ ನದಿತೀರದ ಮಾರ್ಗದಲ್ಲಿಯೇ ಸಾಗಿ, ನಾಸಿಕದ ಹತ್ತಿರ ಪಂಚವಟಿಗೆ ಬಂದು ಮುಟ್ಟಿದನು. ಠೋಸರ ಮನೆತನದಲ್ಲಿ ಶ್ರೀ ರಾಮಚಂದ್ರನ ಉಪಾಸನೆಯು ಪೂರ್ವಕಾಲದಿಂದಲೂ ನಡೆದುಬಂದಿತ್ತು. ವನವಾಸ ಕಾಲದಲ್ಲಿ ಪ್ರಭು ರಾಮಚಂದ್ರನು ಸೀತಾಮಾತೆಸಹಿತ ನಾಸಿಕದ ಪಂಚವಟಿ ಪರಿಸರದಲ್ಲಿ ವಾಸಿಸುತ್ತಿದ್ದನೆಂಬುದು ಪರಂಪರಾಗತ ಜನರ ಭಾವನೆಯಿದೆ. ಅಲ್ಲಿಯು ರಾಮ ಮಂದಿರ ಕೂಡ ಖ್ಯಾತಿ ಪಡೆದಿದೆ. ಮನೆಬಿಟ್ಟು ಹೊರಬಿದ್ದ ಬಳಿಕ ಶ್ರೀ ರಾಮನ ಕ್ಷೇತ್ರವೆಂದು ಪ್ರಸಿದ್ಧವಾದ ನಾಸಿಕಕ್ಕೆ ಹೋಗುವ ನಿರ್ಧಾರ ವನ್ನು ನಾರಾಯಣನು ಕೈಗೊಂಡಿದ್ದು ಸ್ವಾಭಾವಿಕವಾಗಿದೆ.

ಲಗ್ನ ವೇದಿಕೆಯಿಂದ ನಾರಾಯಣನು ಕೇವಲ ಮೈಮೇಲಿನ ಬಟ್ಟೆಯಿಂದಲೇ ಹೊರ ಬೀಳಬೇಕಾಯಿತು. ಗಟ್ಟಿಯಾದ ಬಟ್ಟೆಗಳಿಲ್ಲ. ದಾರಿ ಗೊತ್ತಿಲ್ಲ. ದಾರಿ ತೋರಿಸುವವರು ಇಲ್ಲ. ಅಲ್ಲದೆ ಜತೆಯಲ್ಲಿ ಯಾರೂ ಇಲ್ಲ. ಇಂಥ ಸ್ಥಿತಿಯಲ್ಲಿ ಜಾಂಬಗಿಂದ ಪಂಚವಟಿಯ ಈ ಪ್ರವಾಸವು ನಾರಾಯಣನಿಗೆ ಬಹಳ ತೊಂದರೆದಾಯಕ ವಾಗಿದ್ದು ಸ್ಪಷ್ಟವಿದೆ. ಮುಂದೆ ಕೂಡ ಈ ಕಷ್ಟವು ಬಹಳ ಸಮಯದವರೆಗೆ ಇದ್ದೇ ಇತ್ತು. ನಾಸಿಕದ ಪೂರ್ವಕ್ಕೆ ಸಮೀಪದಲ್ಲಿ ಟಾಕಳಿ ಎಂಬ ಹೆಸರಿನ ಒಂದು ಚಿಕ್ಕ ಗ್ರಾಮವಿದೆ. ಗೋದಾವರಿ ಮತ್ತು ನಂದಿನಿ ಈ ಎರಡೂ ನದಿಗಳ ಸಂಗಮ ಸ್ಥಾನವಿದು. ತಪಸ್ಸಿಗಾಗಿ ಸಂಗಮದ ಸ್ಥಳವು ವಿಶೇಷ ಪವಿತ್ರವೆಂದು ತಿಳಿಯಲ್ಪಡು ತ್ತದೆ. ನಾಸಿಕದ ರಾಮ ಮಂದಿರವು ಪ್ರಿಯವಾಗಿದ್ದರೂ ನಾರಾಯಣನು ತನ್ನ ವಾಸ್ತವ್ಯಕ್ಕಾಗಿ ಸಂಗಮದ ಹತ್ತಿರದ ಟಾಕಳಿ ಗ್ರಾಮವನ್ನು ಆಯ್ಕೆ ಮಾಡಿದನು. ಗ್ರಾಮದ ಹತ್ತಿರವಿದ್ದ ಗುಹೆಯಲ್ಲಿ ಅವನು ವಾಸಿಸತೊಡಗಿದನು. ಆತ ಮಾಡಲಿರುವ ಸಾಧನೆಯ ದೃಷ್ಟಿಯಿಂದ ಆತ ಜನಸಂದಣಿಯಿಂದ ದೂರ ಇರುವುದು ಅವಶ್ಯ ವಾಗಿತ್ತು.

ಪಂಚವಟಿಗೆ ಬಂದು ಮುಟ್ಟಿದಾಗ ನಾರಾಯಣನು ದೇವಾಲಯಕ್ಕೆ ಹೋಗಿ ಶ್ರೀ ರಾಮಚಂದ್ರನ ಮೂರ್ತಿ ಎದುರು ನಿಂತುಕೊಂಡನು. "ಜನಸ್ಥಾನ ಗೋದಾ ತೀರದೆ ವಾಸ! ಪ್ರಭುವನು ಕಂಡು ಸಂತುಷ್ಟನಾದ ದಾಸ!" ಹೀಗೆ ಸಮರ್ಥರು ಕರುಣಾಸ್ತೋತ್ರದಲ್ಲಿ ತೆಗೆದ ಉದ್ಗಾರವಿದೆ. ಕೇವಲ ಐದು ಶ್ಲೋಕದ ಈ ಚಿಕ್ಕ ಸ್ತೋತ್ರವು ಅತೀವ ಸಂತುಷ್ಟ ಮನಸ್ಸಿಂದ ಬರೆಯಲ್ಪಟ್ಟಿದೆ. ಪ್ರೀತಿಯ ಜನರನ್ನು ತ್ಯಾಗಮಾಡಿ ಪಂಚವಟಿಗೆ ಬಂದು ಮುಟ್ಟಿದ ಬಳಿಕ ರಾಮಚಂದ್ರ ಪ್ರಭುವಿನ ದರ್ಶನ ದಿಂದ ನಾರಾಯಣನಿಗಾದ ಆನಂದವು ಆ ಸ್ತೋತ್ರದಲ್ಲಿ ವರ್ಣಿತವಾಗಿದೆಯೆಂದು ಕೆಲವು ಅಭ್ಯಾಸಿಗಳು ಹೇಳಿದ್ದಾರೆ. ಇಷ್ಟು ಸಣ್ಣ ವಯಸ್ಸಿನಲ್ಲಿ ಮನೆಯ ನೆರಳನ್ನು ತ್ಯಜಿಸಿ ಹೊರ ಬೀಳುವುದು ಸಾಮಾನ್ಯ ಮಾತೇನಲ್ಲ. ಅದಕ್ಕಾಗಿ ಯಾವುದೇ ರೀತಿಯ ವಿಶೇಷ ಉತ್ಸಾಹವು ಮನವನ್ನು ಆವರಿಸಿರಬಹುದು. ಪಂಚವಟಿಗೆ ಬಂದು ಮುಟ್ಟಿದ ಬಳಿಕ ಆತ್ಮೀಯ ಜನರು ದೂರವಾದ ಬಗೆಗೆ ದುಃಖವು ನಾರಾಯಣನ ಮನಸ್ಸಿನಲ್ಲಿರ ಲಿಲ್ಲ. ಶ್ರೀ ರಾಮಚಂದ್ರನ ದರ್ಶನದಿಂದ ಆತನ ಮನಸ್ಸಿಗೆ ಎಷ್ಟು ಸಂಕಟವಾಯಿ ತೆಂದರೆ, ಅದೇ ಮುಂದೆ ಒಂದು ಚಿಕ್ಕ ಕಾವ್ಯದ ವಿಷಯವಾಯಿತು. ಈ ಸಂಗತಿ ಯನ್ನು ಗಮನಿಸಿದರೆ, ವಿವಾಹ ಮಂಟಪದಿಂದ ಬಾಣದಂತೆ ಹೊರಬಿದ್ದ ಕ್ಷಣದಲ್ಲಿ ನಾರಾಯಣನ ಮನಸ್ಸಿನೊಳಗೆ ಪಾರಮಾರ್ಥದ ಸೆಳೆತ ಎಷ್ಟು ಬಲವಾಗಿತ್ತು, ಈ ಬಗೆಗೆ ಅಂದಾಜು ಮಾಡಲಿಕ್ಕಾಗುತ್ತದೆ.

ಸಮರ್ಥರ ಸಾಹಿತ್ಯದಲ್ಲಿಯ ಸುಮಾರು ಮೂವತ್ತು, ಮೂವತ್ತೆರಡು ಕವಿತೆಗಳ ಒಂದು ಗುಂಪು ಕರುಣಾ ಸ್ತೋತ್ರಗಳು ಎಂಬ ಹೆಸರಿನಿಂದ ಗುರುತಿಸಲ್ಪಡುತ್ತದೆ. ಅದರಲ್ಲಿ ಒಂದೊಂದು ಸ್ತೋತ್ರದಲ್ಲಿ ಐದು ಆರರಿಂದ ಹದಿನೈದು ಹದಿನೆಂಟರವರೆಗೆ ಶ್ಲೋಕಗಳಿವೆ. ಈ ಎಲ್ಲ ರಚನೆಗಳನ್ನು ಒಂದೇ ವೇಳೆಯಲ್ಲಿ ಮಾಡಲಾಗಿಲ್ಲ. "ದಿನಾನಾಥ ಹೇ ರಾಮ ಬರುವವನಿದ್ದಾನೆ!" ಹೀಗೆ ಉದ್ಗಾರವಿದ್ದ ಅದರಲ್ಲಿಯ ಒಂದು ಸ್ತೋತ್ರವು ಮುಂದೆ ಸಮರ್ಥರ ಆಯುಷ್ಯದ ಉತ್ತರಾರ್ಧದಲ್ಲಿ ಚಾಫಳದ ಶ್ರೀ ರಾಮ ಮಂದಿರದ ಕಟ್ಟಡವು ಪೂರ್ತಿಯಾದ ಸಮಯ ರಚಿತವಾಗಿದೆಯೆಂದು ತಿಳಿಯಲಾಗುತ್ತದೆ. ಆದರೆ ಇಂಥ ಒಂದಿಷ್ಟು ಅಪವಾದವನ್ನು ಬಿಟ್ಟರೆ ಈ ಎಲ್ಲ ಸ್ತೋತ್ರಗಳು ನಾರಾಯಣನು ಪಂಚವಟಿಗೆ ಬಂದು ಮುಟ್ಟಿದ ಬಳಿಕ, ಅದೇ ಕಾಲಕ್ಕೆ ಬರೆಯಲ್ಪಟ್ಟಿರಬೇಕು. ಪ್ರಭು ರಾಮಚಂದ್ರನ ದರ್ಶನದ ಬಗೆಗಿನ ಆರ್ತತೆ ಮತ್ತು ತಳಮಳ, ಆ ದರ್ಶನವಾಗದಿದ್ದಾಗ ಮನದಲ್ಲಿ ಮೂಡುವ ಉದ್ವಿಗ್ನತೆ ಮತ್ತು ಉದಾಸೀನತೆ, ಪ್ರಾಪಂಚಿಕರ ಸಹವಾಸದ ಚಿತ್ತಕ್ಕೆ ಅರಿಯುವ ನಿರುತ್ಸಾಹ ಹಾಗೂ ಬೇಸರ ತನ್ನ ಮಾನಸಿಕ ದೌರ್ಬಲ್ಯವು ಗಮನಕ್ಕೆ ಬಂದಾಗ ಅಂತಃಕರಣಕ್ಕೆ ಚುಚ್ಚುವ ಚಿಂತೆ ಮತ್ತು ವೇದನೆ, ಅದಕ್ಕಾಗಿ ಪರಮೇಶ್ವರನನ್ನು ಕುರಿತು ಮಾಡಿದ ಪ್ರಾರ್ಥನೆ ಮತ್ತು ಬೇಡಿದ ಕರುಣೆ ಈ ಎಲ್ಲವುಗಳ ಉತ್ಕಟವಾದ ಚಿತ್ರವು ಅವರ ಕರುಣಾಸ್ತೋತ್ರಗಳಲ್ಲಿ ದೊರೆಯುತ್ತದೆ.

ಇವುಗಳಲ್ಲಿ ಬಹಳಷ್ಟು ಸ್ತೋತ್ರಗಳ ರಚನೆಯನ್ನು ಮಾಲಿನಿ ಮತ್ತು ಭುಜಂಗ

ಪ್ರಯಾತ್ ವೃತ್ತಗಳಲ್ಲಿ ಮಾಡಿದ್ದರೂ ಇತರ ಒಂದೆರಡು ವೃತ್ತಗಳನ್ನು ಉಪಯೋಗಿಸಿದ್ದಾರೆಂಬುವದಕ್ಕೆ ಉದಾಹರಣೆಯಾಗಿ ಒಂದು ಸ್ತೋತ್ರವು ಅನುಷ್ಟುಭಛಂದದಲ್ಲಿದೆ. ಸಮರ್ಥರ ಕವಿತ್ವಶಕ್ತಿ ಬಹಳ ಬೇಗ ಜಾಗೃತಗೊಂಡಿತು. ಆ ಜಾಗೃತಿ ಅವರ ಬದುಕಿನ ಕೊನೆಯವರೆಗೂ ಸೃಜನಶೀಲವಾಗಿತ್ತು. ಭಾವನೆಗಳ ಪಾತಳಿಗೆ ಯಾವ ಅನುಭವಗಳು ಬರುವುವೋ ಮತ್ತು ವೈಚಾರಿಕ ದೃಷ್ಟಿ ಯಾವುದನ್ನು ಅರಿಯುವುದೋ ಅವುಗಳಿಗೆ ಶಬ್ದರೂಪವನ್ನು ಕೊಡುವ ಪ್ರವೃತ್ತಿ ಸಮರ್ಥರದಾಗಿತ್ತು. 'ಕರುಣಾ ಸ್ತೋತ್ರ' ಆ ಸ್ವಾಭಾವಿಕ ಪ್ರವೃತ್ತಿಯ ಪ್ರಪ್ರಥಮ ಆವಿಷ್ಕಾರವಾಗಿದೆ. ಅದು ಅಂತರಂಗದಲ್ಲಿ ತುಂಬಿ ಬಂದ ಉದ್ಗಾರವಾಗಿದೆ. "ದಿನದಿನಕ್ಕೆ ಆಯುಷ್ಯ ವ್ಯರ್ಥ" ಇಲ್ಲವೆ "ಕೋಟಿ ಕೋಟಿ ಜನ್ಮದಲಿ ಹೃದಯ ಜ್ವಲಿಸುವುದು" ಈ ರೀತಿ ಅದರಲ್ಲಿಯ ಕೆಲವು ಚರಣಗಳನ್ನು ಓದಿದರೆ ಸಮರ್ಥರ ಹೃದಯದಲ್ಲಿ ಈಶ್ವರ ದರ್ಶನದ ತಳಮಳವು ಯಾವ ತೀವ್ರತೆಯ ಶಿಖರಕ್ಕೆ ಮುಟ್ಟಿರಬಹುದು, ಎಂಬದರ ಅರಿವಾಗುತ್ತದೆ. ಇಲ್ಲಿ ಕೆಲವು ಸ್ಥಳಗಳಲ್ಲಿ ರಚನೆಗಳು ಅಸ್ತವ್ಯಸ್ತ ಮತ್ತು ಕೃತ್ರಿಮವೆಂದು ಕಂಡುಬರುತ್ತವೆ. ಆದರೆ ಸಮರ್ಥರ ಪರಿಶುದ್ಧ ಪ್ರಭುತ್ವದ ಹಾಗೂ ಪ್ರತಿಭಾ ಸಾಮರ್ಥ್ಯದ ಸಾಕ್ಷಿಯು ಇಲ್ಲಿ ತಟ್ಟದೆ ಇರುವುದಿಲ್ಲ. ಸಾಧಕಾವಸ್ಥೆಯ ಪ್ರಾರಂಭದ ಕಾಲದಲ್ಲಿಯ ರಾಮದಾಸರು ಇಲ್ಲಿ ನಮಗೆ ಕಂಡುಬರುತ್ತಾರೆ.

ಉಷಃಕಾಲದ ಪ್ರಹರದಲ್ಲಿ ಸ್ನಾನಕ್ಕಾಗಿ ರಾಮದಾಸರು ಸಂಗಮಕ್ಕೆ ಬರುತ್ತಿದ್ದರು. ಟಾಕಳಿಗೆ ಬಂದ ಕೂಡಲೇ ಅವರು ಹದಿಮೂರು ಕೋಟಿ ರಾಮನಾಮ ಜಪಿಸುವ ಸಂಕಲ್ಪ ಮಾಡಿದ ದಿನ ಶಕೆ 1542 ರೌದ್ರನಾಮ ಸಂವತ್ಸರ ಮಾಘಶುದ್ಧ ಸಪ್ತಮಿ ಯಾಗಿತ್ತೆಂದು ಉಲ್ಲೇಖವಿದೆ. ಹನ್ನೆರಡು ವರ್ಷ ಮುಗಿಯುವಷ್ಟರಲ್ಲಿ ನಾರಾಯಣನು ಜಾಂಬ ಗ್ರಾಮವನ್ನು ತ್ಯಜಿಸಿದ ವಿವರಣೆಗೆ ಇದು ಸರಿ ಹೊಂದುತ್ತದೆ. ಸ್ನಾನ ಸಂಧ್ಯಾ, ಗಾಯತ್ರಿ ಮಂತ್ರ ಮೊದಲಾದ ನಿತ್ಯಕರ್ಮ ಮುಗಿಸಿ ರಾಮದಾಸರು ಸಂಗಮನದಿಯ ಪಾತ್ರದಲ್ಲಿ ನಡುಮಟ್ಟ ನೀರಿನಲ್ಲಿ ನಿಲ್ಲುತ್ತಿದ್ದರು. ರಾಮನಾಮ ಜಪಿಸುತ್ತಿದ್ದರು. ಬಿಸಿಲೇರಿದಂತೆ ಅದರ ತೀಕ್ಷ್ಣತೆ ಹೆಚ್ಚಾಗುತ್ತಲಿತ್ತು. ಒಂದೇ ಸ್ಥಳದಲ್ಲಿ ನೀರಿನಲ್ಲಿ ನಿಲ್ಲುವುದರಿಂದ ಮೀನುಗಳು ಕಾಲನ್ನು ಕಚ್ಚುತ್ತಲಿದ್ದವು. ಇವೆಲ್ಲವನ್ನು ಸಹಿಸುತ್ತ ಏಕಾಗ್ರಚಿತ್ತದಿಂದ ರಾಮದಾಸರ ಜಪವು ಸುಮಾರು ಎರಡು ಪ್ರಹರಗಳವರೆಗೆ ನಡೆಯುತ್ತಿತ್ತು. ಅನಂತರ ಪಂಚವಟಿಗೆ ಹೋಗಿ ಮಧುಕರಿಬೇಡಿಯಲ್ಲಿ ಶ್ರೀರಾಮನಿಗೆ ನೈವೇದ್ಯ ತೋರಿ, ಟಾಕಳಿಯ ತಮ್ಮ ವಾಸ್ತವ್ಯಕ್ಕೆ ಮರಳಿ ಬಂದು ಊಟ ಮಾಡುತ್ತಲಿದ್ದರು. ತಪಸ್ಸಿನ ಹನ್ನೆರಡು ವರ್ಷಗಳ ಕಾಲ ರಾಮದಾಸರು ಬೆಳಗಿನಿಂದ ಮಧ್ಯಾಹ್ನ ಕಳೆಯುವವರೆಗಿನ ಈ ಕಾರ್ಯಕ್ರಮವನ್ನು ಯಾವ ರೀತಿಯಲ್ಲಿಯೂ ಭಂಗವಾಗದಂತೆ ಆಚರಿಸಿದ್ದಾರೆ.

ಊಟವಾದ ಬಳಿಕ ಒಂದಿಷ್ಟು ವಿಶ್ರಾಂತಿಯನ್ನು ಪಡೆದು ಮಧ್ಯಾಹ್ನ ಪಂಚವಟಿಗೆ ಹೋಗಿ ಅಲ್ಲಿಯ ದೇವಾಲಯದಲ್ಲಿ ಜರುಗಲಿರುವ ಕೀರ್ತನೆ ಪ್ರವಚನಗಳನ್ನು ಆಲಿಸುವ ಪರಿಪಾಠವನ್ನು ಪ್ರಾರಂಭದಿಂದಲೂ ರಾಮದಾಸರು ಇಟ್ಟುಕೊಂಡಿದ್ದರು.

ಕೀರ್ತನೆ ಇಲ್ಲವೆ ಪ್ರವಚನ ಇಲ್ಲದಿದ್ದರೆ ಆ ದಿನ ಅವರು ಒಂದಿಷ್ಟು ಆಧ್ಯಾತ್ಮಿಕ ಗ್ರಂಥಗಳ ವಾಚನ ಮಾಡುತ್ತಿದ್ದರು.ಗ್ರಂಥಗಳ ಹಾಗೂ ವಾಚನದ ಮಹತ್ತ್ವವನ್ನು ಮುಂದೆ ಅನೇಕ ಸ್ಥಳಗಳಲ್ಲಿ ರಾಮದಾಸರು ಹೇಳಿದ್ದಾರೆ. ಆ ರೀತಿ ಆರಂಭದಿಂದಲೂ ಅವರು ಆಚರಿಸಿದ್ದಾರೆ. ತಪಸ್ಸನ್ನು ಆಚರಿಸುವ ಜೊತೆ ಅಧ್ಯಯನವೂ ಸೇರುತ್ತಿದ್ದುದು ರಾಮದಾಸರ ಒಂದು ವೈಶಿಷ್ಟ್ಯ. ಈಶ್ವರ ದರ್ಶನವು ಸಾಧ್ಯವೆಂದು ಅವರು ತಿಳಿದಿದ್ದರೂ ಕೇವಲ ಜಪತಪ ಇಲ್ಲವೆ ನಾಮಸ್ಮರಣೆಯಲ್ಲಿಯೇ ಸಿಕ್ಕಿಬಿದ್ದವರಲ್ಲ. ಉಪಾಸನೆಯ ನಂತರ ಅಭ್ಯಾಸದ ಬಲವನ್ನು ಕೂಡ ಸಾಧಿಸಬೇಕೆಂಬ ಜ್ಞಾನವನ್ನು ಅವರು ಹುಟ್ಟಿನಿಂದಲೇ ಬಲ್ಲವರಾಗಿದ್ದರು. ರಾಮದಾಸರಲ್ಲಿದ್ದ ಸ್ವತಂತ್ರ ಮನೋವೃತ್ತಿಯು ಅವರು ಮನೆಯನ್ನು ತ್ಯಾಗ ಮಾಡಿದಾಗ ಕಂಡುಬಂದಂತೆ, ಅದು ಅನಂತರ ಕಾಲದಲ್ಲಿಯೂ ಸಮಯ ಸಮಯಕ್ಕೆ ಅನೇಕ ಪ್ರಸಂಗಗಳಲ್ಲಿ ಗಮನಕ್ಕೆ ಬರುತ್ತದೆ. ಸಾಧನೆಯ ಕಾಲಕ್ಕೆ ಮಾರ್ಗದರ್ಶನ ಮಾಡುವ ಯಾವ ಗುರು ರಾಮದಾಸರಿಗೆ ಇರಲಿಲ್ಲ. ಆ ಎಳೆಯ ವಯಸ್ಸಿನಲ್ಲಿ ಪ್ರತಿಯೊಂದು ವಿಷಯಕ್ಕೆ ನಿರ್ಣಯವನ್ನು ತಾನೇ ತಾನು ಪಡೆಯಬೇಕಾಗಿತ್ತು. ಪರಮಾರ್ಥ ಮಾರ್ಗದಲ್ಲಿ ಗುರುವಿಗಿದ್ದ ಮಹತ್ತ್ವವನ್ನು ಸಮರ್ಥರು ಅನೇಕ ಸಂದರ್ಭಗಳಲ್ಲಿ ಹೇಳಿದ್ದಾರೆ. ಆದರೆ ಗುರುವಿಲ್ಲದೆ ಆತ್ಮಜ್ಞಾನವಾಗುವುದು ಅಸಾಧ್ಯವೆಂದು ಹೆಚ್ಚಿನ ಒತ್ತುಕೊಟ್ಟು ಪ್ರತಿಪಾದನ ಮಾಡುವ ಸಮರ್ಥರಿಗೆ ಯಾವ ಮಾನವ ದೇಹಧಾರಿ ಗುರುವಾಗಿದ್ದು ಕಂಡು ಬರುವುದಿಲ್ಲ. ಅಂಥವರು ಯಾರಾದರೂ ಇದ್ದರೆ ಖಚಿತವಾಗಿ ಅವರು ಉಲ್ಲೇಖಿಸುತ್ತಿದ್ದರು. ಪ್ರಭು ರಾಮಚಂದ್ರನೇ ತಮಗೆ ಅನುಗ್ರಹ ನೀಡಿದನೆಂಬ ಉಲ್ಲೇಖವು ಸಮರ್ಥರ ಹೆಸರಿನಲ್ಲಿ ಬಂದ ಒಂದು ಅಭಂಗದಲ್ಲಿದೆ.

ದೇವರು ತಮ್ಮ ಹೃದಯದಲ್ಲಿ ಯಾವ ಪ್ರೇರಣೆಯನ್ನು ಮಾಡುವನೋ, ಅದರಂತೆ ತಾವು ತಮ್ಮದೇ ಆದ ದಾರಿಯಲ್ಲಿ ನಡೆಯುತ್ತಿರಬೇಕೆಂಬ ಸಂಕಲ್ಪವನ್ನು ರಾಮದಾಸರು, ತಂದೆ ಮತ್ತು ಅಣ್ಣ ಇವರು ಅನುಗ್ರಹವನ್ನೀಯುವ ಕಾರ್ಯವನ್ನು ಮುಂದೆ ಹಾಕಿದಾಗ ಆ ಸಮಯದಲ್ಲಿ ಮಾಡಿರಬೇಕು. ನಾಸಿಕಕ್ಕೆ ಬಂದಾಗ ಹತ್ತಿರದಲ್ಲಿ ಯಾವ ಗುರುವೂ ಇಲ್ಲವೆಂದು ರಾಮದಾಸರು ತಡೆದು ನಿಲ್ಲಲಿಲ್ಲ. ನಾಸಿಕ ಕ್ಷೇತ್ರವು ಆ ಸಮಯದಲ್ಲಿ ವಿದ್ವಾಂಸರ ವಾಸ್ತವ್ಯಕ್ಕಾಗಿ ಪ್ರಖ್ಯಾತಿಯನ್ನು ಪಡೆದಿತ್ತು. ಅವರಲ್ಲಿ ಯಾರ ಹತ್ತಿರವಾದರೂ ರಾಮದಾಸರು ಸಂಸ್ಕೃತದ ಪ್ರಾಥಮಿಕ ಪಾಠಗಳನ್ನು ಹೇಳಿಸಿಕೊಂಡಿರಬೇಕು. ಯಾರ ಮಾರ್ಗದರ್ಶನದಲ್ಲಿಯಾದರೂ ಅವರು ವೇದಾಂತ ಗ್ರಂಥಗಳನ್ನು ಓದಿರಬೇಕು ಇಲ್ಲವೆ ಯಾರೂ ಭೇಟಿಯಾಗಿರದಿದ್ದರೆ ಶ್ರಮದ ಬಲದಿಂದ ಜ್ಞಾನವನ್ನು ಪಡೆದಿರಬೇಕು. ಇವುಗಳಲ್ಲಿ ಯಾವುದಾದರೂ ಪ್ರತ್ಯಕ್ಷ ನಡೆದಿರಬೇಕು. ಬೆಳಗಿನಲ್ಲಿ ಸತತ ತಪಸ್ಸು ಮತ್ತು ಮಧ್ಯಾಹ್ನದ ಬಳಿಕ ಗ್ರಂಥ ಪಠಣ ಇದು ರಾಮದಾಸರ ನಿತ್ಯಕ್ರಮ ಆರಂಭವಾಯಿತು. ಟಾಕಳಿಯ ಈ ವಾಸ್ತವ್ಯದಲ್ಲಿ ರಾಮದಾಸರು ಯಾರಾದರೂ ಶಾಸ್ತ್ರಿ ಇಲ್ಲವೆ ಪಂಡಿತರ ಬಳಿಗೆ

ಅಧ್ಯಯನ ಮಾಡಿದ ಸಂಗತಿ, ಅಲ್ಲದೆ ಆ ಸಮಯದಲ್ಲಿ ಯಾವ ಸಹಪಾಠಿ ಜತೆಗಿದ್ದ ವಿಷಯ, ಈ ಯಾವ ಮಾಹಿತಿಗಳೂ ದೊರೆತಿಲ್ಲ.

ತಮ್ಮ ಧ್ಯೇಯದ ಸಿದ್ಧಿಗಾಗಿ ಮಹಾಪುರುಷರು ಮಾರ್ಗವನ್ನು ಕ್ರಮಿಸುತ್ತಿರುವಲ್ಲಿ ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಕಷ್ಟಸಂಕಟಗಳ ಪರ್ವತವನ್ನು ದಾಟದಿದ್ದರೆ ಯಶಸ್ಸಿನ ಶಿಖರದ ಮೇಲೆ ಯಾರೂ ಕಾಲೂರಲು ಸಾಧ್ಯವಿಲ್ಲ. ನಿಂದೆ, ಉಪೇಕ್ಷೆ, ಅವಹೇಳನೆ ಇವುಗಳ ಆಘಾತವನ್ನು ಸಹಿಸಬೇಕಾಗುತ್ತದೆ. ನಿರಾಶೆ ಮತ್ತು ಅಪಯಶ ಇವುಗಳನ್ನು ಅನುಭವಿಸಬೇಕಾಗುತ್ತದೆ. ಈ ಸಂಗತಿಗಳ ವಿಚಾರವನ್ನು ಆ ಶ್ರೇಷ್ಠ ಪುರುಷರು ತಮ್ಮ ಬಾಯಿಂದ ಎಂದೂ ಹೇಳುವುದಿಲ್ಲ. ಇದರಿಂದ ಅವರು ಅಂಥ ಕಠಿಣ ಪ್ರಸಂಗಗಳನ್ನು ಎಂದೂ ಎದುರಿಸಿಲ್ಲ ಎಂದು ಹೇಳಲಿಕ್ಕಾಗದು. ಪರಮಾರ್ಥಮಾರ್ಗದಲ್ಲಿ ಸ್ವಂತ ಮಾನಸಿಕ ಹೋರಾಟವೇ ಬಹಳ ಪ್ರಖರವಾಗಿರುತ್ತದೆ. ಇಂದ್ರಿಯಗಳನ್ನು ವಶಪಡಿಸಿಕೊಳ್ಳಬೇಕಾಗುತ್ತದೆ. ಈ ಎಲ್ಲ ಸಾಧ್ಯತೆಗಳನ್ನು ಕೇವಲ ಸ್ವಂತ ಬಲದಿಂದ ಮಾಡಬೇಕಾಗುವುದು. ಈ ವಿಷಯವಾಗಿ ಬೇರೆ ಯಾರ ಪ್ರತ್ಯಕ್ಷ ಉಪಯೋಗವಾಗದು. ಹನ್ನೆರಡು ವರ್ಷಗಳ ತಪಸ್ಸಿನ ಕಾಲದಲ್ಲಿ ರಾಮದಾಸರು ಈ ಎಲ್ಲ ಪ್ರಕ್ರಿಯೆಗಳ ಮೂಲಕ ಸಾಗಿದ್ದಾರೆ. ಕರುಣಾಸ್ತೋತ್ರದಲ್ಲಿ ನಡುನಡುವೆ ಬಂದ ಚಿಕ್ಕ ಉದ್ಗಾರಗಳಲ್ಲಿಯೂ ಇವುಗಳ ಆಧಾರ ದೊರೆಯುತ್ತದೆ. ಈ ಉದ್ಗಾರಗಳು ತೀರ ಕಡಿಮೆ ದೊರೆಯುತ್ತವೇನೋ ನಿಜ, ಆದರೆ ಅವು ಸ್ವಲ್ಪವಿದ್ದರೂ ಸ್ಪಷ್ಟವಾಗಿವೆ. ರಾಮದಾಸರ ಆ ಸಮಯದ ಮಾನಸಿಕ ಅವಸ್ಥೆಯ ನಿರ್ಮಲ ಪ್ರತಿಬಿಂಬ ಅವುಗಳಲ್ಲಿ ಮೂಡಿದೆ. ಆ ಉದ್ಗಾರಗಳು ಕಡಿಮೆಯಿದ್ದ ಕಾರಣವೆಂದರೆ, ಈ ಪರ್ವದಿಂದ ರಾಮದಾಸರು ಅತಿ ವೇಗದಿಂದ ಹೊರ ಬಿದ್ದಿದ್ದಾರೆ.

ನಾರಾಯಣನು ಮನೆ ಬಿಟ್ಟು ಅದೇ ಬಂದಿದ್ದಾನೆ. ಆತನಿಗೆ ಮನೆಯ ಜನರ ಸ್ಮರಣೆ ಸ್ವಾಭಾವಿಕ. ವಾತ್ಸಲ್ಯಮಯಿ ತಾಯಿಯ ಮೂರ್ತಿ ಹತ್ತಿರ ಬರುವ, ಅಣ್ಣನ ಸಹವಾಸದ ಕ್ಷಣಗಳು ಕಣ್ಣೆದುರು ಕಟ್ಟುವ, ಮನೆಯ ಆತ್ಮೀಯ ವಾತಾವರಣವನ್ನು ನೆನಪಿಸುವ, ಜಾಂಬದ ಪರಿಸರದ ಇಲ್ಲವೆ ಅಲ್ಲಿನ ಗೆಳೆಯರ ಸ್ಮರಣೆಯಾಗುವ, ಹೀಗೆ ಅದು ನಾರಾಯಣನ ವಯಸ್ಸು, ತನ್ನದೆಲ್ಲವನ್ನೂ ಬಿಟ್ಟು ಬಂದನು. ಅಲ್ಲಿ ನನ್ನವರು, ತನ್ನವರು ಎನ್ನುವವರು ಯಾರೂ ಇಲ್ಲದ ಬಗೆಗೆ ಅನೇಕ ಸಲ ಆತನ ಮನಸ್ಸಿನಲ್ಲಿ ಮೂಡಿದೆ. ಇಲ್ಲಿ ನಾನೊಬ್ಬನೇ, ಹತ್ತಿರ ಆತ್ಮೀಯರು ಯಾರೂ ಇಲ್ಲ ಎಂಬುದೂ ಆತನಿಗೆ ಗೊತ್ತಾಗಿದೆ. "ನೀನಲ್ಲದೆ ಎನ್ನನಾರು ನೋಡುವವರು !" ಇಲ್ಲವೆ "ಎಲ್ಲರೂ ಸ್ವಾರ್ಥಿಗಳು ಎನ್ನವರಾರಿಲ್ಲ !" ಈ ಉದ್ಗಾರಗಳ ಗರ್ಭದಲ್ಲಿ ಅವರ ಆಶಯವು ಸ್ಪಷ್ಟವಾಗಿದೆ. "ಭಕ್ತರನೇಕರು ನಿನಗೆ, ಯಾರು ಕೇಳುವರೆನಗೆ !" ಅವರು ಹೀಗೆ ಪ್ರಶ್ನೆಯನ್ನು ಕರುಣಾಸ್ತೋತ್ರದಲ್ಲಿ ಮಾಡುತ್ತಾರೆ. ಇಲ್ಲವೆ "ದಾಸರ ಸಮುದಾಯ ನಿನಗೆ ! ಇನ್ನೊಬ್ಬ ಸ್ವಾಮಿ ಎಲ್ಲಿ ಎನಗೆ !" ಹೀಗೆ 'ಎಕವೀಸ ಸಮಾಸಿ ದಾಸಬೋಧೆ'ಯಲ್ಲಿ* ಹೇಳುತ್ತಾರೆ. ಇದರಲ್ಲಿ ತಾವು ಏಕಾಂಗಿಯಾದ ಬಗೆಗೆ,

* 'ಇಪ್ಪತ್ತೊಂದು ಸಮಾಸಿ ದಾಸಬೋಧ'

ನಿರಾಧಾರವಾದ ಬಗೆಗಿನ ಸಂಗತಿ ಅಡಗಿದೆ. ಮನಸ್ಸು ವ್ಯಾಕುಲಗೊಳ್ಳುವುದಕ್ಕೆ ಹೆಚ್ಚಿನ ಮಹತ್ತ್ವದ ಕಾರಣವೆಂದರೆ, ಯಾವುದರ ಸಲುವಾಗಿ ತಮ್ಮ ಆಪ್ತೇಷ್ಟರನ್ನು ಮತ್ತು ಮನೆಮಾರನ್ನು ತ್ಯಾಗಮಾಡಿ ಬಂದಿದ್ದರೋ ಆ ಧ್ಯೇಯವು ಸಾಧ್ಯವಾಗದ ಬಗೆಗೆ ದುಃಖವಿತ್ತು. ಮನಸ್ಸಿನಲ್ಲಿ ಪ್ರಪಂಚದ ಆಸಕ್ತಿ ಇಲ್ಲದಂತಾಗಬೇಕು ಮತ್ತು ವೈರಾಗ್ಯದ ಭಾವನೆ ದೃಢವಾಗಬೇಕು. ಆಗ ಈಶ್ವರನ ದರ್ಶನದ ಬಗೆಗೆ ಹೆಜ್ಜೆ ಯಿಡಲು ಸಾಧ್ಯ. ಇದು ಸಾಧ್ಯವಾಗದ ಬಗೆಗೆ ದುಃಖವು ನಾರಾಯಣನ ಮನಸ್ಸಿನಲ್ಲಿ ಮತ್ತೆ ಮತ್ತೆ ತುಂಬ ಬಂದಿರುತ್ತದೆ. "ಚಂಚಲಮನ ಎನ್ನದು, ಹಿಡಿತಕ್ಕೆ ಬಾರದು !" "ಚಂಚಲಮನವನು ಮಣಿಸಿದರೂ ಮಣಿಯದು ! ಸಕಲ ಜನ ಸ್ವಜನ ಮಾಯೆ ಮರೆತರೂ ಮರೆಯದು !" ಹೀಗೆ ಅವರ ಅನುಭಗಳಿವೆ.

ಇಂಥ ಪರಿಸ್ಥಿತಿಯಲ್ಲಿ ಶ್ರೀ ರಾಮನದೊಂದೇ ಆಧಾರ. ನಾರಾಯಣನು ಅವನನ್ನೇ ಸ್ಮರಿಸಿದ್ದಾನೆ. ಈ ಸ್ಮರಣೆ ಮಾಡುತ್ತಿರುವಲ್ಲಿ ತನ್ನಲ್ಲಿ ಯುಕ್ತಿಯಿಲ್ಲ, ಬುದ್ಧಿಯಿಲ್ಲ, ವಿವೇಕವಿಲ್ಲ. "ನಾ ನಿನ್ನ ಅಜ್ಞಾನಿ ಭಕ್ತ" ಎಂದು ಹೀಗೆ ಸ್ವಂತದ ವರ್ಣನೆ ಮಾಡಿ ಕೊಳ್ಳುತ್ತ, ನನಗೆ ಸರಿಯಾಗಿ ಬರೆಯಲು ಬಾರದು, ನಾನು ಓದುವುದರಲ್ಲಿ ತಪ್ಪು ತ್ತೇನೆ, ಏನನ್ನಾದರೂ ಓದಿದರೆ ಅದರರ್ಥ ಹೇಳಲಾಗದು "ನಿನ್ನವನಾದ ನಾನು ಮತಿಹೀನ !" ಹೀಗೆ ತಮ್ಮ ಸೀಮೆಯಿಲ್ಲದ ದೌರ್ಬಲ್ಯಗಳನ್ನು ವರ್ಣಿಸಿದ್ದಾರೆ. ನಿನಗೆ ಅಸಂಖ್ಯಾತ ಭಕ್ತರಾದರು. ಅವರು ಬಹಳ ಸಾಧನೆ ಮಾಡಿದರು. ನಾನು ಅವರಂತಲ್ಲ. ಕೇವಲ ಭೂಮಿಗೆ ಭಾರವಾಗಿದ್ದೇನೆ. "ನಿನ್ನ ದಾಸ ನಾನು, ವ್ಯರ್ಥ ಜನ್ಮ ಪಡೆದೆ !" ಹೀಗೆ ದೂರುಗಳನ್ನು ಹಾಡಿಕೊಂಡಿದ್ದಾರೆ. ರಾಮಚಂದ್ರನ ದರ್ಶನಕ್ಕಾಗಿ ಮನಸ್ಸು ಹೇಗೆ ಆತುರಗೊಂಡಿತ್ತೆಂಬ ಚಿತ್ರಗಳು "ಉದಾಸೀನಸಮಯ ಈ ಕಾಲವನು ಹೇಗೆ ಕಳೆಯಲಿ !" ಇಲ್ಲವೆ "ನೀನಿಲ್ಲದೆ ರಾಮ, ಎನಗಾಗದು !" ಇಂಥ ರಚನೆಗಳಲ್ಲಿ ಮೂಡಿವೆ. ವಿರಹಗೀತೆಗಳಲ್ಲಿರುವಂಥ ಆರ್ತತೆ ಮತ್ತು ಉತ್ಕಟತೆ ಈ ಸ್ತೋತ್ರಗಳಲ್ಲಿ ಅವತರಿಸಿವೆ. ಸಮರ್ಥರ ಇಡೀ ಸಾಹಿತ್ಯದಲ್ಲಿ ಇಂಥ ಉದ್ಗಾರ ಮುಂದೆ ಎಲ್ಲಿಯೂ ದೊರೆಯುವುದಿಲ್ಲ. ಅವರು ಎಲ್ಲೆಡೆ ಸಾಮರ್ಥ್ಯದ ಮತ್ತು ಆತ್ಮವಿಶ್ವಾಸದ ಮಾತನ್ನೇ ಹೇಳಿದ್ದಾರೆ. ದೌರ್ಬಲ್ಯದ ಸೀಮೆಯಲ್ಲಿ ಗೊಂದಲಕ್ಕೀಡಾದ ಈ ಕಾರುಣ್ಯವು ಕೇವಲ ಇಂಥ ಕೆಲವೇ ಕರುಣಾ ಸ್ತೋತ್ರಗಳಲ್ಲಿ ದೊರೆಯುತ್ತದೆ.

ಎಲ್ಲ ಸಮಯ ಮನಸ್ಸು ವ್ಯಥೆಯಿಂದ ಉದಾಸೀನವಾಗಿರುತ್ತದೆ. ಯಾರ ಜತೆ ಗಾದರೂ ಮಾತನಾಡಿದರೆ ಬೇಸರವಾಗುತ್ತದೆ.ಎಲ್ಲ ಸಂಸಾರ ವ್ಯರ್ಥವಾಗಿ ಕಾಣುತ್ತದೆ. "ರಘುನಾಯಕಾ, ಏನನು ಹೇಗೆ ಮಾಡಲಿ !" ಎಂದು ನಾರಾಯಣನು ಕೂಗಿ ಕೇಳಿ ಕೊಂಡಿದ್ದಾನೆ. ಸಂಸಾರವು ಸರಿಯಾಗಿಲ್ಲದ ಕಾರಣ ಮನಸ್ಸು ಉದ್ವಿಗ್ನವಾಗಿರುತ್ತದೆ. ಪರಮಾರ್ಥವನ್ನು ಸಾಧಿಸಬೇಕೆಂದರೆ ಅದು ತಿಳಿಯದು. ಹೀಗೆ ಎರಡೂ ಕಡೆಗಾದ ವಿಪರೀತ ಅವಸ್ಥೆಯನ್ನು ಆರಂಭದ ಕಾಲದಲ್ಲಿ ನಾರಾಯಣನು ಅನುಭವಿಸಿದ್ದಾನೆ. ಪರಮಾರ್ಥವು ಸರಿಯಾಗಿರಬೇಕೆಂದರೆ ಈಶ್ವರನ ಅಸ್ತಿತ್ವವನ್ನು ಅರಿತುಕೊಳ್ಳಬೇಕಾಗು

ವುದು. ಆತನ ಸನ್ನಿಧಾನದ ಅನುಭವವಾಗಬೇಕು. ಅದೇ ಸಾಧ್ಯವಾಗದೆಂದು ಆತನ ದೂರು. ದೇವರು ಎಲ್ಲೆಡೆ ತುಂಬಿದ್ದಾನೆಂದು ಹೇಳುತ್ತಾನೆ. ಆದರೆ ತನಗೆ ಮಾತ್ರ ಆ ಅನುಭವವಾಗುವುದಿಲ್ಲ, ತನ್ನ ಅಜ್ಞಾನವೇ ಅದಕ್ಕೆ ಕಾರಣ ಎಂದಿರಬೇಕು. ಈ ಆಶಯವನ್ನು ವ್ಯಕ್ತಮಾಡುವ "ಜಲಚರ ಜಲದಲ್ಲಿದ್ದೂ ಜಲದ ಮಹತಿ ತಿಳಿದಿಲ್ಲ! ಹಗಲಿರುಳು ನಿನ್ನೆಡೆಯಿದ್ದರೂ ನಿನ್ನ ಗುಣ ರಾಶಿ ಅರಿತಿಲ್ಲ!!" ಹೀಗೆ ಬಹು ಅರ್ಥ ಪೂರ್ಣವಾದ ಸಾಲುಗಳು ಒಂದು ಸ್ತೋತ್ರದಲ್ಲಿ ಬಂದು ಹೋಗುತ್ತವೆ.

ಸಾಧಕಾವಸ್ಥೆಯ ಇಂಥ ಕೆಲವು ವಿವರಣೆಗಳು ಕರುಣಾಸ್ತೋತ್ರದಲ್ಲಿ ಬಂದಿದ್ದರೂ ರಾಮದಾಸರ ಒಟ್ಟಿನ ಪಾರಮಾರ್ಥಿಕ ಪ್ರವಾಸವು ಯಾವ ಯಾವ ಅವಸ್ಥೆಯಲ್ಲಿ ಸಾಗಿತು ಮತ್ತು ಹಾಗೆ ಸಾಗಿದಾಗ ಯಾವ ಯಾವ ಅನುಭವಗಳಾದವು. ಇವುಗಳ ಸಮಗ್ರ ಚಿತ್ರವು ಅವರ ಸಾಹಿತ್ಯದಲ್ಲಿ ಮೂಡಿಬಂದಿದೆ ಎಂದು ಹೇಳಲಾಗುವುದಿಲ್ಲ. ಪ್ರಾರಂಭ ಕಾಲದ ಚಿಂತೆ, ಉದ್ವೇಗ, ಆರ್ತತೆ, ಅಶರಣತೆ, ಮನಸ್ಸಿನಲ್ಲಾಗುವ ತಳ ಮಳ, ಸ್ವಂತ ಮಾಡಿಕೊಳ್ಳಬೇಕಾದ ಪರಿಹಾರ, ರಾಮಚಂದ್ರನನ್ನು ಕೋರಿದ ಕರುಣೆ, ಅವರು ಮಾಡಿದ ವಿಧವಿಧ ಪ್ರಾರ್ಥನೆ ಮತ್ತು ವಿನಂತಿ ಇವೆಲ್ಲವುಗಳ ಚಿತ್ತವೇಧಕ ದರ್ಶನವು ಕರುಣಾಸ್ತೋತ್ರಗಳಲ್ಲಿ ದೊರೆಯುತ್ತದೆ. ಈ ಪ್ರಥಮ ಹಂತವನ್ನು ದಾಟಿ ಹೋದ ಬಳಿಕ ಮುಂದೆ ಅವರು ಪಡೆದ ಬೇರೆ ಬೇರೆ ಅನುಭವಗಳ ಚಿತ್ರಣವನ್ನು ಅವರು ವಿವರವಾಗಿ ಮಾಡಿಲ್ಲ. ಅವರ ದೀರ್ಘ ತಪಸ್ಸು ಅಖಂಡವಾಗಿ ಒಂದೇ ಮಾರ್ಗದಲ್ಲಿ ಸಾಗಿತ್ತು. ಅದರ ಜತೆಗೆ ಆಧ್ಯಾತ್ಮ ಗ್ರಂಥಗಳ ಶ್ರವಣ, ಪಠಣ ಮತ್ತು ಇವುಗಳ ಮನನ, ಚಿಂತನ ಇವನ್ನೆಲ್ಲ ಅವರು ನಡೆಸಿಯೇ ಇದ್ದರು. ಬೆಳಗು ಬೈಗಿನ ಈ ಇಬ್ಬಗೆಯ ಕಾರ್ಯಕ್ರಮಗಳೇ ಅವರ ದೈನಂದಿನ ಸಾಧನೆಯಾಗಿತ್ತು, ತಪಶ್ಚರ್ಯವಾಗಿತ್ತು. ಆಧ್ಯಾತ್ಮದ ತನ್ಮಯತೆ ಇಪ್ಪತ್ನಾಲ್ಕು ಗಂಟೆಯೂ ಇರುತ್ತಿತ್ತು. ರಾಮದಾಸರು ಅನುಸರಿಸಿದ ಸಾಧನಮಾರ್ಗ ಇದೇ ಆಗಿತ್ತೆಂದು ಅನ್ನಿಸುತ್ತದೆ. ದಾಸಬೋಧ ಮತ್ತು ಇತರ ಆಧ್ಯಾತ್ಮಿಕ ಪ್ರಕರಣಗಳಲ್ಲಿನ ಶ್ರವಣ, ಮನನ ಮತ್ತು ಮಗ್ನತೆ ಇವುಗಳ ಉಲ್ಲೇಖವನ್ನು ಅವರು ಅನೇಕ ಸಲ ಮಾಡಿದ್ದಾರೆ. ಈ ಮಾರ್ಗದಿಂದಲೇ ಅವರು ತಮ್ಮ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸುತ್ತಿದ್ದರೆಂದು ಹೇಳಬಹುದು.

ಯೋಗ ಮಾರ್ಗಕ್ಕೆ ಸರಿಹೊಂದುವ ಉಲ್ಲೇಖಗಳು ಕ್ವಚಿತ್ತಾಗಿ ಅಲ್ಲಲ್ಲಿ ರಾಮದಾಸರ ಸಾಹಿತ್ಯದಲ್ಲಿ ಬರುತ್ತವೆ. ಆದರೆ ಅದು ಅವರ ಪರಿಭಾಷೆಯಲ್ಲ. ಅಷ್ಟಾಂಗ ಯೋಗ ಇಲ್ಲವೆ ಕುಂಡಲಿನಿ ಜಾಗೃತಿ—ಈ ಮಾರ್ಗಗಳಿಂದ ಅವರು ಹೋದರೆಂದು, ಅವರ ಖ್ಯಾತಿಯಿಲ್ಲ. ಭಕ್ತಿಯ ನವವಿಧ ಪ್ರಕಾರಗಳ ಸವಿಸ್ತಾರ ವಿವೇಚನೆಯನ್ನು ಅವರು ಮಾಡಿರಬೇಕು. ಆದರೂ ನಾಮಸ್ಮರಣೆಯಲ್ಲಿ ಪ್ರಜ್ಞಾಹೀನರಾಗುವುದು ಇಲ್ಲವೆ ಅನೇಕ ವಿಧದ ಸಂಬಂಧಗಳಿಂದ ಆತ್ಮೀಯವಾಗಿ ದೇವರ ಜತೆ ಸಂಭಾಷಿಸುವುದು, ಈ ಪ್ರಸಂಗಗಳು ಅದರಲ್ಲಿ ವಿರಳವಾಗಿ ದೊರೆಯುತ್ತವೆ. ಅಭಂಗಗಳಲ್ಲಿ ಕೆಲವೆಡೆ ಇಂಥ ವರ್ಣನೆಗಳು ಬರುತ್ತವೇನೋ ನಿಜ. ಆದರೆ ಅವರ ಹೆಸರಿನಲ್ಲಿದ್ದ

ಬಹಳಷ್ಟು ಅಭಂಗಗಳ ರಚನೆ ಸಂದೇಹಕ್ಕೀಡಾಗಿದೆಂಬುದನ್ನು ಮರೆಯುವ ಹಾಗಿಲ್ಲ. ಧ್ಯಾನಮಗ್ನನಾಗುವ ಮತ್ತು ಸಮಾಧಿಯಲ್ಲಿ ಮುಳುಗಿಬಿಡುವ ಯೋಗಿ, ಇಲ್ಲವೆ ದೇವರ ಭಜನೆಯಲ್ಲಿ ಪ್ರಜ್ಞೆ ಕಳೆದುಕೊಳ್ಳುವ ಆರ್ತಭಕ್ತ, ಇಂಥದು ರಾಮದಾಸರ ಚಿತ್ರವಲ್ಲ. ಇವೆಲ್ಲವುಗಳನ್ನು ಅವರು ಒಂದಿಷ್ಟು ಮಾಡಿರಬಹುದು. ಆದರೆ ಕೊನೆಗೆ ಅವರ ಒಲವು ತಪಸ್ಸು, ಶ್ರವಣ, ಪಠಣ, ಮನನ, ಚಿಂತನ ಮತ್ತು ಮಗ್ನತೆ ಇವುಗಳ ಮೇಲಿದೆ. ಸಾಧನೆಯ ಮಾರ್ಗದಲ್ಲಿಯೇ ರಾಮದಾಸರು ಬುದ್ಧಿಯ ಬಲದಿಂದ, ತರ್ಕದ ಪತಿಯಿಂದ, ವಿವೇಕದ ಆಶ್ರಯದಿಂದ ಹೆಚ್ಚಾಗಿ ತಿಳಿದವರಾಗಿದ್ದರು. ತೀರ ಆರಂಭದ ಕರುಣಾ ಸ್ತೋತ್ರದಲ್ಲಿಯೇ ಇದರ ಸಂಕೇತ ಅಲ್ಲಲ್ಲಿ ದೊರೆಯುತ್ತದೆ. ಪ್ರಾರಂಭದಲ್ಲಿ ರಾಮದಾಸರಿಗೆ ಯಾವ ಒಂದು ಅನುಭವ ಒದಗಿತ್ತೋ, ಅದು ಬೇಗ ಕಡಿಮೆಯಾಗುತ್ತ ಹೋಯಿತು. ಆ ಅಶರಣಾವಸ್ಥೆಯ ಬಾಧೆ ಅವರಿಗೆ ಬಹಳ ಸಮಯ ಆಗಿರಲಿಕ್ಕಿಲ್ಲ. ಹನ್ನೆರಡು ವರ್ಷಗಳ ತಪವು ಮುಗಿಯುವ ಸಮಯದಲ್ಲಿ, ಅಥವಾ ಅದಕ್ಕೂ ಸ್ವಲ್ಪ ಮುಂಚೆ ರಾಮದಾಸರಿಗೆ ಶ್ರೀರಾಮನ ದರ್ಶನವಾಗಿರಬಹುದು. ಈ ಮೊದಲು ಎರಡು ಮೂರು ಪ್ರಸಂಗಗಳಲ್ಲಿ ಅನುಗ್ರಹದ ಹಾಗೂ ಮಾರ್ಗದರ್ಶನದ ನಿಮಿತ್ತ ಶ್ರೀರಾಮಚಂದ್ರನ ದರ್ಶನವು ಅವರಿಗಾದ ಉಲ್ಲೇಖವು ಹಳೆಯ ಚರಿತ್ರ ಗ್ರಂಥಗಳಲ್ಲಿ ದೊರೆಯುತ್ತದೆ. ಆದರೆ ಅದು ಆ ಲೇಖಕರ ಶೈಲಿಯ ಒಂದು ರೀತಿ ಇಲ್ಲವೆ ಭಾವುಕತನದಿಂದ ಅವರು ಮಾಡಿದ ವರ್ಣನೆಯೆಂದು ತಿಳಿದರೆ ಸರಿ. ದೀರ್ಘ ತಪಸ್ಸು ಮುಗಿಯುವ ಕಾಲಕ್ಕೆ ದರ್ಶನದ ಉಲ್ಲೇಖವನ್ನು ಸ್ವತಃ ರಾಮದಾಸರು ಮಾಡಿದ್ದಾರೆ. "ಯೋಗಿಗಳ ದೇವ ಎನಗೆ ದೊರೆತ । ತುಂಬ ಆಕಸ್ಮಿಕ ಲಾಭ ॥ ಆಕಸ್ಮಿಕ ಒಬ್ಬ ತ್ರೈಲೋಕ್ಯ ನಾಯಕ । ಎಲ್ಲೆಡೆ ಕಂಡೆ, ಸಮ್ಮುಖ ॥" ಹೀಗೆ ಆಕಸ್ಮಿಕವಾದ ಆ ಸಾಕ್ಷಾತ್ಕಾರದ ವರ್ಣನೆಯನ್ನು ಅವರು ಒಂದು ಅಭಂಗದಲ್ಲಿ ಮಾಡಿದ್ದಾರೆ. "ಎಲ್ಲೆಡೆ ಎನ್ನ ದೇವರ ಸ್ವರೂಪ। ಅದರಲ್ಲಿಯೇ ಎನ್ನ ರೂಪ॥" ಆದರೆ ತಾವು ಬೇರೆ ಹೇಗೆ ಉಳಿಯಲೆಂದು ಬೇರೊಂದು ಅಭಂಗದಲ್ಲಿ ಅವರು ನುಡಿದಿದ್ದಾರೆ. ಇದು ಅದ್ವೈತದ ಅನುಭವವೆಂಬುದು ಸ್ಪಷ್ಟ. ಒಂದು ಪದ್ಯದಲ್ಲಿ ಅವರು ವರ್ಣಿಸುತ್ತಾರೆ. ಆ ಅನುಭವದ ಕ್ಷಣದಲ್ಲಿ ಸೂರ್ಯ ಚಂದ್ರರೇ ಮಾಯವಾದರು. ಎಲ್ಲೆಡೆ ಬೆಳಕು ಹರಡಿತು. ಆ ತೇಜಸ್ಸಿನಲ್ಲಿ ಬ್ರಹ್ಮಾಂಡವೇ ಮುಳುಗಿ ಹೋಯಿತು. ಈ ಅನುಭವವನ್ನು ಹೇಗೆ ಹೇಳುವುದು ? ಆದರೆ "ಕೋಟಿ ಸೂರ್ಯ ಘನ ಪ್ರಕಾಶ! ನಿಧಾನದಿ ಕಂಡೆ ಆ ದೃಶ್ಯ॥" ಜ್ಞಾನದೇವ, ನಾಮದೇವ, ತುಕಾರಾಮ ಮೊದಲಾದವರು ಹೇಳಿದ ಹಾಗೆ ಈ ನುಡಿಯಿದೆ.

ರಾಮದಾಸರ ವಾಣಿ ಈ ರೀತಿಯ ದೇವರ ಅನುಭವದ ವರ್ಣನೆಯಲ್ಲಿ ಬಹಳ ಸಮಯ ತೊಡಗಿರಲಿಲ್ಲ. ಅನುಭವದ ಬಲದಿಂದ ಅದ್ವೈತ ಸಾಕ್ಷಾತ್ಕಾರದ ಈ ಬಗೆಯ ವರ್ಣನೆಯನ್ನು ಅವರು ಕೆಲವೆಡೆ ಮಾಡಿದ್ದಾರೆ. ಅಲ್ಲಲ್ಲಿ ಒಂದಿಷ್ಟು ಪದಗಳಲ್ಲಿ ಹಲವು ಅಭಂಗಗಳಲ್ಲಿ ಇತರ ತತ್ತ್ವಜ್ಞಾನ ಪ್ರಕರಣಗಳಲ್ಲಿ ಕ್ವಚಿತ್ತಾಗಿ ಎಲ್ಲಿಯಾದರೂ ಅದ್ವೈತಾನುಭವದ ಧ್ವನಿ ಮೂಡುವುದು. ಸಾಕ್ಷಾತ್ಕಾರಿ ಪುರುಷರ ಲೇಖನಗಳಲ್ಲಿ

ನಾನಾ ಬಗೆಯ ವಿಶ್ವ ಉಳಿಯಕೂಡದು, ಅವರೆಲ್ಲರ ಐಹಿಕ ಪ್ರಜ್ಞೆ ನಷ್ಟವಾಗಬೇಕು ಮತ್ತವರು ಏಕಾಂಗಿ, ನಿರ್ಗುಣ, ನಿರಾಕಾರ,ಸರ್ವವ್ಯಾಪಿ ಚೈತನ್ಯ ತತ್ವಗಳಲ್ಲಿ ಅವರ ಚಿತ್ತ ಮುಳುಗಿರಬೇಕು, ಇಂಥ ಅಪೇಕ್ಷೆ ಸಂತರ ಸಂದರ್ಭಗಳಲ್ಲಿ ಎಲ್ಲರ ಮನಸ್ಸಿನಲ್ಲಿರುತ್ತದೆ. ಇದು ರಾಮದಾಸರಲ್ಲಿ ಸಮಗ್ರವಾಗಿ ಪೂರ್ಣವಾಗುವುದಿಲ್ಲ. ಇದರ ಕಾರಣ ಏನಿರಬೇಕು ? ದೇವರ ದರ್ಶನಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡಿ, ಕಠೋರ ತಪಸ್ಸನ್ನಾಚರಿಸಿದ ಈ ಪುರುಷ ತಮ್ಮ ಸಾಧನೆಯ ಪೂರ್ಣತ್ವವನ್ನು ಮುಟ್ಟಿದಾಗ, ಚಿತ್ತದಲ್ಲಿ ಮೂಡಿದ ಅಪೂರ್ವವಾದ ಅನುಭವಗಳನ್ನು ಶಬ್ದಾಂಜಲಿಯಲ್ಲಿ ತುಂಬಿ ತುಂಬಿ ಏಕೆ ಇಟ್ಟಿಲ್ಲ ? ರಾಮದಾಸರ ಉತ್ತರಕಾಲದ ಬದುಕಿನಲ್ಲಿ ಐಹಿಕ ಉಪಾಧಿಯ ಸ್ಪರ್ಶವು ಅವರ ಆಧ್ಯಾತ್ಮದಲ್ಲಿ ಸತತವಾಗಿ ಕೂಡಿಕೊಂಡಿದ್ದು, ಇದು ಅವರ ಪರಿಣಾಮವಾಗಿರಬೇಕು. ಕೇವಲ ಸರ್ವಸಂಗ ಪರಿತ್ಯಾಗ ಮಾಡಿದ ಸಾಧಕರಿಗೆ ಉಪಯೋಗವಾಗುವಂಥ ಪಾರಮಾರ್ಥಿಕ ವಿವೇಕವನ್ನು ಒಂದಿಷ್ಟು ಬದಿಗಿಟ್ಟು ಸಾಮಾನ್ಯರಾದ ಸಂಸಾರಿಕರೂ ತಿಳಿಯಲು ಪ್ರಪಂಚ ಪಾರಮಾರ್ಥಿಕ ವಿವೇಕವನ್ನು ಮುಂದೆ ಹೇಳಿದ್ದಾರೆ. ಅದಕ್ಕಾಗಿ ಕೇವಲ ಸ್ವಂತ ಅನುಭವಕ್ಕೆ ಬಂದ ಸಾಕ್ಷಾತ್ಕಾರದ ಆನಂದದಲ್ಲಿ ಮುಳುಗದೆ, ಲೋಕ ಶಿಕ್ಷಕನ ಭೂಮಿಕೆಯನ್ನು ಅವರು ಸ್ವೀಕರಿಸಿದ್ದರಿಂದ ಪಾರಮಾರ್ಥಿಕ ಅನುಭವಗಳ ಚಿತ್ರಣದಲ್ಲಿಯೇ ಅವರ ವಾಣಿ ಬೆರೆತುಕೊಂಡಿಲ್ಲ. ಲೋಕ ಕಲ್ಯಾಣಕ್ಕಾಗಿ ಕೆಲ ಐಹಿಕ ವಿಷಯಗಳ ಬಗೆಗೆ ಆ ವಾಣಿ ಹೊರಳಿವೆ.

ಟಾಕಳಿಗೆ ಬಂದು ವಾಸಿಸತೊಡಗಿದ ಬಳಿಕ ಜಗತ್ತಿನ ವ್ಯವಹಾರದ ಕೆಲ ಸಿಹಿಕಹಿ ಅನುಭವಗಳು ರಾಮದಾಸರಿಗೆ ಬಂದಿದ್ದವು. ಅವರನ್ನು ಜನರು ಹುಚ್ಚರೆಂದು ತಿಳಿದಿದ್ದರು. ಇಂಥ ಚಿಕ್ಕ ವಯಸ್ಸಿನಲ್ಲಿ ಮನೆಮಾರು ಎಲ್ಲ ಬಿಟ್ಟು ಈ ಹುಡುಗನಿಗೆ ದೇವರ ಹುಚ್ಚು ಏಕೆ ಹಿಡಿದಿದೆ, ಎಂಬ ಪ್ರಶ್ನೆ ಸರ್ವಸಾಮಾನ್ಯರಿಗೂ ಬಿದ್ದಿತ್ತು. ಮನೆಯಲ್ಲಿ ಇವರ ಹಿತೈಷಿಗಳು ಇಲ್ಲದಿರಬಹುದು ಇಲ್ಲವೆ ಸಂಸಾರದ ಹೊಣೆ ಹೊರುವ ಸಾಮರ್ಥ್ಯ ಇವರಲ್ಲಿರಲಿಕ್ಕಿಲ್ಲ. ಆದ್ದರಿಂದ ಇವರು ಈ ಮಾರ್ಗವನ್ನು ಹಿಡಿದಿರಬೇಕೆಂದು ಸರಳ, ಸುಲಭವಾದ ಉತ್ತರವನ್ನು ಕೂಡ ಅವರು ತಮ್ಮ ಬುದ್ಧಿಗನುಗುಣವಾಗಿ ಪಡೆದರು. ಕೆಲಜನ ಸಮಾಜಕಂಟಕರು ಪ್ರಾರಂಭದಲ್ಲಿಯೇ ರಾಮದಾಸರಿಗೆ ತೊಂದರೆಯನ್ನು ಕೊಡುವ ಪ್ರಯತ್ನವನ್ನು ಮಾಡಿರಬೇಕು. ಜನರು ತಮ್ಮ ಸಂಬಂಧವಾಗಿ ಕಲ್ಪಿಸಿಕೊಂಡ ತರ್ಕ ಕುತರ್ಕದ ಉಲ್ಲೇಖವನ್ನು ರಾಮದಾಸರು ಒಂದು ಅಭಂಗದಲ್ಲಿ ಮಾಡಿದ್ದಾರೆ. ತಮ್ಮ ನೇರ ಮಾರ್ಗದಲ್ಲಿ ಹೋಗುತ್ತಿರುವಾಗ, ಜನರು ತಮಗೇಕೆ ಮೋಸಮಾಡಬೇಕು ? ಎಂಬುದು ಅವರಿಗೆ ತಿಳಿದಿರಲಿಲ್ಲ. ನನ್ನ ಮನಸ್ಸು ಪರಿಶುದ್ಧವಾಗಿದೆ. ನಾನು ಯಾವ ವಿಷಯಕ್ಕೂ, ಯಾವ ರೀತಿಯಲ್ಲಿಯೂ ಕೆಟ್ಟ ಭಾವನೆಗಳನ್ನು ಹೊಂದಿಲ್ಲ. ಆದರೂ "ಬಹಳಷ್ಟು ಜನರು ನನಗೆ ಅಪಾಯವನ್ನೇಕೆ ಬಯಸುವರು ?" ಈ ಪ್ರಶ್ನೆ ಅವರಿಗೆ ಬಂದಿದೆ.

ತಾವು ಎಂದೂ ಯಾರಿಗೂ ಉದ್ದೇಶಪೂರ್ವಕವಾಗಿ ಕಠಿಣ ಪದಗಳನ್ನು

ಪ್ರಯೋಗಿಸದಿದ್ದರೂ ಜನತೆ ವ್ಯಂಗ್ಯವಾಗಿ ಮಾತನಾಡುವುದು ರಾಮದಾಸರಿಗೆ ವೈಷಮ್ಯವಾಗಿ ಕಂಡಿದೆ. ಇಂಥ ವಿಪರ್ಯಾಸಗಳ ಅನುಭವದಿಂದ ಕೆಲವು ಸಮಯ ಅವರ ಮನಸ್ಸಿನಲ್ಲಿ ಗೊಂದಲ ಆಗಿರಬೇಕು. ಟಾಕಳಿ ಮಠದಲ್ಲಿ ದೊರೆತ ಆರು ಶ್ಲೋಕಗಳ ಒಂದು ಚಿಕ್ಕ ರಚನೆಯಲ್ಲಿ ಈ ಅನುಭವಗಳ ಸ್ಪಷ್ಟ ಚಿತ್ರಣವನ್ನು ಅವರು ಮಾಡಿದ್ದಾರೆ. ಇಂಥ ಹಿತಾಹಿತ ಅನುಭವಗಳಿಂದ, ಜಗತ್ತಿನಲ್ಲಿ ಸಜ್ಜನರಂತೆ ದುರ್ಜನರೂ ಇರುತ್ತಾರೆ ಮತ್ತು ಪರೋಪಕಾರಕ್ಕಾಗಿ ದೇಹವನ್ನು ಸವೆಯಿಸುವ ಸತ್ಪುರುಷರ ಹಾಗೆ, ಭರ್ತೃಹರಿಯು ವರ್ಣನೆ ಮಾಡಿದಂತೆ, ಪರಹಿತದ ನಿರರ್ಥಕ ಹಾನಿಯನ್ನುಂಟು ಮಾಡುವ ದುಷ್ಟ ಪ್ರವೃತ್ತಿಯ ಜನರು ಕೂಡ ಇರುವ ಸತ್ಯವು ರಾಮದಾಸರಿಗೆ ಕಂಡಿದೆ. ಅವರ ಒಟ್ಟಿನ ವಿಚಾರ ಸಂಪದದಲ್ಲಿ ಸ್ಪಷ್ಟವಾಗಿ ಕೇಳಿ ಬರುವಂಥ ಪ್ರತ್ಯಕ್ಷ ವಾಸ್ತವತೆಯ ಒಂದು ಧ್ವನಿಯ ಉಗಮವನ್ನು ಪೂರ್ವ ವಯಸ್ಸಿನಲ್ಲಿ ಅವರು ಪಡೆದ ಇಂಥ ಪ್ರಕಾರದ ಅನುಭವಗಳಿಂದ ಶೋಧಿಸ ಬಹುದಾಗಿದೆ.

'ಏಕವೀಸಸಮಾಸಿ' ಇಲ್ಲವೆ ಹಳೆಯ ದಾಸಬೋಧ ಇವು ರಾಮದಾಸರ ಪ್ರಾರಂಭ ಕಾಲದ ರಚನೆಗಳು. ತತ್ತ್ವಜ್ಞಾನದ ದೃಷ್ಟಿಯಿಂದ ನೋಡಿದರೆ ಅವುಗಳಲ್ಲಿಯ ವಿವೇಚನೆಯು ಅದೆಷ್ಟೋ ಉತ್ತಮ ದರ್ಜೆಯದೆಂದು ಕಂಡುಬರುತ್ತದೆ. ಇಂಥ ವಿವೇಚನೆಯನ್ನು ಮಾಡಬಲ್ಲವರ ಉಪೇಕ್ಷೆ ಆಗಬಹುದೆಂದು ಅನ್ನಿಸಲಾರದು. ಆದರೆ ಈಗಲೂ ಕೂಡ ರಾಮದಾಸರು ಆ ಮಾನ್ಯತೆಯನ್ನು ಪಡೆಯಬೇಕಿದೆ. ತಾವು ಹುಚ್ಚರೆಂದರೆ ಹುಚ್ಚ, ಆದರೆ "ನನಗೆಂದವರೇ ಹುಚ್ಚರು !" ಹೀಗೆ ಅವರು ಉದ್ಗಾರ ವನ್ನು ತೆಗೆಯುತ್ತಾರೆ. "ಜ್ಞಾತೃತ್ವದ" ದೃಷ್ಟಿಯಿಂದ ತಮ್ಮನ್ನು ಜನ ಮನ್ನಿಸರು. ಆದರೆ ಜನಮನ್ನಣೆಯಿಲ್ಲದಿದ್ದರೂ ನನಗೆ ಅದರ ಮಹತ್ತ್ವವಿಲ್ಲ. ನಾನು ಇದೆಲ್ಲ ವನ್ನೂ ಸ್ವಂತ ಹೇಳುತ್ತಿದ್ದೇನೆ, ಅಂದರೆ ಈ ಸಂವಾದವು ಸ್ವಂತ ಸುಖಕ್ಕಾಗಿ ನಡೆದಿದೆ ಯೆಂದು ಅವರು ಒಂಬತ್ತನೆಯ ಸಮಾಸದ ಕೊನೆಗೆ ಹೇಳಿದ್ದಾರೆ. (ಹಳೆಯ ದಾಸಬೋಧ 1, 14, 15, 59, 60) ಈ ಹಳೆಯ ದಾಸಬೋಧೆಯ ಎರಡನೆಯ ಸಮಾಸದ ಪ್ರಾರಭದಲ್ಲಿ ರಾಮದಾಸರು ಸ್ವಂತಕ್ಕಾಗಿ ಮಾಡಿದ ವರ್ಣನೆ ಅಂತಃಕರಣ ವನ್ನು ತಟ್ಟುವಂತಿದೆ. ಉದ್ದೇಶಪೂರ್ವಕವಾಗಿ ಅವರು ಶ್ರೀ ರಾಮಚಂದ್ರನಿಗೆ ಹೇಳುತ್ತಾರೆ, ದೇವಾಲಯದಲ್ಲಿ ಎಲ್ಲ ಜನರು ನಿನ್ನ ಮೂರ್ತಿಯನ್ನು ಸ್ವಸ್ಥಚಿತ್ತ ದಿಂದ ನೋಡುತ್ತಲಿದ್ದಾರೆ. "ಅಲ್ಲಿ ರಾಮದಾಸ, ಮೂರ್ಖನಂಥ ! ದೀನರೂಪನಾಗಿ ಹೀಗೆ ನಿಂತ !!" ಇದರರ್ಥ ಹೀಗಾಗಬಹುದು. ಯಾವನನ್ನು ಯಾರು ಮನ್ನಿಸರು, ಅವನು ಹುಚ್ಚನೆಂದು ತಿಳಿಯಲ್ಪಡುತ್ತಾನೆ,ಹೀಗೆ ನಾನು ಜನರ ವಿವಾದದಲ್ಲಿ ಒಂದು ಬದಿಗೆ ದೀನರೂಪನಾಗಿ ನಿಂತಿದ್ದೇನೆ. "ಹುಚ್ಚ ನಾನು ಹೇಗೆ ! ವಟವಟಿಸುವೆ ಹಾಗೆ!" ಹೀಗೆ ಇನ್ನೂ ಒಂದು ಉಲ್ಲೇಖವನ್ನು ಮುಂದೆ ಒಂಬತ್ತನೆಯ ಸಮಾಸದಲ್ಲಿ ರಾಮದಾಸರು ಮಾಡುತ್ತಾರೆ. ಸ್ವಂತ ಸಂದರ್ಭದ ಈ 'ಹುಚ್ಚ' ಶಬ್ದವು ಮುಂದಿನ ಕಾಲದಲ್ಲಿ ಉಪಯೋಗಿಸಲ್ಪಟ್ಟಿಲ್ಲ.

ದೇವರ ಬಗೆಗೆ ಹುಚ್ಚು ಹತ್ತಿದ್ದಕ್ಕಾಗಿ, ಹುಚ್ಚ ಹೀಗೆ ಸ್ಪಷ್ಟವಾಗಿರಬಹುದು. ರಾಮದಾಸರ ಆ ಸಮಯದ ಸ್ಥಿತಿಯ ದೃಷ್ಟಿಯಿಂದ ತಪ್ಪೆಂದು ಹೇಳಲಾಗುವುದಿಲ್ಲ. ಆದರೆ ಜನರು ತಮ್ಮನ್ನು ಆ ಅರ್ಥದಲ್ಲಿ ಗುರುತಿಸುವುದಿಲ್ಲ, ಸುಮ್ಮನೆ ಹುಚ್ಚನೆಂದೆನ್ನುತ್ತಾರೆ ಎಂಬ ಭಾವ ಅವರ ಈ ಉದ್ಗಾರದಲ್ಲಿರಬಹುದು. ಅದು ಕರುಣಾ ಸ್ವರೂಪವನ್ನು ಪಡೆದು ನಿಲ್ಲುವಂತಿದೆ. ಮೇಲೆ ಉಲ್ಲೇಖಿಸಿದ ಜನತೆ ಮನ್ನಿಸಿದ ಪ್ರಸಂಗ ಅನಂತರ ಬರುತ್ತದೆ. ಆಯುಷ್ಯದ ಉತ್ತರಾರ್ಧದಲ್ಲಿ ರಾಮದಾಸರು ಸಮರ್ಥ ಎಂಬ ಹೆಸರಿನಿಂದ ಗುರುತಿಸಲ್ಪಟ್ಟರು. ದೌರ್ಬಲ್ಯದ ಇಲ್ಲವೇ ದೀನತನದ ಲೇಶ ಮಾತ್ರ ಸ್ಥಿತಿ ಆ ಕಾಲದಲ್ಲಿ ಕಂಡೇಬಂದಿಲ್ಲ. ಸಾಮರ್ಥ್ಯದ ಮತ್ತು ಆತ್ಮ ವಿಶ್ವಾಸದ ಮೂರ್ತಿಯೇ ಎಂಬ ಚಿತ್ರ ಜನಮನದಲ್ಲಿ ಸ್ಥಿರವಾಯಿತು. ಕರುಣಾ ಸ್ತೋತ್ರಗಳಲ್ಲಿ ಹಾಗೂ ಹಳೆಯ ದಾಸ ಬೋಧೆಗಳಲ್ಲಿಯ ಕೆಲಕೆಲ ಸ್ಥಳಗಳಲ್ಲಿ ಅದರ ತಿರುವು ಮುರುವು ರೂಪ ನಮಗೆ ಕಂಡುಬರುತ್ತದೆ. ರಾಮದಾಸರ ಇಂಥ ರೂಪವು ಒಂದಿಷ್ಟು ಸಮಯ ಮಾತ್ರವಿತ್ತು. ಬೇಗ ಅದು ಬದಲಿಸಿತು.

ರಾಮದಾಸರತ್ತ ನೋಡುವ ಜನರ ದೃಷ್ಟಿಯಲ್ಲಿ ಬದಲಾವಣೆಯಾಗುವಂಥ ಮತ್ತು ಸ್ವತಃ ಅದರ ಸ್ಥಾನದಲ್ಲಿ ಆತ್ಮವಿಶ್ವಾಸ ಚಿಗುರುವಂಥ ಒಂದು ಘಟನೆಯು, ಅವರು ತಮ್ಮ ತಪಸ್ಸನ್ನು ಪ್ರಾರಂಭಮಾಡಿದ ಮೂರು ವರ್ಷಗಳಲ್ಲಿ ಒದಗಿದೆಯೆಂದು ಅನೇಕ ಹಳೆಯ ಚರಿತ್ರಕಾರರು ಚಿತ್ರಿಸಿದ ಒಂದು ಪ್ರಸಂಗದಿಂದ ತಿಳಿಯುತ್ತದೆ. ಟಾಕಳಿಯಿಂದ ಎರಡು ಮೈಲಿ ಮೇಲಿರುವ ದಶಕಪಂಚಕ ಎಂಬ ಗ್ರಾಮದಲ್ಲಿ ಗಿರಿಧರಪಂತ ಕುಲಕರ್ಣಿ ಎಂಬ ಹೆಸರಿನ ಓರ್ವ ಗೃಹಸ್ಥನು ತಾರುಣ್ಯದಲ್ಲಿಯೇ ಕ್ಷಯ ರೋಗದಿಂದ ಪೀಡಿತನಾಗಿ ಮರಣ ಹೊಂದಿದನು. ಆತನ ಪತ್ನಿ ಅನ್ನಪೂರ್ಣೆ. ಆಕೆ ಸಹಗಮನ ಮಾಡುವ ನಿರ್ಧಾರದಿಂದ ಪತಿಯ ಶವದ ಜತೆ ಟಾಕಳಿಯ ಸಂಗಮಕ್ಕೆ ಬಂದಳು. ನಿತ್ಯದಂತೆ ರಾಮದಾಸರು ತಮ್ಮ ಸಾಧನೆಯಲ್ಲಿ ಮಗ್ನರಾಗಿದ್ದರು. ಯಾರೋ ತಪಸ್ವಿ ಸತ್ಪುರುಷರೆಂದು ಅನ್ನಪೂರ್ಣೆಯು ಅವರ ಹತ್ತಿರ ಹೋಗಿ ಅವರಿಗೆ ವಂದಿಸಿದಳು. ಮುತ್ತೈದೆಯು ನಮಸ್ಕರಿಸಿದ ಬಳಿಕ, ಆ ಸಮಯದ ಪದ್ಧತಿಯಂತೆ ರಾಮದಾಸರು ಆಶೀರ್ವಾದದ ರೂಪದಲ್ಲಿ "ಅಷ್ಟಪುತ್ರ ಸೌಭಾಗ್ಯವತಿ ಭವ" ಎಂದು ನುಡಿದರು. ಅನ್ನಪೂರ್ಣೆಯ ಮುಖದ ಮೇಲೆ ಕ್ಷೀಣವಾದ ನಗು ಮೂಡಿತು. "ಈ ಆಶೀರ್ವಾದವು ಈ ಜನ್ಮದಲ್ಲಿ ಸಫಲವಾಗುವುದೋ, ಮುಂದಿನ ಜನ್ಮದಲ್ಲಿಯೋ ?" ಎಂದು ಆಕೆ ಕೇಳಿದಳು. ಈ ಶಬ್ದವು ಕಿವಿಗೆ ಬಿದ್ದ ಕ್ಷಣದಲ್ಲಿ ರಾಮದಾಸರು ಆಶ್ಚರ್ಯಚಕಿತರಾದರು ಮತ್ತು ಅನ್ನಪೂರ್ಣೆಯತ್ತ ದೃಷ್ಟಿ ಬೀರಿದರು. ಸುತ್ತ ಜತೆಗೆ ಬಂದ ಜನರ ಗುಂಪು ಇತ್ತು. ಮುಂದೆ ಅಂತ್ಯಸಂಸ್ಕಾರದ ಸಿದ್ಧತೆ ನಡೆದಿತ್ತು. "ಈ ಸ್ತ್ರೀಯ ಪತಿ ಈದೀಗ ಮರಣ ಹೊಂದಿದನು ಮತ್ತು ಈಕೆ ಸತಿ ಹೋಗುವುದಕ್ಕಾಗಿ ಬಂದಿದ್ದಾಳೆ" ಎಂದು ಜನರು ಹೇಳಿದರು. ಇದನ್ನು ಕೇಳಿದ ಕೂಡಲೇ ರಾಮದಾಸರು ಗೊಂದಲಕ್ಕೀಡಾದರು. ಮುಖದಿಂದ ಶಬ್ದ ಹೊರಟು ಬಿಟ್ಟಿತು. ಅವರು ಹೆಣವನ್ನು ತಮ್ಮೆದುರು ತರಲು ಹೇಳಿದರು. ಅದನ್ನು ತಂದ ಬಳಿಕ

ಮನಸ್ಸಿನಲ್ಲಿ ಪ್ರಭು ರಾಮಚಂದ್ರನ ಸ್ಮರಣೆ ಮಾಡಿ, ಅವರು ಆ ದೇಹದ ಮೇಲೆ ಗಂಗೋದಕವನ್ನು ಸಿಂಪಡಿಸಿದರು. ಗಿರಿಧರನು "ರಾಮರಾಮ" ಎಂದೆನ್ನುತ್ತ ಎದ್ದು ಕುಳಿತನು.

ಕಥೆಯು ಇಷ್ಟಕ್ಕೆ ಮುಗಿದಿಲ್ಲ. ರಾಮದಾಸರು ಅನ್ನಪೂರ್ಣೆಗೆ, "ಅಮ್ಮಾ 'ಅಷ್ಟ ಪುತ್ರ ಸೌಭಾಗ್ಯವತಿಭವ' ಎಂದು ನಿನಗೆ ಆಶೀರ್ವಾದವನ್ನು ಮಾಡಲಾಗಿದೆ. ಶ್ರೀರಾಮನ ಕೃಪೆಯಿಂದ ಇನ್ನೂ ಮತ್ತೆ ಇಬ್ಬರು ಪುತ್ರರು ನಿನಗಾಗುವರು" ಎಂದು ಹೇಳಿದರು. ಈ ಘಟನೆಯು ಶಕೆ 1545 ರುಧಿರೋದ್ಗಾರಿನಾಮ ಸಂವತ್ಸರ ವೈಶಾಖ ಶುದ್ಧ ದಶಮಿಯ ದಿವಸ ನಡೆದಿತ್ತೆಂಬ ವಿವರವು ಹಳೆಯ ಗ್ರಂಥದಲ್ಲಿ ನಮೂದಿತ ವಾಗಿದೆ. ಇದರರ್ಥವಿಷ್ಟೆ, ರಾಮದಾಸರ ವಯಸ್ಸು ಆಗ ಕೇವಲ ಹದಿನೈದು ವರ್ಷ. ಈ ಆಶೀರ್ವಾದದಂತೆ ಗಿರಿಧರಪಂತನಿಗೆ ಹತ್ತು ಜನ ಪುತ್ರರಾದರು. ಅವರ ಮನೆತನದ ಹೆಸರು ಇದರಿಂದ 'ದಶಪುತ್ರೆ' ಎಂದಾಯಿತು. ಅದು ಈವರೆವಿಗೂ ನಡೆದು ಬಂದಿದೆ ಯೆಂದು ಒಬ್ಬ ಆಧುನಿಕ ಚರಿತ್ರಕಾರರು ಹೇಳಿದ್ದಾರೆ. ಈ ಕಥೆಯ ವಿವರಣೆಯಲ್ಲಿ ಅನೇಕ ಸಂದೇಹಗಳು ಮನಸ್ಸಿನಲ್ಲಿ ಮೂಡಿದ್ದರೂ ಆ ಭಾಗವನ್ನು ಬದಿಗೆ ಇಡ ಬೇಕಾಗುತ್ತದೆ. ಇಲ್ಲಿಯ ಅದ್ಭುತ ಅಂಶಗಳ ಬಗೆಗೆ ಏನು ಹೇಳಬೇಕು ? ಗಿರಿಧರನು ಅಸಾಧ್ಯವಾದ ನೋವಿನಿಂದ ಮೃತ್ಯುಶಯ್ಯೆಯಲ್ಲಿದ್ದಾಗ ಮತ್ತು ಎಲ್ಲರೂ ಆತನ ಆಶೆಯನ್ನು ಬಿಟ್ಟಾಗ ಆ ಕುಟುಂಬಕ್ಕೆ ರಾಮದಾಸರ ಸಂಪರ್ಕವು ಹೇಗೂ ಬಂದಿರ ಬೇಕು. ಆ ಕಠಿಣ ಪ್ರಸಂಗದಲ್ಲಿ ಅವರು ಎಲ್ಲರಿಗೆ ಧೈರ್ಯ ಹೇಳಿರಬೇಕು. "ಕಾಳಜಿ ಮಾಡಬೇಡಿರಿ. ಶ್ರೀರಾಮನ ಕೃಪೆಯಿಂದ ಎಲ್ಲವೂ ಸರಿಯಾಗುವದು" ಎಂದು ಅವರು ಹೇಗೂ ಸಹಜವಾಗಿ ಅಂದಿರಬಹುದು. ಮುಂದೆ ನೋವಿನಿಂದ ಚೇತರಿಸಿ ಕೊಂಡು, ದೈವೀ ಯೋಗಾಯೋಗದಿಂದ ಮೃತ್ಯುವಿನ ದವಡೆಯಿಂದ ಗಿರಿಧರ ಪಂತನು ಮರಳಿ ಬಂದ ಬಳಿಕ ಆತನ ಮನೆಯವರು ಆ ಶ್ರೇಯಸ್ಸನ್ನು ರಾಮದಾಸ ರಂಥ ಸತ್ಪುರುಷರಿಗೆ ಕೊಟ್ಟಿರಬೇಕು. ಹೀಗೆ ಈ ಕಥೆಯ ಅರ್ಥವನ್ನು ಮಾಡ ಬೇಕಾಗುತ್ತದೆ. ಗಿರಿಧರನ ಮೃತ್ಯು, ಅನ್ನಪೂರ್ಣೆ ಸತಿಹೋಗುವ ಸಿದ್ಧತೆ, ರಾಮದಾಸರ ಆಶೀರ್ವಾದ ಮತ್ತು ಅವರ ಗಂಗೋದಕ ಸಿಂಪಡಣೆಯಿಂದ ಪ್ರೇತ ಏಳುವುದು ಈ ಅದ್ಭುತಗಳ ಬಣ್ಣ ಬರುಬರುತ್ತ ಆ ಕಥೆಯಲ್ಲಿ ಏರುತ್ತ ಹೋಗಿದೆ. ಅದೇ ಮುಂದೆ ಭಾವಿಕರ ಮನದಲ್ಲಿ ಪ್ರತ್ಯಕ್ಷ ನಡೆದ ಪ್ರಸಂಗವೆಂದು ಸ್ಥಿರವಾಗಿರ ಬೇಕು.

ರಾಮದಾಸರು ಕೊಟ್ಟ ಆಶೀರ್ವಾದದ ಬಳಿಕ ಗಿರಿಧರ–ಅನ್ನಪೂರ್ಣೆ ಈ ದಂಪತಿ ಗಳಿಗೆ ಯಥಾಸಮಯ ಮೊದಲ ಮಗು ಹುಟ್ಟಿತು. ಅವರು ಆತನ ಹೆಸರನ್ನು ಉದ್ಧವನೆಂದು ಇಟ್ಟರು. ಆಗವರು ರಾಮದಾಸರ ಪಾದದಡಿ ಆ ಮಗುವನ್ನು ಅರ್ಪಿಸಿದರು. ಅವರ ಮಾನಸಪುತ್ರನೆಂದು ಆತ ತಂದೆ–ತಾಯಿಗಳ ಮನೆಯಲ್ಲಿ ಬೆಳೆಯತೊಡಗಿದನು. ಆತ ರಾಮದಾಸರ ಮಡಿಲಲ್ಲಿ ಆಡಿದನು. ಆತನ ಉಪನಯನ ವನ್ನು ರಾಮದಾಸರೇ ಮಾಡಿದರೆಂದು, ಆತನ ಭಾಗ್ಯವನ್ನು ಅನೇಕರು ವರ್ಣಿಸಿ

ದ್ದಾರೆ. ಉದ್ಧವನು ತಂದೆ ತಾಯಿ ಕೊಟ್ಟ ಮಾತನ್ನು ಪಾಲಿಸಿದನು. ರಾಮದಾಸರ ಶಿಷ್ಯತ್ವವನ್ನು ಪಡೆದನು. ಇವನೇ ಸಮರ್ಥರ ಪ್ರಥಮ ಶಿಷ್ಯನು. ತೀರ್ಥಯಾತ್ರೆಗೆ ಹೊರಡುವ ಕಾಲಕ್ಕೆ ಉದ್ಧವನು ಜತೆಯಾಗಿ ಬರಲು ಹಟ ಮಾಡಿದನು. ಆದರೆ ಆತನ ವಯಸ್ಸು ಆಗ ಕೇವಲ ಎಂಟು ವರ್ಷ. ಆತನಿಗೆ ರಾಮದಾಸರು ತಿಳುವಳಿಕೆ ಹೇಳಿದರು. "ತೀರ್ಥಯಾತ್ರೆಯಿಂದ ಮರಳಿ ಬಂದ ಬಳಿಕ ನಿನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗುವೆ" ಎಂದವರು ಹೇಳಿದರು. ನಿತ್ಯಪೂಜೆಗಾಗಿ ಆತನಿಗೆ ಗೋವಿನ ಶಗಣಿಯ ಒಂದು ಮಾರುತಿಯ ಮೂರ್ತಿಯನ್ನು ಮಾಡಿಕೊಟ್ಟರು. ಇದು ಸಮರ್ಥರು ಸ್ಥಾಪಿಸಿದ ಮೊದಲ ಮಾರುತಿ. ಇದು ಟಾಕಳಿಯಲ್ಲಿ ಇಂದಿಗೂ ನೋಡಲು ದೊರೆಯುತ್ತದೆ. ಸಮರ್ಥರು ಮುಂದೆ ಹನ್ನೊಂದು ಮಾರುತಿಗಳನ್ನು ಸ್ಥಾಪಿಸಿದರು. ಯಾವ ಯಾವ ಸ್ಥಳಗಳಲ್ಲಿ ಮಠಗಳನ್ನು ಸ್ಥಾಪಿಸಿದರೊ, ಅಲ್ಲಲ್ಲಿ ಮಾರುತಿಯ ದೇವಾಲಯಗಳನ್ನು ನಿರ್ಮಿಸಲು ತಮ್ಮ ಶಿಷ್ಯರಿಗೆ ಹೇಳಿದರು. ಮುಂದಿನ ಘಟನೆಯ ಸಂಕೇತವು ಇಲ್ಲಿ ಗೊತ್ತಾಗುತ್ತದೆ.

ಹದಿಮೂರು ಕೋಟಿ ರಾಮನಾಮದ ಸಂಕಲ್ಪವು ಹನ್ನೆರಡು ವರ್ಷಗಳಲ್ಲಿ ಪೂರ್ಣ ವಾಯಿತು. ಶ್ರೀರಾಮನ ದರ್ಶನ ಮತ್ತು ಅಷ್ಟೈತದ ಸಾಕ್ಷಾತಾರ ಈ ರೂಪದಲ್ಲಿ ಅದರ ಫಲವು ರಾಮದಾಸರ ಸೆರಗಿಗೆ ಬಿದ್ದಿತು. ಅಲ್ಲಿಯವರೆಗೆ ಟಾಕಳಿ ಮತ್ತು ಪಂಚವಟಿ ಈ ಪರಿಸರವನ್ನು ಬಿಟ್ಟು ಅವರು ಎಲ್ಲಿಯೂ ಹೊರಗೆ ಹೋಗಿರಲಿಲ್ಲ. ಈ ಕಾಲಾವಧಿಯವರೆಗೆ ಅವರು ಒಂದು ಕ್ಷೇತ್ರ ಸಂನ್ಯಾಸವನ್ನು ಸ್ವೀಕರಿಸಿದ್ದರೆಂದು ತಿಳಿಯಬಹುದು. ತೀರ್ಥಯಾತ್ರೆಯನ್ನು ಮಾಡಬೇಕೆಂದು ಈ ಸಂನ್ಯಾಸಿಯ ಮನಸ್ಸಿನಲ್ಲಿ ಮೂಡಿತು. ಪ್ರತಿ ಪ್ರಸಂಗವನ್ನು ಪೂರ್ತಿ ವಿಚಾರಿಸುವುದು ಮತ್ತು ಸಂಕಲ್ಪಪೂರ್ವಕ ಮಾಡುವುದು, ಇದು ರಾಮದಾಸರ ಚರಿತ್ರೆಯ ಒಂದು ವಿಶೇಷ ವಾಗಿದೆ. ಮನಸ್ಸಿನಲ್ಲಿ ಯಾವುದೋ ಸಂಕಲ್ಪ ಮಾಡಿಕೊಂಡು, ವಿಚಾರಪೂರ್ವಕ ವಾಗಿ ಅವರು ಮನೆಯನ್ನು ತ್ಯಜಿಸಿದರು. ತಪಸ್ಸಿನ ಸಂಕಲ್ಪ ಮಾಡಿ ಅದನ್ನು ನಿಷ್ಠೆಯಿಂದ ಪೂರೈಸಿದರು. ಈಗವರು ಇಡೀ ಭಾರತದ ತೀರ್ಥಯಾತ್ರೆಯನ್ನು ಮಾಡಬೇಕೆಂದು ಸಂಕಲ್ಪ ಮಾಡಿದರು. ಕಥಾಕೀರ್ತನೆಗಳಿಂದ ಹಾಗೂ ಪುರಾಣ ಗ್ರಂಥಗಳಿಂದ ಅನೇಕ ಕ್ಷೇತ್ರಗಳ ಹೆಸರುಗಳು ಅವರಿಗೆ ತಿಳಿದಿದ್ದವು. ಈ ಎಲ್ಲ ಪವಿತ್ರ ಸ್ಥಳಗಳನ್ನು ಪ್ರತ್ಯಕ್ಷ ಕಾಣಬೇಕೆಂದು ಹಾಗೂ ಅವುಗಳ ಮಹಿಮೆಯನ್ನು ಅನುಭವಿಸ ಬೇಕೆಂದು ಅವರು ನಿರ್ಧರಿಸಿದರು. ತೀರ್ಥಯಾತ್ರೆಯ ಮಹತ್ತ್ವವು ಮೊದಲಿ ನಿಂದಲೇ ಹಿಂದೂ ಧರ್ಮದಲ್ಲಿ ಮಾನ್ಯತೆ ಪಡೆದಿದೆ. ಆಧ್ಯಾತ್ಮಿಕ ಸಾಧನೆಯಲ್ಲಿಯೂ ತೀರ್ಥಯಾತ್ರೆಗೆ ಮಹತ್ತ್ವದ ಸ್ಥಾನ ಕೊಡಲಾಗಿದೆ. ಆಯಾ ನದಿಗಳ ನೀರು ಪವಿತ್ರವಾಗಿವೆಯೆಂದು ಜನಸಾಮಾನ್ಯರ ತಿಳಿವಳಿಕೆಯಿದೆ. ಆ ಪ್ರವಾಹಗಳಲ್ಲಿ ಸ್ನಾನ ಮಾಡಿ, ತೀರದಲ್ಲಿಯ ದೇವಾಲಯಗಳ ದೇವ ದೇವತೆಗಳ ದರ್ಶನ ಪಡೆಯು ವುದು ಪುಣ್ಯಕಾರ್ಯವೆಂದು ತಿಳಿಯಲಾಗಿದೆ. ತಮಗೂ ಈ ಲಾಭವಾಗಲೆಂದು ರಾಮದಾಸರಿಗೆ ಅನ್ನಿಸಿತು. ಶಕೆ 1554ರ ಫಾಲ್ಗುಣ ತಿಂಗಳಿನಲ್ಲಿ ತೀರ್ಥಯಾತ್ರೆಗಾಗಿ

ಹೊರಟರು. ಈ ತೀರ್ಥಯಾತ್ರೆಯು ಸತತವಾಗಿ ಹನ್ನೆರಡು ವರ್ಷ ನಡೆಯಬೇಕಿತ್ತು.

ತಮ್ಮ ಆಧ್ಯಾತ್ಮ ಬದುಕಿಗೆ ಪರಿಪೋಷಕವಾಗಬೇಕು, ಇದಕ್ಕಿಂತ ಹೆಚ್ಚಿಗೇನೂ ತೀರ್ಥಯಾತ್ರೆಗೆ ಹೊರಡುವ ಸಮಯ ರಾಮದಾಸರ ಮನಸ್ಸಿನಲ್ಲಿ ಇತ್ತೆಂಬುದು ಖಚಿತವಾಗಿ ಹೇಳಲಿಕ್ಕಾಗದು. ಇರಬಹುದು ಇಲ್ಲವೆ ಇರಲಿಕ್ಕಿಲ್ಲ. ಆ ಸಮಯ ದೇಶದಲ್ಲಿ ದುರವಸ್ಥೆಯಿತ್ತು. ಇದು ಅವರ ಭಾರತ ಪ್ರವಾಸದಲ್ಲಿ ಅನುಭವಕ್ಕೆ ಬಂದಿತು. ಆ ಸ್ಥಿತಿಯು ಯಾವ ಸಮಾಚಾರವು ತಪಶ್ಚರ್ಯೆಯ ಕಾಲಕ್ಕೆ ಅವರಿಗೆ ದೊರೆತಿತ್ತೆಂಬುದು ಖಚಿತವಾಗಿ ಹೇಳಲಾಗದು. ಹಾಗೆ ಗೊತ್ತಿರಲಾರದ ಸಂಭವ ಅಧಿಕವಾಗಿದೆ. ಅವರು ತೀರ್ಥಯಾತ್ರೆಗೆ ಹೊರಡುವ ಮೊದಲ ವರ್ಷ ಶಹಾಜಿರಾವ್ ಭೋಸಲೆ ಇವರ ದಂಡಿನ ವಾಸ್ತವ್ಯವು ಕೆಲಸಮಯ ನಾಸಿಕದಲ್ಲಿತ್ತು. ರಾಮದಾಸರಂಥ ಆ ಭಾಗದ ಪ್ರಸಿದ್ಧ ಸಾಧುಪುರುಷರ ಭೇಟಿಯನ್ನು ಅವರು ಪಡೆದಿರಬಹುದು. ಆ ಉಭಯತರ ಸಂಭಾಷಣೆಯಲ್ಲಿ ದೇಶದ ಪರಿಸ್ಥಿತಿಯ ವಿಷಯವಾಗಿ ಕೆಲ ವಿಚಾರ ವಿನಿಮಯ ಆಗಿರಬೇಕೆಂಬ ತರ್ಕವನ್ನು ಕೆಲವರು ಮಾಡಿದ್ದಾರೆ. ಹೀಗೆ ತರ್ಕಿಸುವುದರಲ್ಲಿ ಶಿವಛತ್ರಪತಿಯವರ ಮುಂದಿನ ಪರಾಕ್ರಮ ಹಾಗೂ ಸಮರ್ಥರು ಮಾಡಿದ ಶಿಷ್ಯ ಸಂಘಟನೆ ಈ ಪ್ರಸಂಗಗಳನ್ನು ಗಮನಕ್ಕೆ ತೆಗೆದುಕೊಂಡಿದ್ದಾರೆ. ಆದರೆ ತರ್ಕವನ್ನು ಬಲವಾಗಿ ಒಪ್ಪುವುದು ಬಹಳ ತೊಂದರೆದಾಯಕವಾಗಿದೆ. ಸಮಾಜದ ಪರಿಸ್ಥಿತಿಯ ಬಗೆಗೆ ವಿಶೇಷ ಆಳವಾಗಿ ವಿಚಾರ ಮಾಡಬೇಕೆಂಬ ಸಂಗತಿ, ರಾಮದಾಸರ ಅಲ್ಲಿಯವರೆಗಿನ ಜೀವನ ಕ್ರಮದಲ್ಲಿ ಇತ್ತೆಂದು ಭಾವಿಸುವುದರಲ್ಲಿ ಯಾವ ಅರ್ಥವಿಲ್ಲ. ಶಹಾಜಿ ರಾಣಿಯವರು ಇಡೀ ಆಯುಷ್ಯ ಮಾಡಿದ ಯವನರ ಸೇವೆಯನ್ನು ಕಣ್ಣ ಮುಂದೆ ತೆಗೆದುಕೊಂಡರೆ ರಾಮದಾಸರಂಥ ಹೊಸದಾಗಿ ಪರಿಚಯವಾದ ಸತ್ಪುರುಷರು ಸ್ವರಾಜ್ಯ ಸ್ಥಾಪನೆಯ ಸಂದರ್ಭದಲ್ಲಿ ಏನಾದರೂ ಹೇಳಿರಬೇಕೆಂಬುದು ಸಾಧ್ಯವಿಲ್ಲ. ನಾಸಿಕದಂಥ ಕ್ಷೇತ್ರದಲ್ಲಿ ಬಂದಿದ್ದಾರೆ. ಅಲ್ಲಿರುವ ಸಾಧುಸಂತರ ಭೇಟಿಯಾಗಬೇಕು, ಅವರನ್ನು ಆದರಿಸಬೇಕು ಎಂಬ ಭಾವನೆ ಮನಸ್ಸಿನಲ್ಲಿ ಮೂಡಿ ಶಹಾಜಿರಾಜೆಯವರು ರಾಮದಾಸರ ದರ್ಶನವನ್ನು ಪಡೆದಿರಬೇಕು. ಅದರಿಂದ ಪರಸ್ಪರ ಪರಿಚಯವಾಗಿರುವುದು ಸಾಧ್ಯವಿದೆ. ತೀರ್ಥಯಾತ್ರೆಯಿಂದ ಮರಳಿ ಬಂದ ಬಳಿಕ ಕೃಷ್ಣಾ ತೀರದಲ್ಲಿ ಸಂಚರಿಸುವಾಗ ಮಸೂರ ಗ್ರಾಮದ ಜಹಗಿರಿಯು ಶಹಾಜಿರಾಜೆ ಭೋಸಲೆಯ ಕಡೆಗೆ ಬಂದಿರುವುದನ್ನು ಅರಿತ ಮೇಲೆ ಹನ್ನೆರಡು, ಹದಿಮೂರು ವರ್ಷ ಪೂರ್ವದಲ್ಲಿ ಆದ ಭೇಟಿಯ ಸ್ಮರಣೆಯಾಗುವುದು ಮತ್ತು ಆ ಪರಿಚಯದ ಎಳೆಯಿಂದ ತಮ್ಮ ಹೊಸ ಕಾರ್ಯದ ಪ್ರಾರಂಭವನ್ನು ಆ ಜಹಗಿರಿಯ ಪ್ರದೇಶದಲ್ಲಿ ಮಾಡುವ ಅನುಕೂಲತೆಯಿರುವುದರ ಬಗೆಗೆ ಸಮರ್ಥರ ಮನಸ್ಸಿನಲ್ಲಿ ಬಂದಿದ್ದು ಅಸಾಧ್ಯವೇನಲ್ಲ. ಆದರೆ ಇದಕ್ಕಿಂತ ಹೆಚ್ಚಿನ ಪ್ರಸಂಗ ನಡೆದಿರುವ ಸಾಧ್ಯತೆ ಬಹಳ ಕಡಿಮೆಯಿದೆ.

ನಾಸಿಕದ ಭೇಟಿಯ ಕಾಲಕ್ಕೆ ಶಹಾಜಿರಾಜೆಯವರು ಶಿವಾಜಿಯ ಜನ್ಮವಾದ ವಾರ್ತೆಯನ್ನು ರಾಮದಾಸರ ಕಿವಿಗೆ ಹಾಕಿರಬೇಕೆಂಬ "ಪ್ರಬಲ ಅನುಮಾನ"ವನ್ನು

ಕೆಲಕೆಲವರು ಮಾಡಿದ್ದಾರೆ. ಈ ಎಲ್ಲ ಸೂಚಕ ಅನುಮಾನಗಳನ್ನು ಮುಂದೆ ಭವಿಷ್ಯದಲ್ಲಿ ಒದಗಿದ ಪ್ರಸಂಗಗಳ ದಿಕ್ಕುಪೆಸೆಯಿಂದ ಉತ್ತರಕಾಲದಲ್ಲಿ ಲೇಖಕರು ಮಾಡಿದ್ದಾರೆ. ನಾಸಿಕದ ಹತ್ತಿರ ದುಡು ವಾಸ್ತವ್ಯ ಮಾಡಿದ ನಿಮಿತ್ತದಿಂದ ಶಹಾಜಿರಾಜೆಯುವರ ಮತ್ತು ರಾಮದಾಸರ ಭೇಟಿಯಾದಾಗ ಶಿವಾಜಿಯ ವಯಸ್ಸು ಕೇವಲ ಎರಡು ವರ್ಷ. ಈ ವಿವರವನ್ನು ಅಲ್ಲಗಳೆಯಲಾಗದು. ಶಿವಾಜಿಯ ತಾಯಿ ಜೀಜಾಬಾಯಿಯ ಬಗೆಗೆ ಶಹಾಜಿರಾಜೆಯವರ ಒಲವು ಈ ಸಮಯ ಒಂದಿಷ್ಟು ಕಡಿಮೆಯಾಗುತ್ತಲಿತ್ತೆಂಬುದನ್ನು ಮರೆಯಲಾಗದು. ಇಷ್ಟೆಲ್ಲವನ್ನು ನಂಬಿ ಈ ಇಬ್ಬರೂ ಕರ್ತೃತ್ವಶಾಲಿ ಪುರುಷರ ಮಾತುಕತೆಯಾಗಿದ್ದನ್ನು ಮತ್ತು ಅವರಲ್ಲಿ ದೇಶದ ಪರಿಸ್ಥಿತಿಯ ವಿಚಾರವಿಮರ್ಶೆಯಾಗಿ ಏನಾದರೂ ನಿರ್ಧರಿಸಿದನ್ನು ಒಪ್ಪಿ ಕೊಂಡರು ಕೂಡ, ಈ ರೀತಿ ನಿರ್ಧರಿಸಿದ ಬಳಿಕ ಒಂದು ವರ್ಷ ಹಾಗೇ ಕಳೆಯಿತು. ಅನಂತರ ಆ ಯೋಜನೆಯಲ್ಲಿ ತಮ್ಮ ಭೂಮಿಕೆಯನ್ನು ಸಮರ್ಥರು, ಹನ್ನೆರಡು ವರ್ಷಗಳ ತೀರ್ಥಯಾತ್ರೆಯು ಪೂರ್ತಿಯಾಗುವವರೆಗೆ ಮುಂದೂಡಿದರೆಂದು ನಿರ್ಧರಿಸುವುದು ಬಹಳ ಕಷ್ಟಕರ. ಮಹಾರಾಷ್ಟ್ರದಲ್ಲಿ ಅನೇಕ ಸಾಧುಸಂತರು ತಮ್ಮ ಪಾರಮಾರ್ಥಿಕ ಜೀವನದ ಒಂದು ಭಾಗವೆಂದು ತೀರ್ಥಯಾತ್ರೆಯನ್ನು ಮಾಡಿ ದ್ದಾರೆ. ನಾಸಿಕ ಪಂಚವಟಿಯ ತಮ್ಮ ವಾಸ್ತವ್ಯದಲ್ಲಿ ಕಾರ್ಯಭಾಗವು ಪೂರ್ತಿಯಾದ ಬಳಿಕ ರಾಮದಾಸರೇ ಆ ರೀತಿ ತೀರ್ಥಯಾತ್ರೆ ಕೈಗೊಳ್ಳುವ ವಿಚಾರವನ್ನು ಮನಸ್ಸಿ ನಲ್ಲಿ ಮಾಡಿದರು. ಅವರು ಅಲ್ಲಿಂದ ಹೊರಟರು. ಇಷ್ಟು ಹೇಳುವುದು ತರ್ಕಬದ್ಧ ವಾಗಿದೆ. ಆ ತೀರ್ಥಯಾತ್ರೆಯ ಕೊನೆ ಹೇಗಾಯಿತು, ಮತ್ತೆ ಅದು ಸಮರ್ಥರ ಜೀವನದಲ್ಲಿ ಎಂಥ ತಿರುವನ್ನು ಕೊಟ್ಟಿತು, ಇದು ಮುಂದಿನ ವಿಷಯ.

ಹನ್ನೆರಡು ವರ್ಷಗಳವರೆಗೆ ನಡೆದ ಈ ದೀರ್ಘಯಾತ್ರೆಯಲ್ಲಿ ರಾಮದಾಸರು ಯಾವಾಗ, ಎಲ್ಲಿ ಹೋದರು ಈ ವಿಷಯವಾಗಿ ವಿಶ್ವಸನೀಯ ವಿವರಣೆಗಳು ದೊರೆತಿಲ್ಲ. ಬೇರೆ ಬೇರೆ ಚರಿತ್ರಕಾರರು ಮಾಡಿದ ಬಿಡಿ ಉಲ್ಲೇಖಗಳಿಂದ ಈ ತೀರ್ಥ ಯಾತ್ರೆಯ ವಿಷಯವಾಗಿ ಕೇವಲ ಒಂದು ಸ್ಥೂಲ ಅಂದಾಜನ್ನು ನಿರ್ಧರಿಸಬಹುದು. ರಾಮದಾಸರ ಜತೆ ಈ ಯಾತ್ರೆಗೆ ಯಾರಾದರೂ ಹೋಗಿರಬೇಕು. ಆದರೆ ಅವರ ಹೆಸರು ಉದ್ಧವನಿಗೆ ಗೊತ್ತಿರುವುದು ಹೆಚ್ಚಿಗೆ ಸಾಧ್ಯತೆಯಿದೆ. ಈ ಯಾತ್ರೆಯ ಸವಿಸ್ತಾರ ವರ್ಣನೆಯನ್ನು ಉದ್ಧವ ಬರೆದಿದ್ದಾನೆಂಬ ಉಲ್ಲೇಖವು ವಾಕನೀಸರ ಟಿಪ್ಪಣಿಯಲ್ಲಿದೆ. ಆದರೆ ಆ ವರ್ಣನೆಯು ಈವರೆಗೂ ದೊರೆತಿಲ್ಲ. ದಿನಕರ ಹಾಗೂ ಗಿರಿಧರ ಇವರು ಸಮರ್ಥರ ಶಿಷ್ಯರಾಗಿದ್ದ ಚರಿತ್ರಕಾರರು. ಆದರೆ ಅವರು ಹತ್ತು ಹನ್ನೆರಡು ಕ್ಷೇತ್ರಗಳ ಉಲ್ಲೇಖ ಮಾಡಿದ್ದಾರೆ. ಇಂದೂರ ಬೋಧನದಲ್ಲಿಯ ಮಠದಲ್ಲಿ 'ತೀರ್ಥಾವಳಿ' ಈ ಹೆಸರಿನ ಸಮರ್ಥರ ಹೆಸರಿನಲ್ಲಿ ಒಂದು ಪ್ರಕರಣ ದೊರೆತಿದೆ. ಅದರಲ್ಲಿ ಕೇವಲ ಕ್ಷೇತ್ರಗಳ ಹೆಸರುಗಳನ್ನು ಕೊಡಲಾಗಿದೆ. ಹೆಚ್ಚಿನ ವೃತ್ತಾಂತವಿಲ್ಲ. ರಾಮದಾಸರು ಈ ಯಾತ್ರೆಯಲ್ಲಿ ಯಾವಾಗ, ಎಲ್ಲಿ ಹೋದರು, ಅಲ್ಲಿ ಅವರು ಏನನ್ನು ಕಂಡರು, ಅವರು ಯಾರನ್ನು ಭೇಟಿಯಾದರು, ಯಾರ ಯಾರ ಜತೆ

ಯಾವ ಬಗೆಯ ಸಂಬಂಧ ಒದಗಿತು, ಈ ಎಲ್ಲ ವಿವರಗಳು ದೊರೆತಿದ್ದರೆ ಇತಿಹಾಸಕ್ಕೆ ಹೆಚ್ಚಿನ ಲಾಭವಾಗುತ್ತಲಿತ್ತು.

ಒಂದಿಷ್ಟು ದೊರೆತ ಆ ಮಾಹಿತಿಯಿಂದ ರಾಮದಾಸರು ಪಂಚವಟಿಯಿಂದ ನೇರ ವಾಗಿ ಕಾಶಿಗೆ ಹೋದರು. ಅಲ್ಲಿಂದ ಗಯೆ ಮತ್ತು ಪ್ರಯಾಗಕ್ಕೆ ಹೋದರು. ಅವರು ತ್ರಿಸ್ಥಳಿಯಾತ್ರೆಯನ್ನು ಪೂರೈಸಿದರು. ಮತ್ತೆ ಕಾಶಿಗೆ ಬಂದು ಅಲ್ಲಿ ಅವರು ಕೆಲದಿನ ಇದ್ದರು. ಕಾಶಿಯಲ್ಲಿ ಹನುಮಂತ ಘಾಟದಲ್ಲಿ ಅವರು ಮಾರುತಿಯನ್ನು ಸ್ಥಾಪಿಸಿದ ರೆಂದು ಒಂದು ಉಲ್ಲೇಖವಿದೆ. ಅಲ್ಲಿಂದ ಅವರು ಅಯೋಧ್ಯೆಗೆ ಹೋದರು. ಶ್ರೀರಾಮ ಅವರ ದೇವತೆ. ಅಯೋಧ್ಯೆಯೇ ಆತನ ನಗರ. ಅಲ್ಲಿ ರಾಮದಾಸರ ವಾಸ್ತವ್ಯ ಹೆಚ್ಚಿನ ಕಾಲ ಆಗಿರುವುದು ಸಹಜ. ಅಯೋಧ್ಯೆಯಲ್ಲಿ ಅವರು ಹನ್ನೊಂದು ತಿಂಗಳಿದ್ದರು. ಮೇರುಸ್ವಾಮಿ ಹೆಸರಿನ ಸಮರ್ಥರ ಒಬ್ಬ ಶಿಷ್ಯ ಈ ಯಾತ್ರೆಯಲ್ಲಿ ಅವರ ಜತೆಯಾಗಿದ್ದಿರಬಹುದು. ಅವನು ತನ್ನ 'ರಾಮಸೋಹಳಾ' ಎಂಬ ಗ್ರಂಥದಲ್ಲಿ ಅಯೋಧ್ಯೆಯಲ್ಲಿ ಶ್ರೀರಾಮಚಂದ್ರನ ದರ್ಶನದಿಂದ ಸಮರ್ಥರಿಗೆ ಉಂಟಾದ ಸ್ಥಿತಿಯ ವರ್ಣನೆಯಿಂದ ಈ ತರ್ಕವನ್ನು ಮಾಡಬಹುದು. ಅಯೋಧ್ಯೆಯಿಂದ ಮಥುರಾ, ಗೋಕುಲ, ವೃಂದಾವನ ಈ ಕ್ಷೇತ್ರಗಳನ್ನು ಕಂಡು ರಾಮದಾಸರು ಪಶ್ಚಿಮದತ್ತ ಪ್ರಭಾಸಪಟ್ಟಣ ಹಾಗೂ ದ್ವಾರಕಾಗಳಿಗೆ ಹೋದರು.

ದ್ವಾರಕೆಯಿಂದ ಕಾಶ್ಮೀರದಲ್ಲಿಯ ಶ್ರೀನಗರಕ್ಕೆ ಹೋಗಿ, ಅನಂತರ ಹಿಮಾಲಯ ದಲ್ಲಿನ ಬದರಿನಾರಾಯಣ ಮತ್ತು ಕೇದಾರನಾಥ ಸ್ಥಳಗಳನ್ನು ರಾಮದಾಸರು ನೋಡಿದರು. ಸಿಖ್ ಧರ್ಮ ಸಂಸ್ಥಾಪಕರಾದ ಶ್ರೀ ನಾನಕರ ಭೇಟಿ ಕಾಶ್ಮೀರದಲ್ಲಾ ಯಿತು ಮತ್ತು ಅವರ ಕೆಲವು ಸಂದೇಹಗಳಿಗೆ ರಾಮದಾಸರು ಸಮಾಧಾನಪಡಿಸಿದ ರೆಂಬ ಕಥೆಯನ್ನು ಹಳೆಯ ಗ್ರಂಥಗಳಲ್ಲಿ ಹೇಳಲಾಗಿದೆ. ಆದರೆ ನಾನಕರು ರಾಮ ದಾಸರ ಸಮಕಾಲೀನರಲ್ಲ. ಆಗ ಭೇಟಿಯಾಗಿದ್ದರೂ ಅವರ ಪಂಥದ ಒಬ್ಬ ಅನುಯಾಯಿ ಆಗಿರಬೇಕು. ಯಾತ್ರೆಯಲ್ಲಿ ವಿವಿಧ ಪಂಥಗಳ ವ್ಯಕ್ತಿಗಳ ಭೇಟಿ ಯಾಗಿದ್ದು ಸಹಜ ಸಾಧ್ಯವಿದೆ. ಈ ಯಾತ್ರೆಯಲ್ಲಿ ರಾಮದಾಸರು ಉತ್ತರ ಹಿಂದು ಸ್ಥಾನದಲ್ಲಿ ಅಧಿಕ ಸಮಯ ಇದ್ದಿರಬಹುದು. ಅವರ ಹೆಸರಿನಲ್ಲಿ ಕೆಲವು ಹಿಂದೀ ರಚನೆಗಳಿವೆ. ಈ ಸಂಗತಿಯು ಆ ದೃಷ್ಟಿಯಿಂದ ಸೂಚ್ಯವಾಗಿದೆ. ಹಿಮಾಲಯದ ಪರ್ವತ ಶಿಖರದಲ್ಲಿ ಧ್ಯಾನಸ್ಥನಾದ ಶ್ವೇತ ಮಾರುತಿಯ ದರ್ಶನಕ್ಕಾಗಿ ಹೋದಾಗ ರಾಮದಾಸರಿಗೆ ಚಳಿಯ ಬಾಧೆ ಉಂಟಾಯಿತು. ಆ ಸಮಯ ಮಾರುತಿರಾಯನು ಪ್ರತ್ಯಕ್ಷನಾಗಿ ಅವರಿಗೆ ಕಾವಿ ಬಣ್ಣದ ಬಟ್ಟೆ, ಟೊಪ್ಪಿಗೆ, ನಡುಪಟ್ಟಿ, ನಾರುಬಟ್ಟೆ, ಪಾದುಕೆ, ಯೋಗದಂಡ, ಜಪಮಾಲೆ ಈ ವಸ್ತುಗಳನ್ನು ಕೊಟ್ಟನು. ಹಾಗೇ ಅವರು ಮುಂದೆ ಲಂಕೆಗೆ ಹೋದರು. ಅಲ್ಲಿ ವಿಭೀಷಣನ ಜತೆ ಅವರ ಭೇಟಿಯಾಯಿತೆಂಬ ಕಥೆಯನ್ನು ಭಾವಿಕರು ಹೇಳುತ್ತಾರೆ. ಭಾವಿಕರ ಶ್ರದ್ಧೆಗೆ ವಾಸ್ತವತೆಯ ಇಲ್ಲವೆ ಸಂಭಾವ್ಯದ ಬಂಧನ ಇರಲಾರದು ; ಇದು ಸತ್ಯ.

ಹಿಮಾಲಯದ ಉತ್ತರ ಮಾನಸ ಯಾತ್ರೆ ಮಾಡಿ ರಾಮದಾಸರು ಜಗನ್ನಾಥಪುರಿಗೆ

ಬಂದರು. ಪೂರ್ವ ಸಮುದ್ರ ತೀರದಿಂದ ರಾಮೇಶ್ವರ ಮತ್ತು ಲಂಕೆಗೆ ಹೋದರು. ಮುಂದೆ ಕಿಷ್ಕಿಂಧೆ ಹಾಗೂ ಪಂಪಾ ಸರೋವರಗಳನ್ನು ಕಂಡು ಪಶ್ಚಿಮ ಸಮುದ್ರ ತೀರದಲ್ಲಿ ಪ್ರಯಾಣ ಮಾಡುತ್ತ ಕೊಂಕಣ ಮತ್ತು ಶ್ರೀಶೈಲ ಮಲ್ಲಿಕಾರ್ಜುನ ಈ ಮಾರ್ಗದಿಂದ ಅವರು ಕೊಲ್ಹಾಪುರಕ್ಕೆ ಬಂದರು. ಅಲ್ಲಿಂದ ಕೊಂಕಣದಲ್ಲಿಳಿದು ಅವರು ಚಿಪಳೂಣದಲ್ಲಿ ಪರಶುರಾಮನ ದರ್ಶನ ಪಡೆದರು. ಪರಶುರಾಮ ಶ್ರೀರಾಮನ ಮೊದಲಿನ ಅವತಾರ. ಜಮದಗ್ನಿ ಋಷಿಯ ಪುತ್ರ. ಸಮರ್ಥರ ಗೋತ್ರವು ಜಮದಗ್ನಿ. ನಿತ್ಯ ಸಂಧ್ಯಾವಂದನೆ ಮಾಡುತ್ತಿರುವಲ್ಲಿ ಅವರು ಅವನ ಸ್ಮರಣೆ ಮಾಡುತ್ತಿದ್ದರು. ಪರಶುರಾಮನ ದರ್ಶನ ಪಡೆದು ಆತನನ್ನು ಪ್ರಾರ್ಥಿಸುವ ಒಂದು ಸ್ತೋತ್ರವನ್ನು ಅವರು ಬರೆದಿದ್ದಾರೆ. ಅದರಲ್ಲಿ ಅವರ ಮುಂದಿನ ಕಾಲದಲ್ಲಿನ ವಿಚಾರಗಳ ಅಸ್ಪಷ್ಟ ಸೂಚನೆಗಳು ದೊರೆಯುತ್ತವೆ. ತೀರ್ಥಯಾತ್ರೆಯು ಪೂರ್ತಿಯಾಗುತ್ತ ಬಂದಿತ್ತು. ಈ ಯಾತ್ರೆಯಲ್ಲಿಯ ಅವಲೋಕನದ ಪರಿಣಾಮವಾಗಿ ಸಮರ್ಥರ ದೃಷ್ಟಿಗೆ ದೊರೆಯಬೇಕಾದ ವಿಶೇಷ ತಿರುವು, ಅವರ ಪ್ರಾರಂಭದ ಸಮಯದಲ್ಲಿ ಆಯಿತೆಂಬ ಅರ್ಥವನ್ನು ಮಾಡಲು ಸಾಧ್ಯವಿದೆ. ಚಿಪಳೂಣದಿಂದ ಮಹಾಬಳೇಶ್ವರ, ಪಂಢರಪುರ ಮತ್ತು ತ್ರ್ಯಂಬಕೇಶ್ವರ ಈ ಮಾರ್ಗಗಳಿಂದ ರಾಮದಾಸರು ಪಂಚವಟಿಗೆ ಮರಳಿ ಬಂದರು.

ರಾಮದಾಸರ ಪ್ರಥಮ ಶಿಷ್ಯ ಉದ್ಧವನ ಬಾಲ್ಯ ಮುಗಿದು, ಆತ ಈಗ ಇಪ್ಪತ್ತು ವರ್ಷದವನಾಗಿದ್ದನು. ತೀರ್ಥಯಾತ್ರೆಗೆ ಹೊರಟಾಗ ರಾಮದಾಸರು ಆಜ್ಞಾಪಿಸಿದಂತೆ ಟಾಕಳಿಯಲ್ಲಿ ಅವರು ಸ್ಥಾಪಿಸಿದ ಮಾರುತಿಯ ಉಪಾಸನೆಯನ್ನು ಉದ್ಧವನು ಮಾಡುತ್ತಲಿದ್ದನು. ಅದನ್ನು ಕಂಡು ರಾಮದಾಸರಿಗೆ ಅತೀವ ಸಂತಸವಾಗಿರಬೇಕು. ಹನ್ನೆರಡು ವರ್ಷಗಳು ಕಳೆದಿದ್ದವು. ಸಮರ್ಥರು ಈಗ ಮೂವತ್ತಾರು ವರ್ಷದವರಾಗಿದ್ದರು. ಇಡೀ ದೇಶವನ್ನು ಕಾಲಿನಡಿ ಹಾಕಿ ಸಮಾಜವನ್ನು ನಿರೀಕ್ಷಿಸಿದ್ದರು, ಅನೇಕ ಅನುಭವಗಳು ಅವರ ಸೆರಗಿನಲ್ಲಿ ಸೇರಿದ್ದವು. ಉದ್ಧವನಂಥ ವಿಕಸಿತ ವಯಸ್ಸಿನ ಶಿಷ್ಯ ಮತ್ತು ಸಮರ್ಥರಂಥ ಪರಿಪಕ್ವತೆ ಪಡೆದ ಗುರು ಇವರ ದೀರ್ಘ ಕಾಲದ ಅನಂತರದ ಈ ಭೇಟಿ ವೈಶಿಷ್ಟ್ಯಪೂರ್ಣವಾಗಿರಬೇಕು. ಆ ಉಭಯತರ ಸಂವಾದದಲ್ಲಿ ತನ್ನ ಗುರುಗಳ ವಿಚಾರಸರಣಿಯಲ್ಲಿ ಏನಾದರೂ ಪರಿವರ್ತನೆಯಾದ ಸಂಕೇತವು ತರುಣ ಉದ್ಧವನಿಗೆ ಗೊತ್ತಾಗಿರಬಹುದೆ ?

ಪಂಚವಟಿಯಲ್ಲಿ ಕೆಲದಿನ ವಿಶ್ರಾಂತಿ ಪಡೆದ ಸಮರ್ಥರು ಪೈಠಣಕ್ಕೆ ಬಂದರು. ಅಲ್ಲಿ ಅವರು ಕೀರ್ತನೆ ಮಾಡುತ್ತಿರುವಲ್ಲಿ ಅವರ ಕಣ್ಣಿಯ ಮೇಲಿನ ಗಂಟು ಕಂಡು, ಈತ ಜಾಂಬದ ಸೂರ್ಯಾಜಿಪಂತರ ಹುಡುಗ ನಾರಾಯಣನಿದ್ದಿರಬೇಕೆಂಬ ಸಂದೇಹವು ಶ್ರೋತೃಗಳಲ್ಲಿನ ಒಬ್ಬ ಬ್ರಾಹ್ಮಣನಿಗೆ ಬಂದಿತು. ಕೀರ್ತನೆ ಮುಗಿದ ಬಳಿಕ ಆತ ಸಮರ್ಥರ ಹತ್ತಿರ ಬಂದನು. ಕೆಲವು ಮಾತುಗಳಾದ ಬಳಿಕ ತನ್ನ ಸಂದೇಹ ಸರಿಯೆಂದು ಆತನ ಗಮನಕ್ಕೆ ಬಂದಿತು. ಆಗ ಆತ, “ನೀವು ಕೀರ್ತನೆ ಮಾಡುತ್ತ ತಿರುಗುತ್ತಿರುವದೇನೋ ಸರಿ. ಆದರೆ ಮನೆಯಲ್ಲಿ ನಿಮಗಾಗಿ ಶೋಕಿಸಿ

ತಾಯಿಯ ಕಣ್ಣುಗಳು ಹೋದವು. ಈಗಲಾದರೂ ಅವರಿಗೆ ಒಮ್ಮೆ ಭೇಟಿಯಾಗಿ ಏನಾದರೂ ಸಮಾಧಾನ ಹೇಳಿರಿ" ಎಂದು ಕೇಳಿಕೊಂಡನು. ಈ ಪ್ರಸಂಗ ನಿಜವಿದ್ದರೆ, ಜಾಂಬ ಬಿಟ್ಟು ಇಪ್ಪತ್ನಾಲ್ಕು ವರ್ಷ ಕಳೆದರೂ ಈಗ ತಾವು ಮನೆಗೆ ಹೋಗಬೇಕೆಂದು ಸಮರ್ಥರ ಮನಸ್ಸಿನಲ್ಲಿ ಬಂದಿರಲಿಕ್ಕಿಲ್ಲ ಎಂದೆನಿಸುತ್ತದೆ. ಮನೆಯ ಬಂಧನವು ಪೂರ್ತಿ ಕಡಿದುಕೊಂಡಿದ್ದು ನಿಜ. ಕಾರಣ, ಅನಂತರದ ಆಯುಷ್ಯದಲ್ಲಿ ಸಮರ್ಥರು ತಮ್ಮ ಜನ್ಮಗ್ರಾಮಕ್ಕೆ ಒಮ್ಮೆ ಮಾತೋಶ್ರೀಯವರ ಅನಾರೋಗ್ಯದ ಕೊನೆಯ ಸಮಾಚಾರ ತಿಳಿದಾಗ ಹೋಗಿದ್ದರು. ಹೇಗಾದರೂ ಇರಲಿ, ಕೀರ್ತನೆಯ ನಂತರ ಭೇಟಿಯಾದ ಆ ಬ್ರಾಹ್ಮಣನ ಸೂಚನೆಯನ್ನು ಅವರು ಗೌರವಿಸಿ, ಪೈಠಣದಿಂದ ಜಾಂಬಕ್ಕೆ ಹೋದರು. ಎಲ್ಲಿ ರಮ್ಯವಾದ ಬಾಲ್ಯವನ್ನು ಕಳೆದಿದ್ದರೋ ಆ ಚಿಕ್ಕ ಗ್ರಾಮದಲ್ಲಿ ಇಪ್ಪತ್ನಾಲ್ಕು ವರ್ಷಗಳಾದ ಬಳಿಕ ಪ್ರವೇಶಿದಾಗ, ಸುತ್ತಮುತ್ತಲಿನ ಹೊಲ,ಕಾಡು ಕಂಡಾಗ ಸಮರ್ಥರಿಗೆ ಏನನ್ನಿಸಿರಬೇಕು ? ಯಾವ ನೆನಪುಗಳು ಅವರ ಮನಸ್ಸಿನಲ್ಲಿ ಗೊಂದಲವನ್ನುಂಟು ಮಾಡಿರಬೇಕು ?

ಗ್ರಾಮದ ಅಗಸೆಯಲ್ಲಿ ಮಾರುತಿಯ ದೇವಾಲಯವಿತ್ತು. ಗ್ರಾಮ ಸೇರುವ ಮೊದಲು ಸಮರ್ಥರು ಆ ದೇವಾಲಯಕ್ಕೆ ಹೋದರು. ಮಾರುತಿರಾಯನಿಗೆ ಅವರು ಸಾಷ್ಟಾಂಗ ನಮಸ್ಕಾರ ಮಾಡಿದರು. ಅಣ್ಣನು ಅನುಗ್ರಹಿಸಲು ವಿಲಂಬಿಸಿದಾಗ, ಇದೇ ಮಾರುತಿಯ ಆಸರೆಯನ್ನು ಅವರು ಪಡೆದಿದ್ದರು. ಅವನೇ ಅವರಿಗೆ ಯಾವುದೋ ಪ್ರೇರಣೆಯನ್ನು ನೀಡಿದ್ದನು. ಆ ಘಟನೆಯ ಎರಡು ತಪಗಳು ಕಳೆದು ಬಳಿಕ ಅವನ ಚರಣಗಳಿಗೆ ಮತ್ತೆ ಮಸ್ತಕವನ್ನಿಡುವಲ್ಲಿ ಸಮರ್ಥರ ಮನಸ್ಸು ಒಂದು ಕೃತಾರ್ಥ ಭಾವನೆಯಿಂದ ತುಂಬಿರಬೇಕು. ಜಾಂಬ ಬಿಡುವ ಮೊದಲು ಶ್ರೀರಾಮ ದರ್ಶನದ ಅಪೇಕ್ಷೆ ಮನಸ್ಸಿನಲ್ಲಿತ್ತು. ಆ ದರ್ಶನವಾದ ಬಳಿಕ ಮತ್ತು ತೀರ್ಥಯಾತ್ರೆಯ ನಿಮಿತ್ತ ಆಸೇತು ಹಿಮಾಚಲದವರೆಗೆ ಇಡೀ ಭಾರತ ವರ್ಷವನ್ನು ಕಣ್ಣಿನಿಂದ ನೋಡಿದಾಗ ಸಮರ್ಥರ ಮನಸ್ಸಿನಲ್ಲೀಗ ಒಂದು ವಿಶೇಷ ಆಕಾಂಕ್ಷೆಯು ಅಂಕುರಗೊಂಡಿತ್ತು. ಮಾರುತಿರಾಯನ ಹತ್ತಿರ ಈಗ ಬೇರೆ ಬೇಡಿಕೆಯನ್ನಿಡಬೇಕಿತ್ತು. ಆತನ ಚರಣಗಳಿಗೆ ಮಸ್ತಕವನ್ನಿಡುವಾಗ ಇಂಥ ಕೆಲ ಹಿಂದಿನ ಆಯುಷ್ಯದ ಘಟನೆಗಳು ಮತ್ತು ಮುಂದಿನ ಭವಿಷ್ಯತ್ತಿನ ಕಾಲದ ವಿಚಾರಗಳು ಸಮರ್ಥರ ಮನಸ್ಸಿನಲ್ಲಿ ಮೂಡಿ ನಿಂತಿರಬೇಕು.

ದೇವಾಲಯದಿಂದ ಮನೆ ಬಹಳ ದೂರದಲ್ಲಿರಲಿಲ್ಲ. ಮನೆಗೆ ಹೋಗಿ ಸಮರ್ಥರು ಅಂಗಳದಲ್ಲಿ ನಿಂತರು. "ಜಯ ಜಯ ರಘುವೀರ ಸಮರ್ಥ" ಎಂದವರು ಕೂಗಿದರು. ನಿತ್ಯ ಬರುತ್ತಿರುವಂತೆ ಯಾವನೋ ಬೈರಾಗಿ ಬಾಗಿಲಿಗೆ ಬಂದಿರಬಹುದೆಂದು ಮೊದಲು ಎಲ್ಲರೂ ತಿಳಿದಿದ್ದರು. ಗುರುತು ಹತ್ತಿದ ಬಳಿಕ ಎಲ್ಲರೂ ಸಂತೋಷದಲ್ಲಿ ಮುಳುಗಿದರು. ಸಮರ್ಥರು ತಾಯಿಯ ಚರಣದಲ್ಲಿ ತಲೆಯನ್ನಿರಿಸಿದರು. ಹಿರಿಯ ಸಹೋದರನಿಗೆ ಪ್ರಣಾಮ ಸಲ್ಲಿಸಿದರು. ಸಮರ್ಥರು ಕಣ್ಣುಗಳ ಮೇಲೆ ಕೈಯಾಡಿಸಿದಾಗ ರಾಣೂಬಾಯಿಯ ದೃಷ್ಟಿ ಮರಳಿಬಂದಿತೆಂದು ಕೂಡ ಹೇಳುತ್ತಾರೆ. ಯಾರ

ಭೇಟಿಯ ಆಸೆ ಬಿಟ್ಟಂತಾಗಿತ್ತೋ, ಆ ಹುಡುಗ ಮನೆಗೆ ಮರಳಿ ಬಂದಿದ್ದ. ಈ ನಡುವಿನ ದಿನಗಳ ಎಷ್ಟೋ ಪ್ರಸಂಗಗಳು ಹೇಳುವಂತೆ, ಕೇಳುವಂತೆ ಇದ್ದವು. ಜಾಂಬದ ಈ ವಾಸ್ತವ್ಯದಲ್ಲಿ ಇಂಥ ಮಾತುಕತೆಗಳಲ್ಲಿ ಎಲ್ಲ ದಿನಗಳು ಕಳೆದಿರಬೇಕು. ಸಮರ್ಥರ ಶರೀರದ ಮೇಲೆ ಕಾವಿ ಬಟ್ಟೆಗಳಿದ್ದವು. ಮಸ್ತಕದಲ್ಲಿ ತುಂಬಾ ಜಡೆ. ಎದೆಯ ಮೇಲೆ ಗಡ್ಡ ಇಳಿಬಿದ್ದಿದ್ದವು. ಕಣ್ಣಲ್ಲಿ ಜ್ಞಾನದ, ತಪಸ್ಸಿನ, ಅನುಭವದ ತೇಜಸ್ಸು ತುಂಬಿತ್ತು. ಬಾಯಿಂದ ಅಸ್ಖಲಿತ ವಾಣಿಯ ಪ್ರವಾಹ ಹರಿಯುತ್ತಲಿತ್ತು. ತಮ್ಮ ಮಗನು ಅತೀ ದೊಡ್ಡ ಅಧಿಕಾರವನ್ನು ಪಡೆದಿದ್ದಾನೆಂದು ತಾಯಿ ಅಷ್ಟು ಗುರುತಿಸಿದರು. ಇಷ್ಟೆಲ್ಲ ವಿದ್ಯೆಯನ್ನು ತಮ್ಮ ಈ ಮಗ ಹೇಗೆ ಪಡೆದನೆಂದು ಅವರ ಮನಸ್ಸಿನಲ್ಲಿ ಸೋಜಿಗ ಮೂಡಿತು. ವಾತ್ಸಲ್ಯದ ಭರದಲ್ಲಿ ಅವರು "ನಿನಗೆ ಭೂತ ಪ್ರಸನ್ನವಾಗಿರಬೇಕೆಂದು ಅನ್ನಿಸುತ್ತದೆ" ಎಂದು ನುಡಿದರು. ಸಮರ್ಥರು ತಾಯಿಗೆ "ಹೌದು, ಅದೆಲ್ಲ ರಾಮಚಂದ್ರನ ಕೃಪೆ. ನನಗೆ ಪ್ರಸನ್ನವಾದ ಭೂತ ಅವನೇ" ಎಂದು ಉತ್ತರಿಸಿದರು. "ತಾಯೀ, ಅವೇ ಭೂತ !" ಈ ಶೀರ್ಷಿಕೆಯ ಸಮರ್ಥರ ಒಂದು ಪದವಿರುತ್ತದೆ. ಶ್ರೀರಾಮನ ಅದ್ಭುತ ಚರಿತ್ರೆಯನ್ನು ಅದರೊಳಗೆ ಸ್ವಲ್ಪದರಲ್ಲಿ ವರ್ಣಿಸಿದ್ದಾರೆ. ಆ ಪದ್ಯದ ರಚನೆಯನ್ನು ಸಮರ್ಥರು ಈ ಪ್ರಸಂಗವನ್ನು ಅನುಲಕ್ಷಿಸಿ ಮಾಡಿದ್ದಾರೆಂದು ಕಥೆಯಿದೆ. ಜಾಂಬಕ್ಕೆ ಬಂದು ತಾಯಿಯ ಪಾದಕ್ಕೆ ವಂದಿಸಿದಾಗ ಸಮರ್ಥರ ತೀರ್ಥಯಾತ್ರೆಯ ಪರ್ವ ಸಮಾಪ್ತಿಗೊಂಡಿತು.

ಕೆಲದಿನ ಜಾಂಬದಲ್ಲಿ ಇದ್ದ ಬಳಿಕ ರಾಣೂಬಾಯಿ ಹಾಗೂ ಗಂಗಾಧರ ಪಂತರನ್ನು ಬೀಳ್ಕೊಂಡು ಸಮರ್ಥರು ಗಂಗಾ ಪ್ರದಕ್ಷಿಣೆಗಾಗಿ ಹೊರಟರು. ಗೋದಾವರಿಯ ಏಳು ಪ್ರವಾಹಗಳು ಸಮುದ್ರಕ್ಕೆ ಸೇರುವ ಸ್ಥಳಕ್ಕೆ ಬಂದರು. ಅಲ್ಲಿ ಗೋದಾವರಿಗೆ ಬಲ ಪ್ರದಕ್ಷಿಣೆ ಹಾಕಿ, ನೇರ ತ್ರ್ಯಂಬಕೇಶ್ವರಕ್ಕೆ ಹೋಗಿ ಪಂಚವಟಿಗೆ ಬಂದರು. ಕೆಲವು ದಿನ ಅಲ್ಲಿದ್ದು ಅವರು ಪಂಚವಟಿಯನ್ನು ಬೀಳ್ಕೊಂಡರು. ತಮ್ಮ ಜೀವಿತ ಕಾರ್ಯ ಅಲ್ಲಿಲ್ಲ, ಅದು ಬೇರೆ ಎಡೆಯಲ್ಲಿದೆಯೆಂದು ಅವರ ನಿರ್ಧಾರವಾಗಿತ್ತು.

ಪಂಚವಟಿಯನ್ನು ಬಿಟ್ಟು ಹೊರಟ ಸಮಯದಲ್ಲಿ ಸಮರ್ಥರ ಮನದೊಳಗೆ ಎಂಥ ಭಾವ ತರಂಗ ಎದ್ದಿರಬಹುದು ? ತೀರ್ಥಯಾತ್ರೆಗೆ ಹೊರಟಾಗ ಮತ್ತೆ ಅಲ್ಲಿಗೆ ಮರಳಿ ಬರುವುದು ಇದೆಯೆಂದು ಅವರ ಮನಸ್ಸಿನಲ್ಲಿತ್ತು. ಬಾಲಕ ಉದ್ಧವನ ಒಂದು ಎಳೆ ಅಲ್ಲಿಯೇ ಇತ್ತು. ತೀರ್ಥಯಾತ್ರೆಯನ್ನು ಮುಗಿಸಿ ಪಂಚವಟಿಗೆ ಬಂದ ಬಳಿಕ ಮತ್ತೆ ಅದನ್ನು ಬಿಡುವ ಕಾಲಕ್ಕೆ, ಇನ್ನು ತಾವು ವಾಸ್ತವ್ಯಕ್ಕಾಗಿ ಇಲ್ಲಿಗೆ ಎಂದಿಗೂ ಬರುವುದಿಲ್ಲ ಎಂಬ ಕಲ್ಪನೆ ಅವರಿಗೆ ನಿಶ್ಚಿತವಾಗಿ ಗೊತ್ತಿತ್ತು. ಕೇವಲ ಹನ್ನೆರಡು ವರ್ಷದ ಒಬ್ಬ ಅನಾಥಾರ ಹುಡುಗನು ಇಂಥ ಅವಸ್ಥೆಯಲ್ಲಿ ಇಪ್ಪತ್ನಾಲ್ಕು ವರ್ಷಗಳ ಮೊದಲು, ಆತ ಪಂಚವಟಿಯ ರಾಮ ಮಂದಿರದಲ್ಲಿ ಹೆಜ್ಜೆಯನ್ನಿರಿಸಿದ್ದನು. ಆತನ ಬಾಲ ಮನಸ್ಸು ಆ ಸಮಯ ಮಾಡಿದ ಸಂಕಲ್ಪವು ಅತೀವ ದೊಡ್ಡದಾಗಿತ್ತು. ಆದರೆ ಆತನು ಯಶಸ್ವಿಯಾಗಿ ಅದನ್ನು ಪೂರ್ತಿಗೊಳಿಸಿದ್ದನು. ಅಡ್ಡಿ ಆತಂಕಗಳು

ಎದುರು ನಿಂತಿದ್ದವು. ಆದರೆ ಅವೆಲ್ಲವುಗಳನ್ನು ಅವನು ಸ್ವಂತ ಬಲದಿಂದ ದಾಟಿದ್ದನು. ಈ ಕೃತಾರ್ಥ ಭಾವನೆಯನ್ನು ಯಾವ ತಪೋಭೂಮಿಯಲ್ಲಿ ಪಡೆದಿದ್ದರೊ, ಆ ಪರಿಸರದಲ್ಲಿ ಅವರ ಸಂನ್ಯಸ್ತ ಮನಸ್ಸಿನ ಎಳೆ ಒಂದಿಷ್ಟು ಸಿಕ್ಕಿಕೊಂಡಿರಬೇಕು. ಹನ್ನೆರಡು ವರ್ಷಗಳ ಇಲ್ಲಿನ ವಾಸ್ತವ್ಯದಲ್ಲಿ ಎಷ್ಟೋ ಜನರ ಪರಿಚಯವಾಗಿರಬೇಕು. ಯಾವಾಗಲಾದರೂ ಸಹಾಯದ ಹಸ್ತವನ್ನು ಯಾರಾದರೂ ಚಾಚಿರಬೇಕು. ಒಮ್ಮೊಮ್ಮೆ ಹಲವರ ಒಂದಿಷ್ಟು ಒಳ್ಳೆಯ ಶಬ್ದಗಳು ಕಿವಿಯಲ್ಲಿ ಬಿದ್ದಿರಬೇಕು. ಆ ಎಲ್ಲರ ಪರವಾಗಿ ಮನಸ್ಸಿನಲ್ಲಿ ಸ್ನೇಹಭಾವ ಇದ್ದಿರಬೇಕು. ಕೃತಜ್ಞತೆಯ ಭಾವ ಮೂಡಿರಬೇಕು. ಇವೆಲ್ಲವು ಈಗ ಸಮರ್ಥರ ಕಣ್ಣೆದುರು ಖಚಿತವಾಗಿ ಮೂಡಿ ನಿಂತಿರಬಹುದು.

ಪಂಚವಟಿಯನ್ನು ತ್ಯಜಿಸಿದ ಬಳಿಕ, ಕೆಲ ದಿನಗಳ ಮೇಲೆ ಸಮರ್ಥರು ಅಲ್ಲಿನ ಪರಿಚಿತರನ್ನು ಉದ್ದೇಶಿಸಿ ಒಂದು ಕವಿತಾಬದ್ಧ ಪತ್ರವನ್ನು ಕಳಿಸಿದ್ದಾರೆ. ಆದರಲ್ಲಿಯ ಮೊದಲನೆಯ ಓವಿ "ಜನಸ್ಥಾನ ಗೋದಾವರಿ ತೀರ। ಪರಮಪಾವನ ಪಂಚವಟಿ। ಅಲ್ಲಿ ಬಿದ್ದಿತು ಕೃಪಾದೃಷ್ಟಿ। ರಘೋತ್ತಮ ರಾಯನದು॥" ಹೀಗಿದೆ. ಅಲ್ಲಿನ ರಾಮೋಪಾಸಕರ ಬಗ್ಗೆ ಅಸೂಯೆ ತೋರಿದೆ. ಅವರು ಅಂದಿದ್ದಾರೆ, "ನೀವು ದೇವರ ಹತ್ತಿರ। ನಾ ಬಂದು ಬಿದ್ದೆ ಬಹಳ ದೂರ।" 'ನನ್ನ ಹತ್ತಿರ ಅನೇಕ ಅವಗುಣಗಳಿರುವುದು ನಿಜ, ಆದರೂ ನಾನು "ರಘುನಾಯಕನ ಅನನ್ಯ ಸೇವಕ"ನಾಗಿದ್ದೇನೆ'ಂದು ದೃಢಪಡಿಸಿ "ಎನ್ನ ಮನ ಹೀಗೇ ರಾಮಚರಣದಲ್ಲಿರಲೆಂದು, ಇಷ್ಟು ಪ್ರಾರ್ಥಿಸಿರೀ ನೀವು ಬಂಧುವರ್ಗ।" ಹೀಗೆ ವಿನಂತಿಯನ್ನು ಸಮರ್ಥರು ಮಾಡಿದ್ದಾರೆ. ಈ ಪತ್ರವನ್ನು ಯಾರಿಗೆ ಬರೆದಿದ್ದಾರೆ ಮತ್ತು ಅವರ ಅಭಿಪ್ರಾಯದಲ್ಲಿರುವ ರಾಮೋಪಾಸಕರು ಯಾರು, ಎಂಬ ವಿವರಣೆ ದೊರೆಯುವುದಿಲ್ಲ. ಮನಸ್ಸಿಗೆ ಕಸಿವಿಸಿಯಾಗದೆ ಇರುವುದಿಲ್ಲ. ಕಾರಣ, ಆ ಎಲ್ಲ ಜನ ಸಮರ್ಥರ ನಿಕಟ ಪರಿಚಯದವರಿರಬೇಕು. ಸಮರ್ಥರ ವಿನಯ, ಶ್ರೀ ರಾಮಚರಣದಲ್ಲಿಯ ಅವರ ನಿಷ್ಠೆ ಮತ್ತು ಪೂರ್ವ ಪರಿಚಿತರ ಬಗೆಗಿರುವ ಅವರ ಕಳಕಳಿ, ಇವೆಲ್ಲವುಗಳ ಚಿತ್ರಗಳು ಈ ಪತ್ರದಲ್ಲಿ ತುಂಬಿವೆ. ಅವರ ಮನಸ್ಸು ಪಂಚವಟಿಯ ಪರಿಸರದ ನೆನಹಿನಿಂದ ತುಂಬಿ ಹೋಗಿದೆ ಎಂದು ಈ ಪತ್ರದಿಂದ ಸ್ಪಷ್ಟವಾಗಿದೆ.

ಹೀಗೆ ಪಂಚವಟಿ ಬಿಟ್ಟು ಹೋಗುವಾಗ ಸರ್ವಸಂಗಪರಿತ್ಯಾಗ ಮಾಡಿದ ಸಮರ್ಥರ ಕಾಲುಗಳು ಕೂಡ ಭಾರವಾಗಿರಬೇಕು.

# ಚಾಫಳದ ಕರ್ಮಭೂಮಿಯಲ್ಲಿ

ತೀರ್ಥಯಾತ್ರೆಯಿಂದ ಮರಳಿದ ಬಳಿಕ ನಿಶ್ಚಿತವಾಗಿ ಎಲ್ಲಿಗೆ ಹೋಗಬೇಕೆಂಬುದರ ಬಗೆಗೆ ಸಮರ್ಥರು ಖಚಿತಪಡಿಸಿಕೊಂಡಿರಲಿಕ್ಕಿಲ್ಲ. ಆದರೆ ಸಾತಾರಾ ಜಿಲ್ಲೆಯಲ್ಲಿ ಕೃಷ್ಣಾ ನದಿಯ ಪರಿಸರದ ಯಾವುದೇ ಸ್ಥಳದಲ್ಲಿ ಇರುವ ಬಗೆಗೆ ಅವರು ನಿರ್ಧಾರವನ್ನು ಮನಸ್ಸಿನಲ್ಲಿ ಮಾಡಿಕೊಂಡಿರಬೇಕು. ಜಾಂಬದಲ್ಲಿ ತಾಯಿಯ ದರ್ಶನ ಪಡೆದ ಬಳಿಕ ಮತ್ತು ಪಂಚವಟಿಯಲ್ಲಿ ಉದ್ಧವನನ್ನು ಬೀಳ್ಕೊಂಡ ಮೇಲೆ ಬೇರೆಲ್ಲಿಯೂ ಹೋಗದೆ ಅವರು ಮಹಾಬಳೇಶ್ವರಕ್ಕೆ ಬಂದರು. ಸಂನ್ಯಾಸವನ್ನು ಸ್ವೀಕರಿಸಿದ ಸಮರ್ಥರು ತಮ್ಮ ಗ್ರಾಮವಾದ ಜಾಂಬದಲ್ಲಿರುವುದು ಸಾಧ್ಯವಿರಲಿಲ್ಲ. ತಮ್ಮ ಊರಲ್ಲಿ ಯಾರ ಮಾನ್ಯತೆಯನ್ನು ಪಡೆಯಲಾಗುವುದಿಲ್ಲವೋ ಆಗ ಅಲ್ಲಿ ಪ್ರತಿಷ್ಠೆಯನ್ನು ಬೆಳೆಸಲು ಹೋಗಬಾರದೆಂದು ಒಂದು ಸ್ಥಳದಲ್ಲಿ ಸಮರ್ಥರು ಹೇಳಿದ್ದಾರೆ. ಅದರ ಆಧಾರದಿಂದ ಅಣ್ಣನ ನೆರಳಿನಲ್ಲಿ ತಮಗೆ ಮಹತ್ವ ದೊರೆಯುವುದು ಸಾಧ್ಯವಾಗದೆಂದು ಜಾಂಬದಲ್ಲಿ ಇರುವ ವಿಚಾರವನ್ನು ಅವರು ಮಾಡಿರಲಿಕ್ಕಿಲ್ಲ ಎಂಬ ಒಂದು ತರ್ಕವನ್ನು ಮಾಡಲಡ್ಡಿಯಿಲ್ಲ. ಈ ತರ್ಕವು ಸಮರ್ಥರಂಥ ಶ್ರೇಷ್ಠ ವೈಚಾರಿಕ ಪುರುಷರಿಗೆ ಕನಿಷ್ಠತನ ಕೊಡುವಂತಿದೆ. ಅವರಂಥ ವಿರಕ್ತ ವೃತ್ತಿಯ ಮತ್ತು ಧ್ಯೇಯವಾದಿ ಕರ್ತೃತ್ವಶಾಲಿ ಪುರುಷನು ಜಾಂಬದಂಥ ಅನಾನುಕೂಲ ಗ್ರಾಮದಲ್ಲಿ ಇರುವುದು ಅಸಾಧ್ಯವೆಂಬ ವಿಚಾರವು ಅವರ ಮನಸ್ಸಿನಲ್ಲಿ ಬಂದಿರಲಿಕ್ಕಿಲ್ಲ.

ಶ್ರೀರಾಮನು ಸಮರ್ಥರ ದೇವತೆ. ಆತನಿಗೆ ಸಂಬಂಧಿಸಿದ ಯಾವ ಸ್ಥಳವನ್ನಾದರೂ ತಮ್ಮ ನಿತ್ಯ ವಾಸ್ತವ್ಯಕ್ಕೆ ಆಯ್ಕೆ ಮಾಡಬೇಕೆಂಬ ವಿಚಾರವು ಸ್ವಾಭಾವಿಕವಾಗಿ ಬಂದಿತ್ತು. ಆ ದೃಷ್ಟಿಯಿಂದ ನಾಸಿಕ ಪಂಚವಟಿಯ ಪರಿಸರವು ಪೂರ್ವ ಪರಿಚಿತವೆಂದು ಕಣ್ಣೆದುರು ಬರುತ್ತದೆ. ಶ್ರೀರಾಮನಿಗೆ ಸಂಬಂಧಿಸಿಕ ಅಧಿಕ ಮಹತ್ತ್ವದ ಕ್ಷೇತ್ರವೆಂದರೆ ಅಯೋಧ್ಯೆ ಇಲ್ಲವೆ ರಾಮೇಶ್ವರದಂಥ ಕ್ಷೇತ್ರಗಳಿದ್ದವು. ಅದ್ವೈತದ ಸಾಕ್ಷಾತ್ಕಾರದವರೆಗೆ ಮುಟ್ಟಿದ ಮೇಲೆ ವಿಶಿಷ್ಟ ದೇವತಾರೂಪದ ಉಪಾಸನೆಯ ಪ್ರಯೋಜನವು ಇರಲಾರದೆಂದರೂ ಕೇವಲ ಉನ್ನತವಾದ ಆಧ್ಯಾತ್ಮಿಕ ಜೀವನವನ್ನು ಸಾಗಿಸುವ ದೃಷ್ಟಿಯಿಂದ ಗಂಗಾತೀರದಲ್ಲಿರುವ ಕಾಶಿ ಇಲ್ಲವೆ ಪ್ರಯಾಗದಂಥ ಪವಿತ್ರ ಸ್ಥಾನಗಳು ದೊರೆಯುತ್ತಿದ್ದವು. ಇಲ್ಲವೆ ದೇವಭೂಮಿಯೆಂದು ವಿಖ್ಯಾತವಾದ ಹಿಮಾಲಯದ ಪರಿಸರವು ಕಣ್ಣೆದುರು ನಿಲ್ಲುತ್ತದೆ. ಹಿಮಾಲಯದಲ್ಲಿ ಸಂಚರಿಸುವಾಗ ಒಮ್ಮೆ ವೈರಾಗ್ಯದ ಉತ್ಕಂಠತೆ ಅತಿ ಪ್ರಬಲವಾಗಿ ಸಮರ್ಥರು ದೇಹವನ್ನು ತ್ಯಾಗ ಮಾಡಲು ಹೊರಟಿದ್ದರು. ಆದರೆ ಸಾಕ್ಷಾತ್ ಶ್ರೀ ರಾಮಚಂದ್ರ ದೇವನು ಪ್ರತ್ಯಕ್ಷ

ವಾಗಿ "ನಿಮ್ಮಿಂದ ಮಹತ್ವದ ಕಾರ್ಯಗಳು ಜರುಗಬೇಕಾಗಿವೆ. ಅದಕ್ಕಾಗಿ ನಿಮ್ಮ ಶರೀರವನ್ನು ಇಂದಿನವರೆಗೆ ರಕ್ಷಿಸಲಾಗಿದೆ" ಎಂದು ಹೇಳಿದನು. ಅನಂತರ ಶರೀರ ತ್ಯಜಿಸುವ ವಿಚಾರವನ್ನು ಸಮರ್ಥರು ಬದಿಗಿಟ್ಟರು ಎಂಬ ಒಂದು ಕಥೆ ಹೇಳಲ್ಪಟ್ಟಿದೆ. ಸಮರ್ಥರ ಉತ್ತರಾಯುಷ್ಯವನ್ನು ಗಮನಕ್ಕೆ ತಂದುಕೊಂಡರೆ, ಅವರಿಂದ ಅನೇಕ ವಿಶಿಷ್ಟ ಕಾರ್ಯಗಳು ಆಗಬೇಕಾಗಿರುವುದು ಸ್ಪಷ್ಟವಾಗಿದೆ. ತಮಗೆ ಇಷ್ಟವಾದ ಕಾರ್ಯಗಳನ್ನು ಎಲ್ಲಿ ಪ್ರಾರಂಭಿಸಬೇಕು ಎಂಬ ವಿಚಾರವನ್ನು ಅವರು, ತೀರ್ಥಯಾತ್ರೆ ಮುಗಿದ ಕಾಲಕ್ಕೆ ತಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಂಡಿರಬೇಕು. ಅಂಥ ಯೋಗ್ಯವಾದ ಸ್ಥಾನವು ಆ ಪರಿಸರದಲ್ಲಿ ಎಲ್ಲಿಯಾದರೂ ದೊರೆಯಬಹುದೆಂಬ ಅಪೇಕ್ಷೆಯಿಂದ ಅವರು ಮಹಾಬಳೇಶ್ವರಕ್ಕೆ ಬಂದರು.

ಮಹಾಬಳೇಶ್ವರದ ಆ ಸ್ಥಳವು ತೀರ್ಥಯಾತ್ರೆಯ ಸಮಯ ಸಮರ್ಥರ ಕಣ್ಣ ಮುಂದೆ ಹಾಯ್ದುಹೋಗಿತ್ತು. ಸಮರ್ಥರಿಗೆ ಪರ್ವತ ಪ್ರದೇಶದ ಹಾಗೂ ಅಲ್ಲಿ ದೊರೆಯಬಹುದಾದ ನಿಸರ್ಗ ಸೌಂದರ್ಯದ ಅಭಿರುಚಿ ಸ್ವಾಭಾವಿಕವಿತ್ತು. ಸಹ್ಯಾದ್ರಿಯ ಸಾಲಿನಲ್ಲಿ ಶಿವಥರ ಕಣಿವೆ, ಹೆಳವಾಕದ ಕಣಿವೆ ಇಲ್ಲವೆ ಚಂದ್ರಗಿರಿಯ ಉನ್ನತ ಪ್ರದೇಶ ಇಂಥ ಸ್ಥಳಗಳು ಸಮರ್ಥರಿಗೆ ವಿಶೇಷ ಪ್ರಿಯವಾಗಿದ್ದವು. ಅವರಿಗೆ ಅವಶ್ಯವಾಗಿದ್ದ ಏಕಾಂತವೂ ಅಲ್ಲಿ ದೊರೆಯುವಂತಿತ್ತು. ಇವುಗಳಲ್ಲಿ ನಾಲ್ಕಾರು ಸ್ಥಳಗಳ ಮತ್ತು ಮಳೆಗಾಲದಲ್ಲಿ ಮುಸಲಧಾರೆಯಾಗಿ ಮಳೆ ಬೀಳುತ್ತಿರುವಲ್ಲಿ ಅಲ್ಲಿ ಕಾಣುವ ಅಪೂರ್ವ ಸೃಷ್ಟಿ ಸೌಂದರ್ಯದ ಚಿತ್ರಗಳ ಚಿತ್ರಣವನ್ನು ಸಮರ್ಥರು ಮಾಡಿದ್ದಾರೆ. ಅವರು ಮಾಡಿರುವ ಇಂಥ ವರ್ಣನೆಗಳಿಂದ ನಿಸರ್ಗ ಸೌಂದರ್ಯದ ಬಗೆಗೆ ಅವರಿಗಿದ್ದ ಪ್ರಜ್ಞೆಯು ನಮ್ಮ ಗಮನಕ್ಕೆ ಬರುತ್ತದೆ. ಉಲ್ಲೇಖಿಸಬಹುದಾದ ಇನ್ನೊಂದು ಸಂಗತಿಯೆಂದರೆ ಗಾಯನ ಕಲೆಯ ಬಗೆಗೆ ಸಮರ್ಥರಿಗೆ ಅಭಿರುಚಿ ಯಿತ್ತು. ಸಂಗೀತವು ಮನುಷ್ಯನ ಮನಸ್ಸಿಗೆ ಮೋಡಿ ಮಾಡುತ್ತದೆಂಬುದು ಅವರಿಗೆ ತಿಳಿದಿತ್ತು. "ಧನ್ಯ ಆ ಸಂಗೀತ ಕಲೆ !" ಎಂಬ ಉದ್ಗಾರವನ್ನು ಅವರು ತೆಗೆದಿದ್ದಾರೆ. ಸಮರ್ಥರು ಕೀರ್ತನೆ ಮಾಡುತ್ತಿದ್ದರು. ಕೀರ್ತನೆಯಲ್ಲಿ ಗಾಯನ ಕಲೆಗೆ ಮಹತ್ವದ ಸ್ಥಾನವಿದೆಯೆಂಬುದು ಅವರ ಅನುಭವವಾಗಿತ್ತು. ಅವರು ರಚಿಸಿದ ಕೆಲವು ಪದ್ಯಗಳ ಜತೆ, ಅವುಗಳನ್ನು ಯಾವ ರಾಗದಲ್ಲಿ ಮತ್ತು ಯಾವ ತಾಳದಲ್ಲಿ ಹಾಡಬಹುದೆಂಬ ವಿವರವನ್ನು ಕೊಡಲಾಗಿದೆ. ಗಾಯನದ ಅಭಿರುಚಿ ಕೇವಲ ಮೇಲುನೋಟದ್ದಾಗಿರಲಿಲ್ಲ. ಅವರಿಗೆ ಸಂಗೀತಶಾಸ್ತ್ರದ ಆಳವಾದ ಅಭ್ಯಾಸವಿದ್ದುದು ಇದರಿಂದ ಸ್ಪಷ್ಟವಾಗುತ್ತದೆ.

ವಕ್ತೃತ್ವಕಲೆಯ ಮಹತ್ವವನ್ನು ಕೂಡ ರಾಮದಾಸರು ಅರಿತಿದ್ದರು. ಅವರು ನಿತ್ಯ ಪ್ರವಚನವನ್ನು ಮಾಡುವವರೇ ಆಗಿದ್ದರು. ಶಿಷ್ಯರಿಗೆ ಉಪದೇಶ ಮಾಡ ಬೇಕಾದರೆ ಮಾತಿನ ಪ್ರಭಾವವಾಗಬೇಕೆಂಬುದು ಅವರಿಗೆ ಪೂರ್ಣ ಪರಿಚಯವಿರ ಬೇಕು. ಸಮರ್ಥರ ಪ್ರವಚನ ಇಲ್ಲದೆ ಕೇವಲ ಸಂಭಾಷಣೆಯು ಶ್ರೋತೃಗಳ ಮನಸ್ಸಿನಲ್ಲಿ ಪಡಿಯಚ್ಚನ್ನು ಮೂಡಿಸುತ್ತಿತ್ತೆಂದು ಹೇಳಬೇಕಾಗಿಲ್ಲ. ಇಂದಿಗೂ

ಅವರ ಕಾವ್ಯವಾಚನ ಮಾಡುತ್ತಿರುವಾಗ ಅಲ್ಲಿಯ ವಕ್ತೃತ್ವ ಗುಣದ ಅನುಭವವು ಬರಲಾರದೆ ಇರದು. ಆಗ ಸಮರ್ಥರು ತಮ್ಮ ಇಡೀ ಆಯುಷ್ಯವನ್ನು ಸಂನ್ಯಾಸಿ ವೃತ್ತಿಯಲ್ಲಿ ಸಾಗಿಸಿದರು. ಇಂದ್ರಿಯ ಸಂಯಮವನ್ನು ಸಾಧಿಸಿದರೂ ಈ ವಿರಕ್ತ ಪುರುಷರಿಗೆ ರಸಿಕತೆ ಒಂದು ಅಂಗವಾಗಿತ್ತು. ಅವರ ಜೀವನ ಕ್ರಮದಲ್ಲಿ ಸಾಮಾನ್ಯ ಮನುಷ್ಯನಿಗೆ ಸಹಜವಾಗಿ ಗಮನಕ್ಕೆ ಬರುವಂಥ ಸ್ಥಾನವು ಈ ರಸಿಕತೆಯಲ್ಲಿ ದೊರೆತಿಲ್ಲ, ಇದೂ ಅಷ್ಟೇ ಸತ್ಯ. ಅವರ ರಸಿಕತೆಯಲ್ಲಿ ಮಧುರವಾದ ಇಲ್ಲವೆ ಕೋಮಲವಾದ ಜತೆ ಇಲ್ಲ. ಅದು ಓಜಸ್ಸಿನಿಂದ ಇಲ್ಲವೆ ಪೌರುಷದ ಅಂಗದಿಂದ ಸಾಗುವಂತಿದೆ. ಅವರು ಕಲ್ಪಿಸುವ ನಿಸರ್ಗದ ಸೌಂದರ್ಯವು ಭವ್ಯತೆಯ ಇಲ್ಲವೆ ರೌದ್ರತೆಯ ವರ್ಣನೆ ಪಡೆದುಕೊಂಡು ಕಣ್ಣಮುಂದೆ ನಿಲ್ಲವಂತಿದೆ. ತೀರ್ಥಯಾತ್ರೆ ಪೂರ್ತಿಯಾದ ಬಳಿಕ ಅವರು ಬಂದು ತಲುಪಿದ ಆ ಮಹಾಬಳೇಶ್ವರದ ಪರಿಸರವು ಈ ಪರೀಕ್ಷೆಗೆ ಒಳಗಾಗುತ್ತದೆ.

ಇಂದಿನ ಮಹಾಬಳೇಶ್ವರವು ಸಹ್ಯಾದ್ರಿಯಲ್ಲಿ ಒಂದು ತಂಪು ಹವೆಯ ಗಿರಿನಿವಾಸ ವೆಂದು ಪ್ರಸಿದ್ಧಿ ಪಡೆದಿದೆ. ಸಮುದ್ರಪಾತಳಿಯಿಂದ ಅದು ನಾಲ್ಕು ಸಾವಿರ ಅಡಿ ಎತ್ತರದಲ್ಲಿದೆ. ಆದ್ದರಿಂದ ಅದು ಬೇಸಿಗೆಯಲ್ಲಿ ಪ್ರವಾಸಿಗರಿಂದ ತುಂಬಿಹೋಗುತ್ತದೆ. ಮುನ್ನೂರ ವರ್ಷಗಳ ಹಿಂದೆ ಈ ಸ್ಥಿತಿ ಇರಲಿಲ್ಲ. ಆ ಕಾಲದಲ್ಲಿ ಅಲ್ಲಿ ನಿಬಿಡವಾದ ಅರಣ್ಯವಿತ್ತು. ಕಾಡುಮೃಗಗಳು ಸಂಚರಿಸುತ್ತಿದ್ದುವು. ಮಹಾಬಳೇಶ್ವರವು ಶಂಕರರ ಪುರಾತನ ಸ್ಥಾನವಾಗಿದೆ. ಆ ಇಡೀ ಪ್ರದೇಶವು ಬ್ರಹ್ಮಾರಣ್ಯ ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಕೃಷ್ಣ ವೇಣ್ಣಾ, ಗಾಯತ್ರಿ, ಸಾವಿತ್ರಿ ಮತ್ತು ಸರಸ್ವತಿ ಈ ಐದು ನದಿಗಳ ಉಗಮವು ಇಲ್ಲಿಯೇ ಆಗಿದೆ. ಈ ಉಗಮದ ಒಂದಿಷ್ಟು ಮೇಲಿನ ಬದಿಯಲ್ಲಿ ಸಮರ್ಥರು ಸ್ಥಾಪಿಸಿದ ಮಾರುತಿಯಿದ್ದಾನೆ. ಕೃಷ್ಣಾ ತೀರಕ್ಕೆ ಬಂದ ಬಳಿಕ, ಇದು ಅವರು ಸ್ಥಾಪಿಸಿದ ಮೊದಲ ಮಾರುತಿ. ಸಮರ್ಥರ ವಾಸ್ತವ್ಯವು ಆ ಸ್ಥಳದ ಅಕ್ಕಪಕ್ಕದಲ್ಲಿದ್ದಿರಬೇಕು. ಅಲ್ಲಿಂದ ಅವರು ಸ್ನಾನಕ್ಕಾಗಿ ಹತ್ತಿರದ ನದಿಗೆ ಹಾಗೂ ಭಿಕ್ಷೆಗಾಗಿ ಆ ನದೀತೀರದ ಗ್ರಾಮಗಳಿಗೆ ಬರುತ್ತಿರುವ ಕ್ರಮವನ್ನು ಸಮರ್ಥರು, ಅನಂತರದ ಆಯುಷ್ಯದಲ್ಲಿ ಕೊನೆಯವರೆಗೂ ರೂಢಿಸಿಕೊಂಡಿದ್ದರು. "ಹೋಗಿ ವಾಸಿಸಿದೆ ಗುಹೆಯಲ್ಲಿ! ಯಾರೂ ನೋಡಲಿಲ್ಲ!" ಹೀಗೆ ವಿರಾಗಿಮಹಂತನ ವರ್ಣನೆ ಯನ್ನು ಅವರು ಒಂದು ಸ್ಥಳದಲ್ಲಿ ಮಾಡಿದ್ದಾರೆ. ಅದು ಸಮರ್ಥರಿಗೆ ಪೂರ್ತಿಯಾಗಿ ಹೋಲುತ್ತದೆ.

ಭಿಕ್ಷಾವೃತ್ತಿ ಹಾಗೂ ಕೀರ್ತನೆ ಪ್ರವಚನಗಳಿಂದ ಸಮರ್ಥರಿಗೆ ಸರ್ವಸಾಮಾನ್ಯ ಜನತೆಯ ಸಂಪರ್ಕವು ಬರುತ್ತಲಿತ್ತು. ಭಿಕ್ಷೆಯ ನಿಮಿತ್ತ ಜನರನ್ನು ಪರೀಕ್ಷಿಸಲು ಬರುತ್ತದೆ. ಸಮಾಜದ ನಿರೀಕ್ಷಣಾ ಕಾರ್ಯವು ಸಹಜ ರೀತಿಯಲ್ಲಿ ಆಗುತ್ತದೆಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದ್ದಾರೆ. ದಾಸಬೋಧೆಯಲ್ಲಿಯೂ ಅವರು ಭಿಕ್ಷೆಯ ಬಗೆಗೆ ಸ್ವತಂತ್ರ 'ಸಮಾಸ' ಬರೆದಿದ್ದಾರೆ. (ದಶಕ ಹದಿನಾಲ್ಕು, ಸಮಾಸ ಎರಡು). ಅವರು ಲೋಕ ಸಂಗ್ರಹ*ವನ್ನು ಸಾಧಿಸಬೇಕಿತ್ತು. ಸ್ವಂತಕ್ಕೆ ಅವರಿಗೆ

---

*ಸಮಾಜ ವ್ಯವಸ್ಥೆಗಾಗಿ ವಿಶಿಷ್ಟ ಸಾಧಕರನ್ನು ಸೇರಿಸಿ ತಮ್ಮ ಜತೆ ಮಾಡಿಕೊಳ್ಳುವ ಧೋರಣೆ.

ಏಕಾಂತವು ಬೇಕಿದ್ದರೂ ಲೋಕಾಂತದ ಸಹವಾಸವನ್ನು ಮರ್ಯಾದಿತ ರೀತಿಯಲ್ಲಿ ಅವರು ಸ್ವೀಕರಿಸಬೇಕಾಗಿತ್ತು. ಇಂಥ ಜನಸಂದಣಿಯ ಸಂಪರ್ಕವು ವರ್ಷಗಟ್ಟಲೆ ಇರುತ್ತಿದ್ದರೂ ಸಮರ್ಥರು ತಮ್ಮ ವೈರಾಗ್ಯದಲ್ಲಿ ಅಣುಮಾತ್ರ ತೊಂದರೆಯಾಗದಂತೆ ನೋಡಿಕೊಂಡರು. ಈ ಮಧ್ಯೆ ಅವರ ನಿಸ್ಪೃಹತೆಯು ಹಾಗೂ ನಿರಪೇಕ್ಷತೆಯು ಸಾಕ್ಷಿ ಗೊತ್ತಾಗುತ್ತದೆ. ಮಹಾಬಳೇಶ್ವರದಲ್ಲಿ ಅವರ ಕೀರ್ತನೆ ಪ್ರವಚನಗಳಾದವು. ಈ ಪ್ರವಚನವನ್ನು ಕೇಳಲು ಬರುವವರಲ್ಲಿ ಅನಂತ ಭಟ್ಟ ಹಾಗೂ ದಿವಾಕರ ಭಟ್ಟ ಎಂಬ ದೇಶಪಾಂಡೆ ಮನೆತನದ ಇಬ್ಬರು ತರುಣರು ಇವರತ್ತ ಆಕರ್ಷಿತರಾದರು. ಸಮರ್ಥರು ಅವರ ಯೋಗ್ಯತೆಯನ್ನು ಅರಿತು, ಅವರಿಬ್ಬರಿಗೆ ಅನುಗ್ರಹವನ್ನು ಕೊಟ್ಟರು. ದಿವಾಕರ ಭಟ್ಟ ಸಮರ್ಥರ ಪ್ರಮುಖ ಶಿಷ್ಯರಲ್ಲಿ ಒಬ್ಬರು. ತೀರ್ಥಯಾತ್ರೆಯ ಬಳಿಕ ಮಹಾಬಳೇಶ್ವರದ ಪ್ರಥಮ ವಾಸ್ತವ್ಯದಲ್ಲಿ ಅವರ ಭೇಟಿಯಾಗುವುದು ವಿಶೇಷ ಯೋಗಾಯೋಗವೆಂದು ಹೇಳಬೇಕು. ಇದೊಂದು ಮುಂದಿನ ಕಾರ್ಯಗಳ ಪ್ರಸಾರ ಚಿಹ್ನೆ ಎಂದೆನ್ನಬೇಕು.

ಇಂಥ ಶಿಷ್ಯರನ್ನು ಶೋಧಿಸುವುದು, ಅವರಿಗೆ ದೀಕ್ಷೆ ಕೊಡುವುದು, ಅವರ ಮೇಲೆ ಸಂಸ್ಕಾರ ಮಾಡುವುದು, ಅವರಿಗೆ ಒಂದಿಷ್ಟು ಕಾರ್ಯಭಾರ ವಹಿಸಿಕೊಡುವುದು, ಇದೊಂದು ಸಮರ್ಥರ ಅನಂತರದ ಆಯುಷ್ಯದಲ್ಲಿ ಮಹತ್ವದ ಭಾಗವಾಗಿದೆ. ಇದರ ಜತೆಗೆ ಮಠಗಳ ಸ್ಥಾಪನೆ, ಅಲ್ಲಿ ಸಮಾಜ ವ್ಯವಸ್ಥೆಗಾಗಿ ವಿಶಿಷ್ಟ ಸಾಧಕರನ್ನು ಸೇರಿಸಿ ತಮ್ಮ ಜತೆ ಮಾಡಿಕೊಳ್ಳುವ ಧೋರಣೆ, ನಡೆಯಿಸಬೇಕಾದ ಮಾರುತಿಯ ಉಪಾಸನೆ, ಶ್ರೀರಾಮನ ಉತ್ಸವ ಮತ್ತು ಲೋಕಸಂಗ್ರಹದಂಥ ಚಟುವಟಿಕೆಗಳು ಬರುತ್ತಿದ್ದವು. ಸರ್ವಸಾಮಾನ್ಯ ಧಾರ್ಮಿಕ ಜೀವನದ ಭಾಗವೆಂದು ಯಾರನ್ನು ಅನುಗ್ರಹಿಸಬೇಕು ಇಲ್ಲವೆ ವಿಶಿಷ್ಟ ಮಂತ್ರಗಳ ಉಪದೇಶ ಕೊಡಬೇಕು ಇವುಗಳನ್ನು ಸಮರ್ಥರು ಬಾಲ್ಯದಲ್ಲಿ ತಮ್ಮ ಜಾಂಬದ ಮನೆಯಲ್ಲಿ ನೋಡಿದ್ದರು. ಆ ಪ್ರಸಂಗ ಗಳು ಅವರಿಗೆ ಹೊಸತಾಗಿರಲಿಲ್ಲ. ಆದರೆ ಆ ಅನುಗ್ರಹದಲ್ಲಿ ಕೇವಲ ಧಾರ್ಮಿಕ ಅಂಗ ವಿತ್ತು. ಸಮಾಜದ ಬದುಕಿನಲ್ಲಿ ಅದರ ಯಾವ ಸಂಬಂಧವೂ ಇರಲಿಲ್ಲ. ಅಲ್ಲದೆ ಆ ಅನುಗ್ರಹವು ಆಯಾ ಅನುಗ್ರಹಿತರಿಗಾಗಿ ಕೇವಲ ವ್ಯಕ್ತಿಗತವಾಗಿತ್ತು. ಸಮರ್ಥರು ಈ ಅನುಗ್ರಹದಲ್ಲಿ ಒಂದಿಷ್ಟು ಐಹಿಕ ಹಾಗೂ ಸಾಮಾಜಿಕ ಪರಿಮಾಣವನ್ನು ಕೊಟ್ಟರು. ಒಂದು ವ್ಯಾಪಕವಾದ ಅಡಿಪಾಯವನ್ನು ಹಾಕಿದರು. ಈ ಮೂಲಕ ಒಂದು ಸುವ್ಯವಸ್ಥಿತ ಶಿಷ್ಯ ಸಂಪ್ರದಾಯವನ್ನು ನಿರ್ಮಿಸಿದರು. ಬೇರೆ ಬೇರೆ ಗ್ರಾಮಗಳಲ್ಲಿ ಮಠಗಳನ್ನು ಸ್ಥಾಪಿಸಿ ಅಲ್ಲಿ ಶಿಷ್ಯರನ್ನು ಮಹಂತ ಇಲ್ಲವೆ ಆಧಿಪತ್ಯ ಕ್ಕಾಗಿ ನಿಯಮಿಸಿದರು. ಈ ಮಾಧ್ಯಮದ ಸಹಾಯದಿಂದ ಬಹಳಷ್ಟು ದೊಡ್ಡ ಪ್ರಮಾಣದಲ್ಲಿ ಲೋಕ ಶಿಕ್ಷಣವು ಸಾಧಿಸಿತು.

ಅಧಿಕಾರಿ ಶಿಷ್ಯರನ್ನು ಸೇರಿಸುವುದು, ಗ್ರಾಮಾಂತರಗಳಲ್ಲಿ ಮಠ ಸ್ಥಾಪನೆಮಾಡು ವುದು ಮತ್ತು ಈ ಮೂಲಕ ಜನಜಾಗೃತಿ ಸಾಧಿಸುವುದು, ಈ ಎಲ್ಲ ಸಾಂಪ್ರದಾಯಿಕ

ದಿಕ್ಕುಗಳು ಆರಂಭದಿಂದಲೇ ಸಮರ್ಥರ ಕಣ್ಣೆದುರು ಸ್ಪಷ್ಟವಾಗಿ ಮೂಡಿದ್ದವೆಂದು ಆಗ್ರಹಪಡಬೇಕಾದ ಯಾವ ಕಾರಣಗಳಿಲ್ಲ. ಒಂದೊಂದು ಹೆಜ್ಜೆ ನಡೆಯುತ್ತಿರುವುದೆಂದರೆ ಕಣ್ಣೆದುರಿನ ಮುಂದಿನ ದಾರಿ ಹೆಚ್ಚು ಹೆಚ್ಚಿಗೆ ಸ್ಪಷ್ಟವಾಗುತ್ತ ಹೋಗುವುದು. ಹಾಗೆ ಇಲ್ಲಿಯೂ ಆಗಿರಬೇಕು. ತೀರ್ಥಯಾತ್ರೆಯ ಕಾಲದಲ್ಲಿಯೇ ಸಮರ್ಥರು ಹಲವರಿಗೆ ಅನುಗ್ರಹವನ್ನು ಕೊಟ್ಟ ಬಗೆಗೆ, ಶಿಷ್ಯರನ್ನು ಮಾಡಿಕೊಂಡ ಬಗೆಗೆ ಇಲ್ಲವೆ ಕೆಲವು ಗ್ರಾಮಗಳಲ್ಲಿ ಮಠಗಳನ್ನು ಸ್ಥಾಪಿಸಿದ ಬಗೆಗೆ ಹಳೆಯ ಚರಿತ್ರೆ ಗ್ರಂಥಗಳಲ್ಲಿ ಉಲ್ಲೇಖಗಳು ಹೆಸರು ಸಹಿತ ಬಂದಿವೆ. ಈ ಎಲ್ಲ ಶಿಷ್ಯರು ಮುಂದೆ ಸ್ಥಿರವಾಗಿ ನಿಂತಿರಬಹುದೆಂದಲ್ಲ, ಆಯಾ ಮಠಗಳ ಕಾರ್ಯ ನಡೆಯುತ್ತಿತ್ತೆಂದೂ ಅಲ್ಲ, ಆದರೆ ತೀರ್ಥಯಾತ್ರೆಯ ನಿಮಿತ್ತ ಸಂಚರಿಸುತ್ತಿರುವಲ್ಲಿ ಯಾರಾದರೂ ಒಂದಿಷ್ಟು ಜನರಿಗೆ ಅನುಗ್ರಹಿಸಿರಬೇಕು ಇಲ್ಲವೆ ಎಲ್ಲಿಯಾದರೂ ಒಂದಿಷ್ಟು ಮಠ ಸ್ಥಾಪಿಸಿರಬೇಕು. ಯಾವ ಮಾರ್ಗದಿಂದ ಹೋದರೆ, ತಮ್ಮ ಸಮಾಜದ ಮೇಲೆ ಸಂಸ್ಕಾರ ಮಾಡುವುದು ಸಾಧ್ಯ ಎಂಬ ಅನುಮಾನ ಸಮರ್ಥರಲ್ಲಿ ಬಂದು ಹೋಗಿರಬೇಕು. ಮಹಾಬಳೇಶ್ವರದಲ್ಲಿ ಅನಂತಭಟ್ಟ ಹಾಗೂ ದಿವಾಕರಭಟ್ಟ ಇವರಿಗೆ ಅನುಗ್ರಹ ಕೊಡುವುದರಿಂದ ಆ ಪ್ರಕ್ರಿಯೆ ಪ್ರಾರಂಭ ವೇಗದಿಂದ ಹೆಚ್ಚಾಯಿತು.

ಚಾತುರ್ಮಾಸದ ನಾಲ್ಕು ತಿಂಗಳು ಮಹಾಬಳೇಶ್ವರದಲ್ಲಿದ್ದು ಸಮರ್ಥರು ವಾಯಿಗೆ ಬಂದರು. ಅಲ್ಲಿ ಅವರು ಕೆಲವು ದಿನ ವಾಸ್ತವ್ಯ ಮಾಡಿದರು. ವಾಯಿಯಲ್ಲಿಯೂ ಅವರು ಮಾರುತಿಯ ಸ್ಥಾಪನೆ ಮಾಡಿದರು. ರೋಕಡೋಬನ ಮಾರುತಿಯೆಂದು ಇಂದು ಗುರುತಿಸಲ್ಪಡುತ್ತದೆ. ಥಿಟೆ, ಪಿಟಕೆ, ಚಿತ್ರಾವ್ ಇಂಥ ಕೆಲವು ಜನರಿಗೆ ಮತ್ತು ಅವರ ಕುಟುಂಬ ಸ್ತ್ರೀಯರಿಗೆ ಅವರು ಅನುಗ್ರಹ ಕೊಟ್ಟರು. ವಾಯಿಯಿಂದ ಅವರು ಸಾತಾರಾ ಹತ್ತಿರದ ಕೃಷ್ಣಾ ಮತ್ತು ವೆಣ್ಣಾ ಇವುಗಳ ಸಂಗಮದಲ್ಲಿದ್ದ ಮಾಹುಲಿ ಕ್ಷೇತ್ರಕ್ಕೆ ಹೋದರು. ಮಾಹುಲಿಯ ಹತ್ತಿರವೇ ಇರುವಂಥ ಜರಂಡಿಯ ಉನ್ನತ ಬೆಟ್ಟದ ಮೇಲೆ ಅವರು ಕೆಲ ದಿನ ಇದ್ದರು. ಅಲ್ಲಿಂದ ಅವರು ಸಂಗಮಕ್ಕೆ ನಿತ್ಯ ಸ್ನಾನಕ್ಕಾಗಿ ಬರುತ್ತಿದ್ದರು. ಕ್ಷೇತ್ರದಲ್ಲಿ ಭಿಕ್ಷೆ ಬೇಡುತ್ತಿದ್ದರು. ಇಲ್ಲಿಯ ನದಿಯ ಮರಳಿನಲ್ಲಿ ಅವರು ಚಿಕ್ಕ ಮಕ್ಕಳ ಜತೆ ಆಡುತ್ತಿದ್ದರೆಂಬ ಉಲ್ಲೇಖವಿದೆ. ಇದು ಸಾಧ್ಯವಿದೆ. ಚಿಕ್ಕವಯಸ್ಸಿನ ಮಕ್ಕಳ ಮನಸ್ಸಿನ ಮೇಲೆ ಸಂಸ್ಕಾರ ಮಾಡುವ ಮಹತ್ತ್ವವನ್ನು ಸಮರ್ಥರು ತಿಳಿದವರಾಗಿದ್ದರು. ಯೋಗಾಯೋಗದಿಂದ ಅವರ ಮಡಿಲಲ್ಲಿ ಆಡಿದ ಉದ್ಧವನು ಅವರ ಸಂಪರ್ಕದಲ್ಲಿ ಬಂದಾಗ ಚಿಕ್ಕವನೇ ಆಗಿದ್ದನು.

ಮಾಹುಲಿಯಲ್ಲಿದ್ದಾಗ ಸಮರ್ಥರ ಹೆಸರು ಸಂತಮಂಡಳಿಗೆ ಗೊತ್ತಾಗಿರಬೇಕು. ಅವರನ್ನು ಭೇಟಿಯಾಗಲು ಬಂದು ಹೋದ ಸಂತರಲ್ಲಿ ವಡಗಾವಿಯ ಜಯರಾಮಸ್ವಾಮಿ, ನಿಗಡಿಯ ರಂಗನಾಥಸ್ವಾಮಿ, ಬ್ರಹ್ಮನಾಳದ ಆನಂದಮೂರ್ತಿಸ್ವಾಮಿ ಮತ್ತು ಭಾಗಾನಗರದ ಅಂದರೆ ಇಂದಿನ ಹೈದ್ರಾಬಾದದ ಕೇಶವಸ್ವಾಮಿ- ಈ ನಾಲ್ಕು ಹೆಸರುಗಳಿವೆ. ಈ ನಾಲ್ವರು ಹಾಗೂ ಸಮರ್ಥರು ಹೀಗೆ ಐವರು ಸೇರಿ ದಾಸಪಂಚಾ

ಯತನ ಎಂಬ ಹೆಸರು ರೂಢಿಯಾಗಿದೆ. ಈ ನಾಲ್ಕು ಜನ ಸಂತರ ಭೇಟಿ ಯಾವಾಗಲಾದರೂ ಸಮರ್ಥರಿಗಾದುದು ಸಾಧ್ಯವಿದೆ. ಮಾಹುಲಿಯು ಮುಕ್ಕಾಮಿನಲ್ಲಿಯೇ ಇದಾಗಿರಬೇಕೆಂದು ಹೇಳಲಾಗದು. ದಾಸಪಂಚಾಯತನ ಈ ಹೆಸರಿನಲ್ಲಿ ಗುರುತಿಸಲ್ಪಡುವ ಈ ಎಲ್ಲರ ಭೇಟಿ ಮೇಲಿಂದ ಮೇಲೆ ಆಗುತ್ತಿರಬೇಕು ಇಲ್ಲವೆ ಆ ಎಲ್ಲರೂ ಸೇರಿ ಯಾವುದಾದರೂ ಸಮಾನ ಧ್ಯೇಯದಿಂದ ಪ್ರೇರಿತರಾಗಿರಬೇಕು ಎಂದು ಹೇಳಲಾಗದು. ಅನೇಕ ದೃಷ್ಟಿಗಳಿಂದ ಸಮರ್ಥರು ಈ ಎಲ್ಲರಲ್ಲಿ ಬೇರೆಯವರಾಗಿದ್ದರೆಂಬುದು, ಆ ಐವರ ಚರಿತ್ರೆ ಹಾಗೂ ಅವರ ಸಾಹಿತ್ಯವನ್ನು ಅವಲೋಕಿಸಿದ ಬಳಿಕ ಸಹಜವಾಗಿ ತಿಳಿಯುತ್ತದೆ. ನಿವೃತ್ತಿ ಜತೆಯಲ್ಲಿದ್ದ ಒಂದು ಪ್ರವೃತ್ತಿಪರ ಸಮಾಜ ಸಮುತ್ಸುಕತೆಯು ಸಮರ್ಥರಲ್ಲಿ ಕಂಡುಬರುತ್ತದೆ. ಇದು ಉಳಿದ ನಾಲ್ವರು ಸಂತರಲ್ಲಿ ಕಂಡು ಬರುವುದಿಲ್ಲ. ದಾಸಪಂಚಾಯತನ ಈ ಹೆಸರಿನಲ್ಲಿ ಆ ಎಲ್ಲರ ಉಲ್ಲೇಖ ಮಾಡುವಾಗ ಆ ಮಹತ್ವದ ಭೇದವನ್ನು ಮರೆಯಬಾರದು. ಕೃಷ್ಣಾತೀರಕ್ಕೆ ಬಂದ ಮೇಲೆ ಸಮರ್ಥರು ಒಂದು ವಿಶೇಷ ಪ್ರೇರಣೆಯಿಂದ ಎಲ್ಲೆಡೆ ಸಂಚಾರ ಮಾಡುತ್ತಿದ್ದರು. ಆ ಪ್ರೇರಣೆಯನ್ನು ಇತರ ಸಂತರು ತಾವೂ ಪಡೆದುಕೊಂಡಿದ್ದರೆ ಮಹಾರಾಷ್ಟ್ರದ ಚಿತ್ರವು ಎಷ್ಟಾದರೂ ಬದಲಾಗುತ್ತಿತ್ತು. ಪರಮಾರ್ಥದ ಮಾರ್ಗದಿಂದ ಹೋಗುತ್ತಿರುವ ಸತ್ಪುರುಷರನ್ನು ಐಹಿಕದ ಅವಧಾನವನ್ನಿಡುವ ಸಲುವಾಗಿ ಪ್ರವೃತ್ತರನ್ನಾಗಿ ಮಾಡುವುದು ಈ ದೇಶದಲ್ಲಿ ಯಾವಾಗಲೂ ತೊಂದರೆದಾಯಕವೇ ಆಗಿದೆ.

ಜರಂಡಿ, ಮಾಹುಲಿ ಈ ಭಾಗದಲ್ಲಿ ವಾಸ್ತವ್ಯವಿದ್ದಾಗ ಸಂತಶ್ರೇಷ್ಠ ತುಕಾರಾಮ ಅವರು ಸಮರ್ಥರ ಭೇಟಿಗಾಗಿ ಬಂದು ಹೋದರೆಂಬ ಉಲ್ಲೇಖವು ಹಳೆಯ ಗ್ರಂಥಗಳಲ್ಲಿದೆ. ಆ ಭೇಟಿಯಲ್ಲಿ ಅವರು ಪರಸ್ಪರ ತಮ್ಮ ಗುರು ಪರಂಪರೆಯನ್ನು ಹೇಳುವ ಬಗೆಗೆ ಬರೆಯಲ್ಪಟ್ಟ ಅಭಂಗಗಳು ಪ್ರಸಿದ್ಧವಾಗಿವೆ. ತುಕಾರಾಮ ಮಹಾರಾಜರು ಸಮರ್ಥರಿಗಿಂತ ವಯಸ್ಸಿನಲ್ಲಿ ಎಂಟು, ಒಂಬತ್ತು ವರ್ಷ ದೊಡ್ಡವರಾಗಿದ್ದರು. ಅವರು ತಮ್ಮ ಸ್ಥಳದಲ್ಲಿ ವಿಠ್ಠಲನ ಭಜನೆಯಲ್ಲಿ ಮಗ್ನರಾಗಿದ್ದರು. ಸಮರ್ಥರ ಭೇಟಿಗಾಗಿ ಅವರು ತಮ್ಮ ಸ್ಥಾನದಿಂದ ಹೊರಟು ಮುದ್ದಾಮ ಮಾಹುಲಿಯವರೆಗೆ ಹೋಗುವುದು, ಇಷ್ಟು ನಿಕಟವಾದ ಸಂಬಂಧವು ಆ ಸಮಯ ಇಬ್ಬರಲ್ಲಿಯೂ ಬಂದಿರಲಿಲ್ಲ. ಅಷ್ಟಾಗಿ ಸಮರ್ಥರ ಕರ್ತೃತ್ವದ ಮುದ್ರೆಯೂ ಆ ವೇಳೆಯಲ್ಲಿ ಮೂಡಿರಲಿಲ್ಲ. ಇವುಗಳನ್ನು ಗಮನಕ್ಕೆ ತಂದರೆ ಮಾಹುಲಿಯಲ್ಲಿ ಅವರಿಬ್ಬರ ಭೇಟಿಯಾದ ಬಗೆಗೆ ನಂಬಲಾಗದು. ಸಮರ್ಥರು ಕೃಷ್ಣಾ ತೀರಕ್ಕೆ ಬಂದ ಬಳಿಕ ತುಕಾರಾಮ ಮಹಾರಾಜರು ಐದು ವರ್ಷ ಬದುಕಿದ್ದರು. ಮಹಾಕರ್ತೃತ್ವಶಾಲಿಗಳಾದ ಈ ಸತ್ಪುರುಷದ್ವಯರು ಪರಸ್ಪರ ಹತ್ತಿರವಿದ್ದ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಕೃಷ್ಣಾ ತೀರದ ಮೇಲಿನ ಮಸೂರ ಚಾಫಳದ ಪರಿಸರದಲ್ಲಿ ಸಮರ್ಥರು; ಆದರೆ ಇಂದ್ರಾಯಣಿ ತೀರದ ದೇಹೂ ಆಳಂದಿಯ ಭಾಗದಲ್ಲಿ ತುಕಾರಾಮ ಅವರು. ಪರಸ್ಪರರ ಹೆಸರು ಆ ಇಬ್ಬರ ಕಿವಿಗಳಲ್ಲಿ ಎಂದಾದರೂ ಬಿದ್ದಿರಬೇಕು ಹಾಗೂ ಅವರ ಭೇಟಿಯೂ ಆಗಿರಬೇಕು. ಚಿಂಚವಡದ ಸುಪ್ರಸಿದ್ಧ ಗಣೇಶೋಪಾಸಕ ಮೋರಯಾ ದೇವ ಇವರ

ಹೆಸರು ಕೂಡ ಈ ಸುಮಾರಿಗೆ ಸಮರ್ಥರನ್ನು ಭೇಟಿಯಾಗಿ ಹೋದ ಸಂತರಲ್ಲಿ ಇದೆ. ಆ ಸಮಯ ಮಹಾರಾಷ್ಟ್ರದಲ್ಲಿದ್ದ ಪ್ರಮುಖ ಸಂತರು ಸಮರ್ಥರನ್ನು ಕಂಡು ಹೋದರೆಂಬ ಬಗೆಗೆ ಬರೆಯುವ ಮೋಹವು, ಅವರ ಗುರು ವಿಷಯದ, ಹೆಚ್ಚಾಗಿ ಆದರಭಾವನೆಯ ಕಾರಣ ಸಮರ್ಥರ ಹಳೆಯ ಚರಿತ್ರಕಾರರಿಗೆ ಆಗಿರಬೇಕು.

'ದಾಸಪಂಚಾಯತನ' ಇವರಲ್ಲಿ ರಾಮದಾಸರು ವಯಸ್ಸಿನಿಂದ ಹಿರಿಯರೆಂದು ಅವರಿಗೆ ಇತರರು 'ಸಮರ್ಥ' ಈ ಹೆಸರನ್ನು ಕೊಟ್ಟಿರಬೇಕೆಂದು ಒಂದು ಅಭಿಪ್ರಾಯವಿದೆ. ರಾಮದಾಸರಿಗೆ ಸಮರ್ಥ ಎಂಬ ಹೆಸರು ನಿಶ್ಚಿತವಾಗಿ ಯಾವಾಗ ಮತ್ತು ಯಾವ ಕಾರಣಕ್ಕಾಗಿ ಪ್ರಾಪ್ತವಾಯಿತೆಂಬುದು ಹೇಳಲಿಕ್ಕಾಗದು. ದಾಸಪಂಚಾಯತನರಲ್ಲಿಯ ಜೇಷ್ಠತ್ವಕ್ಕಾಗಿ ಕೊಡಲ್ಪಟ್ಟ ಬಗೆಗೆ ಗೊತ್ತಾಗುವುದಿಲ್ಲ. ನಾಸಿಕ ಪಂಚವಟಿಯಲ್ಲಿಯ ತಪಸ್ಸಿನ ಕಾಲದಲ್ಲಿ ಇಲ್ಲವೆ ಅನಂತರದ ತೀರ್ಥಯಾತ್ರೆಯ ಪ್ರಯಾಣದಲ್ಲಿ ಅವರಿಗೆ ಯಾರಾದರೂ ಸಮರ್ಥ ಎಂಬ ಹೆಸರನ್ನು ಕೊಡುವ ಸಾಧ್ಯತೆಯಿಲ್ಲ. ಉತ್ತರಕಾಲದಲ್ಲಿಯ ಅವರ ಕಾರ್ಯಕ್ಕಾಗಿ, ಹಾಗೆಯೇ ಸಾಮರ್ಥ್ಯದ ಉಪಾಸನೆಯನ್ನು ಮಾಡುವ ಯಾವ ಉಪದೇಶವನ್ನು ಕೊಟ್ಟರೊ ಅದಕ್ಕಾಗಿ ಅವರಿಗೆ ಸಮರ್ಥ ಪದವಿ ಪ್ರಾಪ್ತವಾಗಿರಬೇಕು. ಅರ್ಥಾತ್ ಈ ಕಥೆಯೇ ಬಹಳ ಮುಂದಿನ ಕಾಲದಲ್ಲಿರಬೇಕು. "ಜಯ ಜಯ ರಘುವೀರ ಸಮರ್ಥ" ಇಂಥ ಘೋಷಣೆಯನ್ನು ರಾಮದಾಸರು ಭಿಕ್ಷೆಯ ಕಾಲದಲ್ಲಿ ಮಾಡುತ್ತಿದ್ದರು. ಈ ಘೋಷಣೆಯು ಅವರಿಗಿಂತ ಮೊದಲಿನಿಂದಲೂ ರೂಢಿಯಲ್ಲಿತ್ತೋ ಇಲ್ಲವೆ ಅವರಿಂದ ಹೊಸದಾಗಿ ಪ್ರಚಾರದಲ್ಲಿ ಬಂದಿತೋ, ಇಂಥ ಒಂದು ಪ್ರಶ್ನೆಯು ಏಳುತ್ತದೆ. ಅವರ ಮುಖದಿಂದ ನಿತ್ಯ ಕಿವಿಯಲ್ಲಿ ಬೀಳುವ ಈ ಘೋಷಣೆಯಿಂದ ಸಮರ್ಥರ ಸೇವಕರು ಇಲ್ಲವೆ ಉಪಾಸಕರೆಂದು ಅವರ ಪ್ರತಿಮೆ ಜನಮನದಲ್ಲಿ ದೃಢವಾಗುತ್ತ ಹೋಗಿರಬಹುದು. "ವಕ್ರದೃಷ್ಟಿಯಿಂದ ಸಮರ್ಥರ ಸೇವಕರತ್ತ ! ನೋಡುವವರಾರು ಭೂಮಂಡಲ ಸುತ್ತಮುತ್ತ !" ಇಂಥ ಪ್ರಶ್ನೆಯನ್ನು ಕೇಳಿ ರಾಮನ ಈ ದಾಸರು ವಿಚಾರಿಸಿದ್ದಾರೆ. ಸಮರ್ಥನಾದ ತಮ್ಮ ಸ್ವಾಮಿ, ಆ ಶ್ರೀರಾಮಸಂತೂ ತಮ್ಮ ಉಪೇಕ್ಷೆಯನ್ನು ಎಂದಿಗೂ ಮಾಡಲಾರನು. ಯಾಕೆಂದರೆ ಆತ ತನ್ನ ಸೇವಕರ ಬಗೆಗೆ ಅಭಿಮಾನ ತಾಳುವವನಿದ್ದಾನೆಂದು ಇಂಥ ಖಾತ್ರಿಯು "ಉಪೇಕ್ಷೆ ಮಾಡದು ರಾಮದಾಸಾಭಿಮಾನಿ !" ಎಂದು ಆ ಶ್ಲೋಕದ ಅಂತಿಮ ಚರಣದಲ್ಲಿ ಕೊಡಲ್ಪಟ್ಟಿದೆ. (ಮನಾಚೆ ಶ್ಲೋಕ–ಮನೋಬೋಧೆ).

ಭಿಕ್ಷೆಗಾಗಿ ಸರ್ವತ್ರ ಸಂಚರಿಸುವ ಶಿಷ್ಯರ ಮುಖದಿಂದ ಸಮರ್ಥರ ಆತ್ಮವಿಶ್ವಾಸಪೂರ್ಣವಾಣಿಯು ಮನೆಮನೆಗೆ ಮುಟ್ಟಿರುತ್ತದೆ. ಅದು ಹೀಗೆ ತಲುಪಿದ ಬಳಿಕ ಸಮರ್ಥರ ಈ ಸೇವಕರು ಸಮರ್ಥರೆಂದು ಗುರುತಿಸಲ್ಪಡಹತ್ತಿರಬೇಕು. ನಾರಾಯಣ ಈ ಹೆಸರನ್ನು ಅವರ ತಂದೆ ತಾಯಿಗಳು ಇಟ್ಟರು. ರಾಮದಾಸ ಈ ಹೆಸರನ್ನು ತಾವೇ ರಾಮನದಾಸ ಎಂಬ ಭಾವನೆಯಿಂದ ಸ್ವಂತ ಇಟ್ಟುಕೊಂಡರು. ಸಮರ್ಥ ಈ ಹೆಸರು ಅವರ ಕರ್ತೃತ್ವಶಕ್ತಿಯನ್ನು ಗುರುತಿಸಿದ ಬಳಿಕ ಜನರು ಕೊಟ್ಟಿರಬೇಕು. ಸಮರ್ಥರು

ತಮ್ಮ ಉಲ್ಲೇಖವನ್ನು ಸಮರ್ಥ ಎಂಬ ಹೆಸರಿನಿಂದ ಎಲ್ಲಿಯೂ ಮಾಡಿಲ್ಲ. ತಮ್ಮ ಗ್ರಂಥಗಳಲ್ಲಿ ಅವರು ಎಲ್ಲ ಕಡೆಗೆ ಸ್ವಂತಕ್ಕೆ ರಾಮದಾಸ ಎಂದು ಹೇಳಿಕೊಳ್ಳುತ್ತಲಿದ್ದರು. 'ದಾಸನ ನುಡಿ' ಎಂದು ಅವರ ಅಭಂಗಗಳಲ್ಲಿ ನಾಮಮುದ್ರೆಯಿದೆ. ಇದು ಈ ಸಂದರ್ಭದಲ್ಲಿ ಮಹತ್ವದ್ದು. ನಾರಾಯಣ, ರಾಮದಾಸ ಮತ್ತು ಸಮರ್ಥ ಈ ಮೂರು ಹೆಸರುಗಳು ಅವರ ಬದುಕಿನಲ್ಲಿಯ ಮೂರು ಘಟ್ಟಗಳು ಇಲ್ಲವೆ ಅವಸ್ಥೆಗಳ ದರ್ಶನ ಮಾಡಿಸುವಂತಿವೆ. ಅವರ ಸಾಹಿತ್ಯದತ್ತ ನೋಡಿದರೆ ಕರುಣಾಸ್ತೋತ್ರಗಳು, ಮನೋಬೋಧೆ ಮತ್ತು ಗ್ರಂಥರಾಜದಾಸಬೋಧೆ ಈ ಅವರ ಮೂರು ಕೃತಿಗಳು ಈ ಮೂರು ಅವಸ್ಥೆಗಳಿಗೆ ಸರಿಹೊಂದುವಂತಿವೆ ಎಂದು ಹೇಳಲಾಗುತ್ತದೆ.

ಕೃಷ್ಣಾ ಹಾಗೂ ವೇಣ್ಣಾಗಳ ಮಾಹುಲಿಯಲ್ಲಿಯ ಸಂಗಮದಿಂದ ಸಮರ್ಥರು ಕರಾಡದ ಕೃಷ್ಣಾ ಹಾಗೂ ಕೊಯನಾ ಇವುಗಳ ಸಂಗಮಕ್ಕೆ ಹೋದರು. ಇಲ್ಲಿಂದ ನಾಲ್ಕೈದು ಮೈಲಿ ದೂರವಿದ್ದ ಶಹಾಪುರದ ಹತ್ತಿರದ ಬೆಟ್ಟದಲ್ಲಿ ಅವರು ಇರತೊಡಗಿದರು. ಸ್ನಾನಕ್ಕಾಗಿ ಸಂಗಮಕ್ಕೆ ಬರುತ್ತಲಿದ್ದರು. ಮಧ್ಯಾಹ್ನದ ಭಿಕ್ಷೆಯನ್ನು ಶಹಾಪುರದಲ್ಲಿ ಬೇಡುತ್ತಿದ್ದರು ಇಲ್ಲವೆ ಅಲ್ಲಿಗೆ ಸಮೀಪವಿರುವ ಮಸೂರದಲ್ಲಿ ಬೇಡುತ್ತಿದ್ದರು. ಶಹಾಪುರದಲ್ಲಿ ಬಾಜೀಪಂತ ಕುಲಕರ್ಣಿ ಶಹಾಪುರಕರ ಇವರ ಬಾಗಿಲಲ್ಲಿ ನಿಂತು, "ಜಯಜಯ ರಘುವೀರ ಸಮರ್ಥ" ಎಂದು ತಮ್ಮ ಪದ್ಧತಿಯಂತೆ ಸಮರ್ಥರು ಹೇಳುತ್ತಿರುವಲ್ಲಿ ಬಾಜೀಪಂತರ ಪತ್ನಿ ಸಯೀಬಾಯಿ ಹೊರಗೆ ಬಂದು, ಒಂದಿಷ್ಟು ಸಂತಾಪದಿಂದ "ತುಂಬಿದ ಸಂಸಾರದ ಮನೆಯ ಮುಂದೆ ಹೀಗೆ ಅನ್ನಬೇಡ" ಎಂದು ನುಡಿದರು. ರಾಮದಾಸರ ಆ ಘೋಷಣೆಯ ಅರ್ಥವನ್ನು ಸಯೀಬಾಯಿ ಹೇಗೆ ತಿಳಿದರೋ, ಅದರಲ್ಲಿ ಅವರಿಗೆ ಅಶುಭವೆಂದು ಹೇಗೆ ತೋರಿತೋ ಇದನ್ನು ತಿಳಿಯಬೇಕಾದ ಮಾರ್ಗವೇ ಇಲ್ಲ. ಸಮರ್ಥರ ಘೋಷಣೆ ಮತ್ತು ಸಯೀಬಾಯಿಯವರ ಸಂತಾಪ ಈ ಪ್ರಕಾರವಾಗಿ ಇವು ಕೆಲವು ದಿನ ನಡೆದವು. ಒಂದು ದಿನ ಹೀಗೇ ಭಿಕ್ಷೆಗಾಗಿ ಬಂದಾಗ ಮನೆಯ ಮಂದಿ ಯಾವುದೋ ಚಿಂತೆಯಲ್ಲಿ ವ್ಯಗ್ರವಾಗಿರುವುದು ಸಮರ್ಥರಿಗೆ ಕಂಡಿತು. ನಿಜವಾಗಿಯೂ ಸಂಸಾರಿ ಪುರುಷನ ಮನೆಯಲ್ಲಿ ಹಾಗೆ ಏನಾದರೂ ಒದಗಿದ್ದರೆ ಸಮರ್ಥರಂಥ ಸಾಧುಸಂನ್ಯಾಸಿಗಳು ಅತ್ತ ಅಧಿಕ ಗಮನ ವೀಯುವ ಕಾರಣವಿಲ್ಲ. ಅವರು ಭಿಕ್ಷೆಗಾಗಿ ಒಂದಿಷ್ಟು ಸಮಯ ದಾರಿ ಕಾಯಬೇಕು ಮತ್ತು ಮುಂದಿನ ಬಾಗಿಲಿಗೆ ಹೋಗಬೇಕು. ಆದರೆ ಸಮರ್ಥರು ಹಾಗೆ ಮಾಡಲಿಲ್ಲ. ಒಂದಿಷ್ಟು ವಿಚಾರಿಸಿದ ಬಳಿಕ, ಗ್ರಾಮದ ಯಾವುದೋ ಲೆಕ್ಕದ ಪ್ರಕರಣದಲ್ಲಿ ಕರಾಡದ ಯವನ ಅಧಿಕಾರಿಯು ಬಾಜೀಪಂತರನ್ನು ಬಂಧಿಸಿ ಒಯ್ದಿದ್ದಾನೆ ಮತ್ತು ಅಲ್ಲಿ ಅವರಿಗೆ ಏನಾಗುವುದೋ ಎಂಬ ಚಿಂತೆಯಲ್ಲಿ ಮನೆಯ ಜನರಿದ್ದಾರೆ ಎಂಬ ಸಂಗತಿ ತಿಳಿಯಿತು.

ಸಮರ್ಥರು ಸಯೀಬಾಯಿಯನ್ನು "ಬಾಜೀಪಂತ ಸುಖರೂಪದಿಂದ ಮರಳಿ ಬಂದರೆ ಮುಖದಿಂದ ರಾಮನ ಹೆಸರನ್ನು ತೆಗೆದುಕೊಳ್ಳುವಿರಾ ?" ಎಂದು ಕೇಳಿದರು. ಕೂಡಲೇ ಸಯೀಬಾಯಿ ಸಹಜವಾಗಿ ಹೂಂಗುಟ್ಟಿದರು. "ನೀವು ಕಾಳಜಿ

ಮಾಡಬೇಡಿರಿ, ಇಂದಿಗೆ ಹನ್ನೊಂದನೆಯ ದಿವಸಕ್ಕೆ ಬಾಜೀಪಂತರು ಸುಖರೂಪದಿಂದ ಮರಳಿ ಬರುತ್ತಾರೆ" ಎಂದು ಸಮರ್ಥರು ಅನಂತರ ಆಶ್ವಾಸನೆಯನ್ನಿತ್ತರು. ಇಷ್ಟು ಹೇಳಿ ಸಮರ್ಥರು ಹೊರಟು ಹೋದರು. ಅವರು ಕಾರಕೂನನ ವೇಷಧರಿಸಿ ಮುಂದೆ ಬಿಜಾಪುರಕ್ಕೆ ಹೋದರು. ಶಹಾಪುರದ ಎಲ್ಲ ಲೆಕ್ಕವನ್ನು ಅಲ್ಲಿ ತಿಳಿಸಿಕೊಟ್ಟು ಅವರು ಬಾಜೀಪಂತರ ಬಿಡುಗಡೆ ಮಾಡಿಸಿದರು. ಅವರನ್ನು ಕರೆದುಕೊಂಡು ಹೊರಟರು. ಬಿಜಾಪುರದಲ್ಲಿ ಅಧಿಕಾರಿಗಳು ಹೆಸರನ್ನು ವಿಚಾರಿಸಿದಾಗ 'ದಾಸೋಪಂತ' ಎಂದು ಹೇಳಿದ್ದರು. ಮರಳಿ ಬರುವ ದಾರಿಯಲ್ಲಿದ್ದಾಗ "ನೀವು ಯಾರು ? ಎಲ್ಲಿಂದ ಬಂದಿರಿ ?" ಎಂದು ಬಾಜೀಪಂತರು ವಿಚಾರ ಮಾಡಿರಬೇಕು. "ಸಯೀಬಾಯಿ ಮತ್ತು ಅವರ ತಂದೆ ಅಬಾಜೀಪಂತರು ನನ್ನನ್ನು ಕಳಿಸಿದರು" ಎಂದು ಸಮರ್ಥರು ಉತ್ತರಿಸಿದರು. ಶಹಾಪುರದ ಅಗಸೆಗೆ ಬರುವವರೆಗೆ ಅವರು ಬಾಜೀಪಂತರ ಜತೆಯಾಗಿದ್ದರು. ಅಲ್ಲಿಂದ ಅವರ ಕಣ್ಣು ತಪ್ಪಿಸಿ ಬೆಟ್ಟದತ್ತ ಹೊರಟುಹೋದರು. ಸಮರ್ಥರು ಸಯೀಬಾಯಿಯವರಿಗೆ ಆಶ್ವಾಸನೆ ಕೊಟ್ಟಂತೆ ಹನ್ನೊಂದನೆಯ ದಿವಸಕ್ಕೆ ಬಾಜೀಪಂತರು ಸುಖರೂಪವಾಗಿ ಮನೆಗೆ ಬಂದು ಮುಟ್ಟಿದರು. ಮನೆಯಲ್ಲಿ ಸಂತೋಷವೇ ಸಂತೋಷ. "ನೀವು ಕಳಿಸಿದ ಆ ಕಾರಕೂನ ಎಲ್ಲಿಯವನು ?" ಎಂದು ಬಾಜೀಪಂತರು ವಿಚಾರಿಸಿದಾಗ ಸಯೀಬಾಯಿ, "ನಾವು ಯಾರನ್ನೂ ಕಳಿಸಿರಲಿಲ್ಲ" ಎಂದು ಹೇಳಿದರು. ಬಾಜೀಪಂತರು "ಆ ಕಾರಕೂನ ಊರಿನ ಅಗಸೆಗೆ ಬರುವ ತನಕ ನನ್ನ ಜತೆಯಲ್ಲಿದ್ದನು. ಮುಂದೆ ಎಲ್ಲಿ ಮಾಯವಾದನೋ ತಿಳಿಯಲಿಲ್ಲ. ಅವನೇ ವಿಜಾಪುರದಲ್ಲಿ ಎಲ್ಲ ಲೆಕ್ಕಪತ್ರ ಸರಿಪಡಿಸಿ ನನ್ನ ಬಿಡುಗಡೆ ಮಾಡಿಸಿದನು" ಎಂದು ವಿವರಿಸಿದರು.

ಆ ಬಳಿಕ ಸಯೀಬಾಯಿ ಬಾಗಿಲಿಗೆ ಬರುವ ಸಮರ್ಥರ ಜತೆಗಾದ ತಮ್ಮ ಮಾತುಕತೆಗಳನ್ನು ಹೇಳಿದರು. ಆ ಸಾಧುಪುರುಷನ ಕೃಪೆಯೇ ಇದು ಎಂದು, ಆ ಉಭಯತರಿಗೆ ಸ್ವಾಭಾವಿಕವಾಗಿ ಅರಿವಾಯಿತು. ಆವರು ಭಿಕ್ಷೆಗೆ ಬರುವರೆಂದು ಮರುದಿನ ದಾರಿ ನೋಡಿದರು. ಆದರೆ ಮರುದಿನ ಸಮರ್ಥರು ಅವರ ಮನೆಯತ್ತ ಸುಳಿಯಲೇ ಇಲ್ಲ. ಆವರೆಗೆ ಅನ್ನಗ್ರಹಣ ಮಾಡದೆ ಬಾಜೀಪಂತರು ಅವರ ದಾರಿ ಕಾಯುತ್ತ ಇದ್ದರು. ನಾಲ್ಕನೆಯ ದಿನ ಸಮರ್ಥರು ಬಾಗಿಲಿಗೆ ಬಂದು "ಜಯ ಜಯ ರಘುವೀರ ಸಮರ್ಥ" ಎಂದು ಕೂಗಿಕೊಂಡರು. ಅದಕ್ಕೆ ಸಯೀಬಾಯಿ ಆಕ್ಷೇಪಿಸಲಿಲ್ಲ. ತಿರುಗಿ ಆಕೆ ಹಾಗೂ ಬಾಜೀಪಂತರು ಸಮರ್ಥರಿಗೆ ಸಾಷ್ಟಾಂಗ ನಮಸ್ಕಾರ ಹಾಕಿದರು. ಬಿಜಾಪುರದಲ್ಲಿ ಬಾಜೀಪಂತರ ಬಿಡುಗಡೆ ಹೇಗಾಯಿತು, ಇದರ ಬಗೆಗೆ ಆ ಮೂವರಲ್ಲಿ ಯಾವ ಮಾತುಗಳಾದವು ಇದರ ವಿವರಣೆಯನ್ನು ಕಥೆಯಲ್ಲಿ ಕೊಡಲಾಗಿಲ್ಲ. ಬಾಜೀಪಂತ ಮತ್ತು ಸಯೀಬಾಯಿ ಇವರಿಬ್ಬರೂ ಸಮರ್ಥರಿಂದ ಅನುಗ್ರಹ ಪಡೆದರೆಂದು ಮಾತ್ರ ಕಥೆ ಹೇಳುತ್ತದೆ. ಅವರ ಜತೆಯಲ್ಲಿ ಇತರೆ ಕೆಲವು ಜನರು ಕೂಡ ಅನುಗ್ರಹ ಪಡೆದರು. ಅವರೆಲ್ಲರ ಉಪಾಸನೆಗಾಗಿ ಸಮರ್ಥರು ಅಲ್ಲಿ ಮಾರುತಿಯನ್ನು ಸ್ಥಾಪಿಸಿದರು.

ಹಳೆಯ ಚರಿತ್ರೆ ಗ್ರಂಥಗಳಲ್ಲಿಯ ಈ ಕಥೆಯು ಅದ್ಭುತ ರೂಪದಲ್ಲಿ ವರ್ಣಿತವಾಗಿದೆ. ಇದರಲ್ಲಿ ನಿಶ್ಚಿತ, ವಸ್ತುನಿಷ್ಠ ವಿವರಣೆಗಳನ್ನು ತಿಳಿಯಲು ಯಾವ ಸಾಧನವೂ ಇಲ್ಲ. ಆದರೆ ಚಮತ್ಕಾರಿಕ ಭಾಗವನ್ನು ಬದಿಗಿಟ್ಟರೆ ನಮಗೆ ಇಷ್ಟು ಅನುಮಾನವನ್ನು ನಿಶ್ಚಿತವಾಗಿ ಮಾಡಲು ಬರುತ್ತದೆ. ಯಾವುದೇ ರೀತಿಯಿಂದ ಹೇಗೂ ಪ್ರಯತ್ನಮಾಡಿ ಸಮರ್ಥರು ಬಾಜೀಪಂತರ ಮೇಲೆ ಬಂದ ಸಂಕಟವನ್ನು ನಿವಾರಿಸಿದರು. ಅವರ ಮೇಲೆ ಬಂದ ಖಚಿತ ಆರೋಪದ ಮಾಹಿತಿಯನ್ನು ಸಮರ್ಥರು ಪಡೆದಿರಬೇಕು. ಅವರು ಹೋಗಿ ಸಂಬಂಧಿಸಿದ ಅಧಿಕಾರಿಗಳನ್ನು ಕಂಡಿರಬೇಕು. ಮತ್ತೆ ಬೇರೆ ಯಾರ ಸಹಾಯವನ್ನಾದರೂ ಪಡೆದಿರಬಹುದು. ಬಾಜೀಪಂತರ ಮೇಲೆ ಬಂದ ಸಂಕಟವೂ ದೂರಾಗುವಂತೆ ನೋಡಿಕೊಂಡಿರಬೇಕು. ಬಾಜೀಪಂತರಿಂದಾದ ಅಪರಾಧವು ವಿಶೇಷ ಗಂಭೀರ ಸ್ವರೂಪದ್ದಾಗಿರಲಿಲ್ಲ. ಏನಾದರೂ ದೋಷ ಅವರ ಕೈಯಿಂದ ಜರುಗಿರಬೇಕು. ಅದನ್ನು ನಿವಾರಿಸಲು ಬರುವ ಹಾಗಿರಬೇಕು. ಆದರೆ ಸರಿಯಾದಂಥ ಪ್ರಕರಣಗಳಲ್ಲಿಯೇ ವಿವರಗಳನ್ನು ತಿಳಿಸುವ ಪ್ರಯತ್ನವನ್ನು ಮಾಡಬೇಕಾಗುತ್ತದೆ. ಅದನ್ನು ಸಮರ್ಥರು ಮಾಡಿದರು. ಅದರಿಂದ ಬಾಜೀಪಂತರ ಬಿಡುಗಡೆಯಾಯಿತು. ಇಷ್ಟು ಸತ್ಯವು ಆ ಕಥೆಯಲ್ಲಿದೆ.

ಸಂಕಟದಿಂದ ಮುಕ್ತರಾದ ಬಾಜೀಪಂತರು ಸಮರ್ಥರ ಅನುಯಾಯಿಯಾಗಿದ್ದು ಇದರಲ್ಲಿ ವಿಶೇಷವಿಲ್ಲ. ಬಾಜೀಪಂತರು ಸರಕಾರಿ ಅಧಿಕಾರಿಯಾಗಿದ್ದರು. ಸಹಜವಾಗಿ ಸಮಾಜದಲ್ಲಿ ಏನಾದರೂ ಅವರ ಪ್ರತಿಷ್ಠೆ ಇರಬಹುದು. ಅದರಿಂದ ಮತ್ತೆ ಕೆಲವು ಜನರು ಸಮರ್ಥರ ಶಿಷ್ಯವರ್ಗದಲ್ಲಿ ಬಂದಿರಬೇಕು. ಮಸೂರ, ಚಾಫಳ, ಕರಾಡ ಇಂಥ ಹತ್ತಿರದ ಗ್ರಾಮಗಳ ಅನೇಕ ಜನರು ಈ ಸುಮಾರಿಗೆ ಸಮರ್ಥರಿಂದ ಅನುಗ್ರಹವನ್ನು ಪಡೆದಿದ್ದಾರೆ. ಇವರಲ್ಲಿ ಮಾಮಲೇದಾರರಂಥ ಹೊಣೆಗಾರಿಕೆಯ ಸ್ಥಾನದಲ್ಲಿ ಕೆಲಸ ಮಾಡುತ್ತಿರುವ ನರಸೋಮಲನಾಥ ಅಂಬರಖಾನೆಯಂಥ ವ್ಯಕ್ತಿಗಳಿದ್ದರು. ಪ್ರತಿಷ್ಠಿತ ಕುಟುಂಬದ ಜನರಿದ್ದರು. ಇದರ ಪ್ರಾರಂಭವು ಬಾಜೀಪಂತರಿಂದಾಯಿತು. ಬಾಜೀಪಂತರ ಬಿಡುಗಡೆಗಾಗಿ ಪ್ರಯತ್ನ ಮಾಡುತ್ತಿರುವಲ್ಲಿ ಇಪ್ಪತ್ತೈದು ವರ್ಷಗಳ ಹಿಂದೆ ತಮ್ಮ ತಂದೆ ಸೂರ್ಯಾಜಿಪಂತರ ಮೇಲೆ ಇಂಥದೇ ಸರಕಾರಿ ಮಿಥ್ಯಾರೋಪ ಬಂದಿತ್ತು. ಅದರಿಂದ ಅವರ ಮರಣವಾಯಿತು. ಆ ಜಾಂಬದಲ್ಲಿಯ ತಮ್ಮ ಬಾಲ್ಯದ ಘಟನೆಯ ನೆನಪು ಸಮರ್ಥರಿಗೆ ಆಗಿರಬಹುದೆ ?

ಸರಕಾರಿ ಅಧಿಕಾರಿಗಳಿಂದ ಬಂದಿಷ್ಟು ಸಮಸ್ಯೆ ಬಗೆಹರಿಸಿಕೊಳ್ಳುವ ಮತ್ತೊಂದು ಪ್ರಸಂಗ ಬೇಗ ಒದಗಿತು. ಈ ಘಟನೆ ಶಹಾಪುರ ಹತ್ತಿರ ಎರಡು ಎರಡೂವರೆ ಮೈಲಿನ ಮೇಲಿರುವ ಮಸೂರಿನಲ್ಲಿ ಜರುಗಿದೆ. ಮಹಾಬಳೇಶ್ವರ, ವಾಯಿ, ಮಾಹುಲಿ, ಶಹಾಪುರ, ಕರಾಡ ಈ ಭಾಗದಲ್ಲಿ ಸಮರ್ಥರು ಸಂಚಾರ ಮಾಡುತ್ತ ಬಂದಿಷ್ಟು ಸಮಯ ಕಳೆದಿರಬೇಕು. ಈ ಅವಧಿಯಲ್ಲಿ ಅವರಿಂದ ಅನುಗ್ರಹಿತರಾದ ಇಲ್ಲವೆ ನಿಕಟ ಪರಿಚಯದಲ್ಲಿ ಬಂದಂಥ ಕೆಲ ಜನರು ಅವರ ಸುತ್ತಮುತ್ತ ಸೇರಿದ್ದರು. ಈ ಎಲ್ಲರನ್ನು ಬಂದಿಷ್ಟು ಕೆಲಸದ ನಿಮಿತ್ತ ಒಟ್ಟಿಗೆ ಕೂಡಿಸಲೆಂದು ಇರಬೇಕು. ಇಲ್ಲವೆ ತಮ್ಮ

ಕಾರ್ಯದಲ್ಲಿ ಒಂದು ಮುಂದಿನ ಹೆಜ್ಜೆ ಎಂದಿರಬೇಕು. ಮಸೂರಿನಲ್ಲಿ ರಾಮ ನವಮಿಯ ಉತ್ಸವನನ್ನು ಅತೀ ಹೆಚ್ಚಿನ ಸಮಾರಂಭದ ರೂಪದಲ್ಲಿ ಆಚರಿಸಲು ಸಮರ್ಥರು ಯೋಜಿಸಿದರು. ಮಸೂರ ಗ್ರಾಮವು ಆಗಲೇ ಶಹಾಜಿರಾಜೆಯವರ ಜಹಗಿರಿಯಲ್ಲಿ ಬಂದಿತ್ತು. ಆದ್ದರಿಂದ ಇಂಥ ಉತ್ಸವಕ್ಕೆ ವಿಶೇಷ ತೊಂದರೆ ಬರಲಾರ ದೆಂದು ಅವರ ಭಾವನೆಯಾಗಿರಬೇಕು. ಆದರೆ ಜಹಗಿರಿಯು ಶಹಾಜಿರಾಜೆಯವರ ಕಡೆಗೆ ಬಂದಿದ್ದರೂ ಅಲ್ಲಿ ಆದಿಲ್‌ಶಾಹಿಯ ಒಬ್ಬ ಮುಸಲ್ಮಾನ್ ಅಧಿಕಾರಿ ಇದ್ದನು. ಉತ್ಸವದ ನಿಮಿತ್ತ ಅಲಂಕರಿಸಿದ ರಥದಲ್ಲಿ ಶ್ರೀ ರಾಮನ ಮೂರ್ತಿಯ ಮೆರವಣಿಗೆ ಯನ್ನು ಹೊರಡಿಸಲಾಯಿತು. ಶೋಭೆಗಾಗಿ ರಥಕ್ಕೆ ಎತ್ತರ ಧ್ವಜಗಳನ್ನು ಕಟ್ಟಿದ್ದರು. ದಾರಿಯಲ್ಲಿ ಮಾವಿನ ಮರದ ಕೆಲ ಟೊಂಗೆಗಳು ಆ ಧ್ವಜಗಳಿಗೆ ಅಡ್ಡ ಬಂದವು. ರಥವು ಧ್ವಜಗಳ ಸಹಿತ ಮುಂದೆ ಸಾಗಬೇಕಾದರೆ ಆ ಟೊಂಗೆಗಳನ್ನು ಸವರಬೇಕಿತ್ತು. ಅವು ಸರಕಾರಿ ತೋಟದ ಮರಗಳಾಗಿದ್ದವು. ಟೊಂಗೆಗಳನ್ನು ಕಡಿಯಲು ಅಧಿಕಾರಿಯು ಅಡ್ಡಿ ಮಾಡಿದನು. ಸಮರ್ಥರು ತತ್‌ಕ್ಷಣ ಬಿಜಾಪುರಕ್ಕೆ ಬಾದಶಹನ ಹತ್ತಿರ ಹೋಗಿ ಅವರಿಂದ ಟೊಂಗೆ ಕಡಿಯಲು ಆಜ್ಞೆಯನ್ನು ತಂದು, ಆ ಮಸೂರಿನ ಅಧಿಕಾರಿಗೆ ಅವರು ತೋರಿಸಿದರೆಂದು ಹಳೆಯ ಚರಿತ್ರೆಕಾರರು ವರ್ಣನೆ ಮಾಡಿದ್ದಾರೆ. ಅದನ್ನು ತೋರಿಸಿದ ಬಳಿಕ ಆತನು, ಟೊಂಗೆಗಳನ್ನು ಸವರಲು ಅಪ್ಪಣೆಯನ್ನು ಕೊಡಲೇಬೇಕಾಯಿತು. ನಿಯಮಿತವಾದ ದಾರಿಯಿಂದ ಮೆರವಣಿಗೆಯು ಮುಂದೆ ಸಾಗಿತು. ಉತ್ಸವವು ನಿರಾತಂಕವಾಗಿ ಮುಕ್ತಾಯ ಗೊಂಡಿತು.

ಸಮರ್ಥರು ಯೋಗ ಸಾಮರ್ಥ್ಯದ ಬಲದಿಂದ ಒಂದು ಕ್ಷಣದಲ್ಲಿ ಬಿಜಾಪುರಕ್ಕೆ ಹೋದರು. ಕೆಲಸವನ್ನು ಗೆದ್ದುಕೊಂಡು ಮರುಕ್ಷಣದಲ್ಲಿ ಮರಳಿದರು ಎಂದು ಭಾವಿಕರ ತಿಳಿವಳಿಕೆಯಿದೆ. ಈ ಚಮತ್ಕಾರದ ಪ್ರಸಂಗವನ್ನು ಬದಿಗೆ ಸರಿಸಬೇಕಾದರೆ ಹೀಗೆ ಹೇಳಬೇಕಾಗುತ್ತದೆ. ಉತ್ಸವದ ನಡುವೆ, ಅದೇ ಸಮಯ ಬಂದ ಕಷ್ಟವನ್ನು ಸಮರ್ಥರು ಜಾಣತನದಿಂದ ದೂರ ಮಾಡಿದರು. ಅದಕ್ಕಾಗಿ ಪರಧರ್ಮಿಯ ಯವನ ಅಧಿಕಾರಿಗೆ ಅವರು ತಿಳಿವಳಿಕೆ ನೀಡಿದರು. ಸಮಾಜದಲ್ಲಿ ಅನುಕೂಲ ಪ್ರತಿಕೂಲ, ವಿವೇಕಿಗಳು ಅವಿವೇಕಿಗಳು, ಸರ್ವ ಸಾಮಾನ್ಯರು ಅಧಿಕಾರಪದಸ್ಥರು, ಹೀಗೆ ಎಲ್ಲ ಬಗೆಯ ಜನರಿರುತ್ತಾರೆ. ಕೆಲವರು ತಮ್ಮ ಧರ್ಮದವರು ಮತ್ತೆ ಕೆಲವರು ಪರಧರ್ಮಿಯರು ಇರುತ್ತಾರೆ. ಕಾರ್ಯಕರ್ತ ಪುರುಷರಿಗೆ ಎಲ್ಲರ ಸಂಬಂಧವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಅವರಿಂದ ಯಾವುದಾದರೂ ಮಾರ್ಗದಿಂದ ತಮ್ಮ ಕೆಲಸವನ್ನು ಮಾಡಿಸಿಕೊಳ್ಳಬೇಕಾಗುತ್ತದೆ. "ಕಳ್ಳ ಕೋಶಾಧಿಕಾರಿಯಾಗಲಿ! ಅಪರಾಧವನು ಕ್ಷಮಿಸಿರಿ!" ಇಲ್ಲವೆ "ಮುಳ್ಳಿನಿಂದ ಮುಳ್ಳು ಹೋಗಲಿ! ಯಾರಿಗೂ ಗೊತ್ತಾಗದಿರಲಿ!" ಈ ರೀತಿಯ ವ್ಯಾವಹಾರಿಕ ಜಾಣತನವನ್ನು ತೋರುವ ಮತ್ತು ವಾಸ್ತವತೆಯ ನೇರ ಎಚ್ಚರ ಕೊಡುವ ಈ ವಚನಗಳು ಸಮರ್ಥರ ಸಾಹಿತ್ಯದಲ್ಲಿ ಕಂಡುಬರುತ್ತವೆ. ಇವುಗಳ ಮೂಲವನ್ನು ಅವರಿಗೊದಗಿದ ಈ ಬಗೆಯ ಅನುಭವ

ದಲ್ಲಿ ಶೋಧಿಸಲು ಬರುತ್ತದೆ.

ಒಂದಿಷ್ಟು ಕೆಲಸಕ್ಕೆ ಯಾವ ಯಾವ ಬಗೆಯ ತೊಂದರೆಗಳು ಬರಲು ಸಾಧ್ಯವೋ ಅವುಗಳನ್ನು ಪರೀಕ್ಷಿಸಿ, ಅವುಗಳನ್ನು ನಿವಾರಿಸುವ ಸಿದ್ಧತೆಯನ್ನು ಮೊದಲೇ ಮಾಡಿಡುವುದು ಇದು ದೂರದರ್ಶಿ ಪುರುಷರ ಲಕ್ಷಣಗಳು. ಅದೇ ಕ್ಷಣದಲ್ಲಿ ಸಮಸ್ಯೆ ಪರಿಹಾರವಾದರೆ ಸರ್ವಸಾಮಾನ್ಯ ಜನರಿಗೆ ವಿಸ್ಮಯವಾಗಿ ತೋರುತ್ತದೆ, ಇದು ಬೇರೆ. ಟೊಂಗೆಗಳನ್ನು ಕಡಿಯಲು ಬಂದ ತೊಂದರೆ ಹಾಂ ಹಾಂ ಎನ್ನುವುದರಲ್ಲಿ ಪರಿಹಾರವಾದ ಘಟನೆಯ ಮರ್ಮ ಇಂಥ ಕೆಲ ಮಾರ್ಗಗಳಿಂದ ಬಿಡಿಸಲು ಬರುತ್ತದೆ. ಅದೇನೇ ಇರಲಿ, ಬಾಜೀಪಂತರ ಮೇಲೆ ಬಂದ ಸಂಕಟವು ವೈಯಕ್ತಿಕವಾದುದು. ಆದರೆ ರಾಮನವಮಿಯ ಮೆರವಣಿಗೆಯಲ್ಲಿಯ ವಿಘ್ನವು ಸಮಾಜಕ್ಕೆ ಸಂಬಂಧಿಸಿದ ಪ್ರಸಂಗವಾಗಿತ್ತು. ಎರಡೂ ಪ್ರಸಂಗಗಳಲ್ಲಿ ಸಮರ್ಥರು ತೊಂದರೆಗಳನ್ನು ದಾಟಿದರು. ಇದನ್ನು ನೋಡಿದರೆ ಮಸೂರ ಶಹಾಪುರಗಳಲ್ಲಿ ಅವರ ಪ್ರಭಾವವು ಒಮ್ಮೆಲೇ ಹೆಚ್ಚಿರಬೇಕು. ಇಂಥ ಯಾವುದಾದರೂ ಕರ್ತೃತ್ವದ ಗುರುತು ಮನಸದಟ್ಟಾದರೆ ಆ ವ್ಯಕ್ತಿಯ ಸುತ್ತಮುತ್ತ ಅನುಯಾಯಿಗಳು ಸೇರಿಕೊಳ್ಳುತ್ತಾರೆ. ಸಮರ್ಥರ ಮುಖ್ಯ ಸ್ಥಳವೆಂದು ಮುಂದೆ ಚಾಫಳವು ಪ್ರಸಿದ್ಧವಾಗಿದೆ. ಅದು ಹಾಗಾಗುವ ಪೂರ್ವದಲ್ಲಿ ನಾಲ್ಕೈದು ವರ್ಷಗಳ ಅವಧಿಯಲ್ಲಿ ಶಹಾಪುರವೇ ಅವರ ಮುಖ್ಯ ಸ್ಥಾನ ವಾಗಿತ್ತು. ಈ ಸಂದರ್ಭದಲ್ಲಿ ಇದನ್ನು ಗಮನದಲ್ಲಿಡುವಂತಿದೆ. ಶಹಾಪುರದ ಬದಿಯಲ್ಲಿರುವ ಒಂದು ಎತ್ತರ ದಿಬ್ಬದ ಮೇಲೆ ಸಮರ್ಥರು ಏಕಾಂತದಲ್ಲಿ ಕೂಡುತ್ತಿದ್ದರು. ಈ ಸ್ಥಳವನ್ನು ಈಗಲೂ ತೋರಿಸುತ್ತಾರೆ.

ಈ ರಾಮನವಮಿಯ ನಂತರ ಮುಂದಿನ ಎರಡು ವರ್ಷಗಳ ರಾಮನವಮಿಯ ಉತ್ಸವಗಳು ಮಸೂರಿನಲ್ಲಿ ಜರುಗಿದವು. ಈ ಅವಧಿಯಲ್ಲಿ ಸಮರ್ಥರ ಸಂಚಾರವು ಮುಖ್ಯವಾಗಿ ಸಾತಾರೆಯಿಂದ ಕೊಲ್ಹಾಪುರದವರೆಗಿನ ಅರವತ್ತು-ಎಪ್ಪತ್ತು ಮೈಲಿ ಪ್ರದೇಶದಲ್ಲಿ ಜರುಗಿತು. ಕರಾಡ, ಮಿರಜ, ಕೊಲ್ಹಾಪುರ ಈ ಸ್ಥಳಗಳಲ್ಲಿ ಅವರ ಕೀರ್ತನೆ ಜರುಗಿದ ಉಲ್ಲೇಖಗಳಿವೆ. ಬರುಬರುತ್ತ ಅವರ ಹೆಸರು ಪರಿಚಯವಾಗುತ್ತ ಹೋಯಿತು. ಶಿಷ್ಯವರ್ಗ ಬೆಳೆಯುತ್ತ ನಡೆಯಿತು. ಅನುಯಾಯಿಗಳ ಸಂಖ್ಯೆಯೂ ಹೆಚ್ಚಾಗುತ್ತ ಹೋಯಿತು. ಇದರಲ್ಲಿ ಸರ್ವಸಾಮಾನ್ಯರೂ ಇದ್ದರು. ಹಾಗೇ ಅಧಿಕಾರ ಪದದಲ್ಲಿದ್ದ ವ್ಯಕ್ತಿಗಳೂ ಇದ್ದರು. ವಿಶೇಷವೇನೆಂದರೆ ಸ್ತ್ರೀಯರು ಕೂಡ ಇದ್ದರು. ದೀಕ್ಷೆಯ ಇಲ್ಲವೆ ಅನುಗ್ರಹದ ದಾರಿಯನ್ನು ಸ್ತ್ರೀಯರಿಗೂ ಕೂಡ ಸಮರ್ಥರು ಮುಕ್ತವಾಗಿಟ್ಟಿದ್ದರು. ಶಹಾಪುರದ ಸಯೀಬಾಯಿಯ ಉಲ್ಲೇಖವು ಇದಕ್ಕೂ ಮೊದಲು ಬಂದುಹೋಗಿದೆ. ತಮ್ಮ ಕಾರ್ಯದಲ್ಲಿ ಯೋಗ್ಯವಾದ ಮರ್ಯಾದೆಯನ್ನು ಸೂಕ್ಷ್ಮವಾಗಿ ನಿರ್ವಹಿಸಿ ಸಮರ್ಥರು ಹೆಣ್ಣುಮಕ್ಕಳನ್ನು ಸಹಭಾಗಿಯಾಗಿ ತೆಗೆದುಕೊಳ್ಳುತ್ತಲಿದ್ದರು. ಇದೊಂದು ವಿಶೇಷವೆಂದು ಹೇಳಬೇಕು. ವಿಧವೆಯರಿಗೂ ಕೂಡ ಅವರು ಅಡ್ಡಿ ಮಾಡಿರಲಿಲ್ಲ.

ಕರಾಡದಲ್ಲಿಯ ರುದ್ರಾಜಿಪಂತ ದೇಶಪಾಂಡೆ ಇವರ ವಿಧವಾ ಕನ್ಯೆ ಅಕ್ಕಾ ಮತ್ತು

ಮಿರಜದಲ್ಲಿಯ ಗೋಪಜಿಪಂತ ದೇಶಪಾಂಡೆಯವರ ವಿಧವೆಯಾದ ಮಗಳು ವೇಣಾಬಾಯಿ ಈ ಇಬ್ಬರು ಸಮರ್ಥ ಸಂಪ್ರದಾಯದಲ್ಲಿ ಮಾನ್ಯತೆ ಪಡೆದ ಸ್ತ್ರೀಯರಾಗಿದ್ದರು. ಅವರು ಈ ಕಾಲಕ್ಕೆ ಸಮರ್ಥರಿಂದ ಅನುಗ್ರಹ ಪಡೆದವರಾಗಿದ್ದಾರೆ. ಇವರಲ್ಲಿ ವೇಣಾಬಾಯಿಯ ಮಿರಜದಲ್ಲಿರುವ ಮಠವು ಇಂದಿಗೂ ಪ್ರಸಿದ್ಧವ್ವಾಗಿದೆ. ಕೊಲ್ಲಾಪುರದ ಸುಭೇದಾರ ಪಾರಾಜಿಪಂತ ದೇಶಪಾಂಡೆ ಅವರು ಸಮರ್ಥರ ಕೀರ್ತನೆ ಕೇಳಿ ಅನುಗ್ರಹ ಪಡೆದರು. ಅವರ ಸಹೋದರಿ ರಖಬಾಯಿಯವರು, ಅಂಬಾಜಿ ಹಾಗೂ ದತ್ತಾತ್ರಯ ತಮ್ಮ ಇಬ್ಬರು ಮಕ್ಕಳ ಜತೆಗೂಡಿ ಸಮರ್ಥರ ಜತೆಯಲ್ಲಿ ಹೊರಡುವ ನಿರ್ಧಾರವನ್ನು ತೆಗೆದುಕೊಂಡರು. ಪಾರಾಜಿಪಂತರು ಅಪ್ಪಣೆಯನ್ನಿತ್ತರು. ಕರಾಡದ ಹತ್ತಿರ ಶಿರಗಾವಿಯಲ್ಲಿ ಮಠವನ್ನು ಸ್ಥಾಪಿಸಿ ಅಲ್ಲಿ ರಖಮಾಬಾಯಿ ಹಾಗೂ ದತ್ತಾತ್ರಯ ಇವರನ್ನು ಸಮರ್ಥರು ಇರಿಸಿದರು. ಅಂಬಾಜಿಯ ದಕ್ಷತೆ ಮತ್ತು ಉತ್ಸಾಹ ಅವರ ಮನಸ್ಸಿನಲ್ಲಿ ತುಂಬಿದ್ದು, ಆತನನ್ನು ತಮ್ಮ ಜತೆಯಲ್ಲಿ ಕರೆದುಕೊಂಡರು. ಈ ಅಂಬಾಜಿ ಎಂದರೆ ಸಮರ್ಥರ ಪಟ್ಟಶಿಷ್ಯನೆಂದು ಹೆಸರುವಾಸಿಯಾದ ಕಲ್ಯಾಣನು. ಕಲ್ಯಾಣನ ವ್ಯವಸ್ಥೆಯನ್ನು ಮುಂದೆ ಸಮರ್ಥರು ಡೋಮಗಾವದ ಮಠದಲ್ಲಿ ಮಾಡಿದರು. ಈ ಮಠದಲ್ಲಿಯೇ ಗ್ರಂಥರಾಜ ದಾಸಬೋಧೆಯ ಎಲ್ಲಕ್ಕಿಂತ ಹಳೆಯ ಪ್ರತಿ ಈ ಶತಮಾನದ ಆರಂಭದಲ್ಲಿ ದೊರೆಯಿತು. ಕಲ್ಯಾಣನು ಸಮರ್ಥರ ಸೇವೆಯನ್ನು ನಿಷ್ಠೆಯಿಂದ ಮಾಡಿದ ಬಗೆಗೆ ಅನೇಕ ಆಖ್ಯಾಯಿಕೆಗಳು ಸಾಂಪ್ರದಾಯಿಕರಲ್ಲಿ ಪ್ರಖ್ಯಾತವಾಗಿವೆ.

ಈ ಕಾಲದಲ್ಲಿ ಸಮರ್ಥರು ಅನೇಕ ಸ್ಥಳಗಳಲ್ಲಿ ಮಾರುತಿಯ ಸ್ಥಾಪನೆಯನ್ನು ಮಾಡಿದ್ದಾರೆ. ಇವುಗಳಲ್ಲಿ ಹನ್ನೊಂದು ಮಾರುತಿ ವಿಶೇಷ ಪ್ರಸಿದ್ಧವಾಗಿವೆ. ಅವುಗಳಲ್ಲಿ ಚಾಫಳದಲ್ಲಿಯೇ ಎರಡು ಸ್ಥಳಗಳಲ್ಲಿರುತ್ತವೆ. ಮಾಜಗಾವ ಹಾಗೂ ಶಿಂಗಣವಾಡಿ ಮಾರುತಿಗಳು ಚಾಫಳದ ಹತ್ತಿರ ಇರುವ ಎರಡು ಗ್ರಾಮಗಳಲ್ಲಿವೆ. ಶಹಾಪುರ ಮತ್ತು ಮಸೂರ ಈ ಸ್ಥಳಗಳಲ್ಲಿ ಸ್ಥಾಪಿಸಿದ ಮಾರುತಿಗಳು ಈ ಹನ್ನೊಂದು ಮಾರುತಿಗಳಲ್ಲಿ ಎಲ್ಲಕ್ಕಿಂತ ಮೊದಲಿನವು. ಇವುಗಳಲ್ಲದೆ ಉಂಬ್ರಜ, ಶಿರಾಳೆ, ಪಾರಗಾವ, ಮನಪಾಡಲೆ ಮತ್ತು ಬಹೆಬೋರಗಾವ ಇಲ್ಲಿಯ ಐದು ಮಾರುತಿಗಳು ಈ ಗಣನೆಯಲ್ಲಿ ಸಮಾವಿಷ್ಟವಾಗುತ್ತವೆ. ಈ ಹನ್ನೊಂದು ಮಾರುತಿಗಳನ್ನಷ್ಟೇ ಒಂದೆಡೆ ಗಣನೆಗೆ ಏಕೆ ತೆಗೆದುಕೊಳ್ಳುತ್ತಾರೆಂಬುದಕ್ಕೆ ಸ್ಪಷ್ಟ ವಿವರಗಳಿಲ್ಲ. ತೀರ್ಥಯಾತ್ರೆಗಾಗಿ ಪ್ರಯಾಣ ಮಾಡುತ್ತಿರುವ ಸಮಯ ಟಾಕಳಿಯಲ್ಲಿ ಉದ್ಧವನಿಗಾಗಿ ಸ್ಥಾಪಿಸಿದ ತೀರ ಆರಂಭದ ಮಾರುತಿ ಇಲ್ಲವೆ ತೀರ್ಥಯಾತ್ರೆಯ ಬಳಿಕ ಮಹಾಬಳೇಶ್ವರದಿಂದ ಸಂಚಾರವನ್ನು ಆರಂಭಿಸಿದ ನಂತರ ಅಲ್ಲಿ ಸ್ಥಾಪಿಸಿದ ಮೊದಲ ಮಾರುತಿ ಇವುಗಳ ಸಮಾವೇಶವನ್ನು ಸುಪ್ರಸಿದ್ಧ ಹನ್ನೊಂದು ಮಾರುತಿಗಳಲ್ಲಿ ಮಾಡುವುದಿಲ್ಲ. ಹನ್ನೊಂದು ಮಾರುತಿಗಳಿದ್ದ ಈ ಗ್ರಾಮಗಳು ರಾಜಕೀಯ ದೃಷ್ಟಿಯಿಂದ ಮುಖ್ಯ ಸ್ಥಳಗಳಾಗಿದ್ದವೆಂದು ಕೆಲಕೆಲವರು ವಿವರಿಸುತ್ತಾರೆ. ಆದರೆ ಅದು ಸಕಾರಣವಾಗಿ ಕಾಣದು. ಶಿವಾಜಿಯವರಿಂದ ಸಂಪರ್ಕವನ್ನು ಇಟ್ಟುಕೊಳ್ಳುವ ದೃಷ್ಟಿ

ಯಿಂದ ಇಲ್ಲಿ ಕೆಲವು ಯೋಜನೆಗಳಿದ್ದವೆಂದು ಕೆಲಕೆಲವರು ಹೇಳಿದ್ದಾರೆ. ಆದರೆ ಅದು ಬಹಳ ದೂರಾನ್ವಯದೆಂದು ತೋರುತ್ತದೆ.

ಒಂದು ಘಟನೆಯನ್ನು ಗಮನಕ್ಕೆ ತೆಗೆದುಕೊಳ್ಳಬಹುದಾಗಿದೆ. ಈ ಹನ್ನೊಂದು ಮಾರುತಿಗಳು ಶಹಾಪುರ ಚಾಫಳ ಪರಿಸರದಲ್ಲಿವೆ. ಸಮರ್ಥರ ಕಾರ್ಯಗಳಿಗೆ ಒಂದು ಆಕಾರವು ಶಹಾಪುರದಿಂದ ಬರತೊಡಗಿತು. ಚಾಫಳದಲ್ಲಿ ರಾಮಮಂದಿರವನ್ನು ನಿರ್ಮಿಸುವವರೆಗೆ ಅದಕ್ಕೆ ಒಂದಿಷ್ಟು ರೂಪ ಬಂದಿತು. ಸಮರ್ಥರ ಪ್ರಾರಂಭದ ಶಿಷ್ಯರು ಅವರಿಗೆ ಈ ಪರಿಸರದಲ್ಲಿಯೇ ದೊರೆತರು. ಆ ಮೊಟ್ಟಮೊದಲಿನ ಐದು ವರ್ಷಗಳ ಕಾಲದಲ್ಲಿ ಈ ಹನ್ನೊಂದು ಮಾರುತಿಗಳಾಗಿವೆ. ಸಮರ್ಥರಿಗೆ ಅವುಗಳ ವಿಶೇಷ ಅಗತ್ಯವಿರುವ ಸಂಭವವಿದೆ. ಎಂತಲೇ ಅವು ಬೇರೆಯಾಗಿ ಎಣಿಸಲ್ಪಡುತ್ತವೆಂದು ತಿಳಿಯಬಹುದು.

ಮಸೂರಿನಲ್ಲಿಯ ರಾಮನವಮಿಯ ಉತ್ಸವಕ್ಕೆ ಒಂದು ಸ್ವರೂಪ ಬಂದಿತ್ತು. ಶಿಷ್ಯ ಸಮುದಾಯವು ಬೆಳೆಯುತ್ತ ನಡೆದಿತ್ತು. ಇನ್ನು ಸ್ವತಂತ್ರವಾದ ರಾಮಮಂದಿರವನ್ನು ಎಲ್ಲಿಯಾದರೂ ನಿರ್ಮಿಸಬೇಕೆಂದು ಸಮರ್ಥರ ಮನಸ್ಸಿನಲ್ಲಿ ಮೂಡಿತು. ಅದಕ್ಕಾಗಿ ಒಂದು ಒಳ್ಳೆಯ ಮೂರ್ತಿ ಇರಬೇಕೆಂದು ಕಲ್ಲುಕುಟಿಕನಿಗೆ ಹೇಳಿದರು. ಮುಂದೆ ಯಾವುದೋ ನಿಮಿತ್ತದಿಂದ ನಿಗಡಿಗೆ ರಂಗನಾಥಸ್ವಾಮಿಯವರ ಹತ್ತಿರ ಹೋದಾಗ ಮರಳಿ ಬರುವ ದಾರಿಯಲ್ಲಿ ರಹಿಮತಪುರ ಸಮೀಪದ ಅಂಗಾಪುರದ ಕಾಡಿನಲ್ಲಿ ಒಂದು ಪುರಾತನ ಶಿವಮಂದಿರದಲ್ಲಿ ಸಮರ್ಥರು ವಸತಿ ಮಾಡಿದ್ದರು. ಅಲ್ಲಿ ಕೃಷ್ಣಾ ನದಿಯ ಮಡುವಿನಲ್ಲಿ ನಿಮ್ಮ ಮನ ಮೆಚ್ಚುವ ಮೂರ್ತಿಯಿದೆ ಎಂಬ ದೃಷ್ಟಾಂತವು ಅವರಿಗಾಯಿತು. ಮಡುವಿನಲ್ಲಿ ಮುಳುಗಿದಾಗ ಆ ದೃಷ್ಟಾಂತದಂತೆ ಮೂರ್ತಿ ದೊರೆಯಿತು. ಅದನ್ನು ತೆಗೆದುಕೊಂಡು ಸಮರ್ಥರು ಅತೀವ ಸಮಾಧಾನದಿಂದ ಚಾಫಳಕ್ಕೆ ಬಂದರು. ಅಂಗಾಪುರದ ಗ್ರಾಮಸ್ಥರು ಸಮರ್ಥರು ಮಡುವಿನಲ್ಲಿಯ ಮೂರ್ತಿಯನ್ನು ತೆಗೆದುಕೊಂಡು ಹೋದ ಸಮಾಚಾರವನ್ನು ಅರಿತರು. ಅವರು ಬೆನ್ನ ಹಿಂದೆಯೇ ಚಾಫಳಕ್ಕೆ ಬಂದರು. "ನಮ್ಮೂರಿನ ಮೂರ್ತಿಯಿದೆ. ಅದನ್ನು ನಮ್ಮೂರಿನಲ್ಲಿ ಕೂಡಿಸಬೇಕಾಗಿದೆ" ಎಂದು ಅವರು ಆಗ್ರಹಪಡಿಸಿದರು. ಆದರೆ ಸಮರ್ಥರು ಅವರಿಗೆ ತಿಳಿಹೇಳಿದರು. ಪ್ರತಿವರ್ಷ ರಾಮನವಮಿಯ ಉತ್ಸವದಲ್ಲಿ ಮುಂಭಾಗದ ಸಿಂಹಾಸನದ ದಂಡವನ್ನು ಅಂಗಾಪುರದ ಗ್ರಾಮಸ್ಥರೇ ಹಿಡಿಯಬೇಕೆಂದು ಅವರು ಸೂಚಿಸಿದರು. ಇಂದಿಗೂ ಅಂಗಾಪುರದ ನಾಗರಿಕರ ವತಿಯಿಂದ ಆ ಮಾನ ಸಲ್ಲುತ್ತದೆ.

ಸಮರ್ಥರಿಗೆ ಮಡುವಿನಲ್ಲಿ ಮೂರ್ತಿ ದೊರೆತ ಬಗೆಗೆ ಯಾವುದೋ ಅರ್ಥವಿದೆ. ಮುಸಲ್ಮಾನ ರಾಜಕರ್ತರ ಭಯದಿಂದ ಆ ಕಾಲದಲ್ಲಿ ಎಷ್ಟೋ ಗ್ರಾಮಗಳಲ್ಲಿ ಹೀಗೆ ದೇವರ ಮೂರ್ತಿಗಳನ್ನು ನದಿಗಳಲ್ಲಿಯೋ, ಬಾವಿಗಳಲ್ಲಿಯೋ ಚೆಲ್ಲಿಬಿಡುತ್ತಿದ್ದರು. ಸಮಾಜಕ್ಕೆ ಒಂದಿಷ್ಟು ಧೈರ್ಯ ಕೊಡುವ ಸಲುವಾಗಿ ಮತ್ತು ಜನರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಸಲುವಾಗಿ ಹೀಗೆ ಮೂರ್ತಿಗಳನ್ನು ತೆಗೆದು ಮತ್ತೆ ಅವುಗಳನ್ನು ಪ್ರತಿಷ್ಠಾಪಿಸುವ ಪ್ರಯತ್ನವನ್ನು ಮಾಡಬೇಕೆಂಬುದು ಸಮರ್ಥರ

ಮನಸ್ಸಿನಲ್ಲಿದ್ದುದು ಸ್ವಾಭಾವಿಕವಾಗಿದೆ. ರಾಮನವಮಿಯ ಉತ್ಸವವನ್ನು ಜರುಗಿಸುವುದು ಇಲ್ಲವೆ ಒಂದಿಷ್ಟು ಹೊಸ ದೇವಾಲಯಗಳನ್ನು ನಿರ್ಮಿಸುವುದು, ಇದಕ್ಕೆ ಆ ಕಾಲದಲ್ಲಿ ರಾಜಕೀಯ ದೃಷ್ಟಿಯಿಂದಲೂ ಒಂದು ಮಹತ್ವವಿತ್ತು. ಹಿಂದುಗಳು ತಮ್ಮ ದೇವದೇವತೆಗಳ ಉತ್ಸವವನ್ನು ಮುಕ್ತವಾಗಿ ಮಾಡಲು ಬರುವಂತಿರಲಿಲ್ಲ. ಬಿಜಾಪುರ ಆದಿಲ್‌ಶಾಹಿಯ ಆ ಸಮಯದ ಸುಲ್ತಾನ್ ಮಹ್ಮದ್‌ನ ಒಂದು ಆಜ್ಞಾಪತ್ರವು ಉಪಲಬ್ಧವಾಗಿದೆ. ಅದರಲ್ಲಿ ಹಿಂದುಗಳು ಸಾರ್ವಜನಿಕ ಉತ್ಸವಗಳನ್ನು ಆಚರಿಸಕೂಡದು ಎಂಬರ್ಥದ ಒಂದು ಕಾನೂನಿನ ನಿಯಮವಿದೆ. ಕಳೆದ ಶತಮಾನದಲ್ಲಿ ಜನಜಾಗೃತಿಯ ಪ್ರಯತ್ನಕ್ಕಾಗಿ ಲೋಕಮಾನ್ಯ ಟಿಳಕರು ಸಾರ್ವಜನಿಕ ಗಣೇಶೋತ್ಸವ ಮತ್ತು ಶಿವಜಯಂತ್ಯುತ್ಸವ ಇವುಗಳನ್ನು ಪ್ರಾರಂಭಿಸಿದರು. ಅದರ ಹಿಂದೆ ಅವರ ಯಾವ ದೃಷ್ಟಿಯಿತ್ತೋ ಅದೇ, ರಾಮನವಮಿ ಉತ್ಸವದ ಈ ಪದ್ಧತಿಯನ್ನು ಪ್ರಾರಂಭಿಸುವುದರಲ್ಲಿ ಸಮರ್ಥರಿಗಿತ್ತು. ಶ್ರೀರಾಮನ ಸ್ವತಂತ್ರ ದೇವಾಲಯಗಳನ್ನು ನಿರ್ಮಿಸುವುದರ ಪ್ರಯತ್ನದ ಹಿಂದೆಯೂ ಅದೇ ಉದ್ದೇಶವಿತ್ತು.

ನಾಲ್ಕು ದಿಕ್ಕುಗಳಲ್ಲಿ ಬೆಟ್ಟಗಳಿಂದ ಸುತ್ತುವರೆದ ಚಾಫಳ ಗ್ರಾಮವನ್ನು ರಾಮ ಮಂದಿರಕ್ಕಾಗಿ ಸಮರ್ಥರು ಆಯ್ಕೆ ಮಾಡಿದರು. ಮರಾಠಾ ಜಹಗಿರಿಯ ಪ್ರದೇಶದಲ್ಲಿ ಆ ಗ್ರಾಮವಿತ್ತು. ಈ ವಿಚಾರವನ್ನು ಅವರು ಖಚಿತವಾಗಿ ಮಾಡಿರಬೇಕು. ಪುಣೆಯಲ್ಲಿ ಗಿರಿಗೋಸಾವಿಯವರು ಒಂದು ಕೀರ್ತನೆಯ ನಂತರ ಶಿವಾಜಿಯವರಿಗೆ ವಿನಂತಿಸಿಕೊಂಡ ಬಳಿಕ, ಅವರು ಈ ದೇವಾಲಯವನ್ನು ನಿರ್ಮಿಸುವ ಸಲುವಾಗಿ ಸಹಾಯವೆಂದು ಮಾಮಲೇದಾರ ನರಸೋಪಮಲನಾಥರ ಮುಖಾಂತರ ಮುನ್ನೂರು ಹೊನ್ನುಗಳನ್ನು ಕಳುಹಿಸಿದ ವಿವರ ಅರ್ಥಪೂರ್ಣವಾಗಿದೆ. ಚಾಫಳದಲ್ಲಿ ದೇವಾಲಯಕ್ಕಾಗಿ ಭೂಮಿಯ ಶೋಧ ನಡೆದಾಗ ಇಲ್ಲಿಯ ಗ್ರಾಮಸ್ಥರು ಮಾಂಡನದೀತೀರದ ಶ್ಮಶಾನವಿದ್ದ ಸ್ಥಳವನ್ನು ತೋರಿಸಿದರು. ಆ ಸ್ಥಳವು ಭೂತಪಿಶಾಚಿಗಳಿಂದ ತುಂಬಿದೆ ಎಂಬ ಭಾವನೆಯಿತ್ತು. ಹೊಸ ದೇವಾಲಯಕ್ಕಾಗಿ ಇಂಥ ಸ್ಥಳವನ್ನು ತೋರಿಸುವುದು ಅನುಕೂಲತೆಯ ಲಕ್ಷಣವೆಂದು ತಿಳಿಯಲು ಬರುವುದಿಲ್ಲ. ಆದರೆ ಸಮರ್ಥರು ಈ ವಿಷಯದ ಚಿಂತೆ ಮಾಡಲಿಲ್ಲ. ದೊರೆತ ಸ್ಥಳವನ್ನು ಅವರು ಸ್ವೀಕರಿಸಿದರು. ಅದನ್ನು ಹಸನು ಮಾಡಿಸಿದರು. ಅನೇಕ ಕಲ್ಲುಮಣ್ಣಿನ ದೇವರು ಅಲ್ಲಿ ಬಿದ್ದಿದ್ದವು. ಅವುಗಳನ್ನು ಆಯ್ದು ನದಿಯಲ್ಲಿ ಚೆಲ್ಲಿಸಿದರು. ಇದು ಕೂಡ ಒಂದು ಲೋಕಶಿಕ್ಷಣವೇ ಆಗಿದೆ. ಆ ಎಲ್ಲ ಕ್ಷುದ್ರದೇವತೆಗಳ ಪ್ರತೀಕವೆಂದು ಒಬ್ಬ ಮ್ಹಸೋಬಾನನ್ನು ಅವರು ನೇರಳೆಮರದ ಕೆಳಗೆ ಕಾಯ್ದಿಟ್ಟರು. ದೇವಾಲಯದ ಇತರ ಕೆಲಸಗಳಲ್ಲಿ ಸಮರ್ಥರಿಗೆ ಅನೇಕ ಜನರ ಸಹಾಯ ದೊರೆಯಿತು. ಆನಂದರಾವ್ ದೇಶಪಾಂಡೆ ಮೊದಲಾದ ಸ್ಥಳೀಯ ಶಿಷ್ಯರಿಂದ ವಿಶೇಷವಾಗಿ ಸಹಕಾರ ಸಿಕ್ಕಿತು.

ಕೊನೆಗೆ ದೇವಾಲಯವು ಪೂರ್ಣವಾಗಿ ಅಂಗಾಪುರದ ಮಡುವಿನಲ್ಲಿ ದೊರೆತ ಶ್ರೀರಾಮನ ಮೂರ್ತಿಯ ಪ್ರತಿಷ್ಠಾಪನೆಯು ಅಲ್ಲಿ ವಿಧ್ಯುಕ್ತವಾಗಿ ಜರುಗಿತು.

ಸನ್ 1648ರಲ್ಲಿ ರಾಮನವಮಿಯ ಉತ್ಸವವನ್ನು ಆ ದೇವಾಲಯದಲ್ಲಿ ದೊಡ್ಡ ಪ್ರಮಾಣದಲ್ಲಿ ಆಚರಿಸಲಾಯಿತು. ಪಂಚವಟಿಯನ್ನು ತ್ಯಜಿಸಿ ರಾಮದಾಸರು ಕೃಷ್ಣಾತೀರಕ್ಕೆ ಬಂದು ನಾಲ್ಕು ವರ್ಷಗಳು ಪೂರ್ತಿಯಾದವು. ಹನ್ನೊಂದು ಮಾರುತಿಗಳ ಸ್ಥಾಪನೆ ಮತ್ತು ಚಾಫಳದ ರಾಮಮಂದಿರದ ನಿರ್ಮಾಣ ಆ ಕಾಲದಲ್ಲಿ ಮಾಡಿದ ಸಾಧನೆಗಳು ಎಂದು ಹೇಳಬೇಕು. ಚಾಫಳದ ಮೊದಲ ಉತ್ಸವದಲ್ಲಿ ಬಹಳಷ್ಟು ಜನಸಮುದಾಯವು ಸೇರಿತ್ತು. ಸಮರ್ಥರಿಗೆ ಅತೀವ ಸಮಾಧಾನವಾಯಿತು. ಆ ಉತ್ಸವಕ್ಕಾಗಿ ಸೇರಿದ ಜನಸಂದಣಿಯ, ಜನರಲ್ಲಿ ಚಿಮ್ಮುತ್ತಿರುವ ಉತ್ಸಾಹದ ಮತ್ತು ದೇವಾಲಯದ ವೈಭವದ ನಿಚ್ಚಳ ವರ್ಣನೆಯನ್ನು 'ಡಪ್ಪಿನ ಹಾಡು' ಹೆಸರಿನ ಒಂದು ಚಿಕ್ಕ ರಚನೆಯಲ್ಲಿ ಸಮರ್ಥರು ಮಾಡಿದ್ದಾರೆ. "ದಾಸ ಬೆಟ್ಟದಲ್ಲಿರುವನು । ದೇವರ ಯಾತ್ರೆ ನೋಡುವನು ।" ಈ ಸುಪ್ರಸಿದ್ಧ ಉದ್ಗಾರವು ಈ ಕವಿತೆಯಲ್ಲಿದೆ. ವಿರಕ್ತರಿಗೆ ಶೋಭಿಸುವ ಅಲಿಪ್ತ ನೀತಿ ಮತ್ತು ಕಾರ್ಯಕರ್ತರಿಗೆ ಅವಶ್ಯಕವಾದ ಜನಸಂಪರ್ಕ ಈ ಎರಡರ ಸಮ್ಮಿಲನವನ್ನು ಸಮರ್ಥರು ಇಡೀ ಆಯುಷ್ಯ ಬೆಸೆದರು. ಅದರ ಪ್ರತಿಬಿಂಬವನ್ನು ಈ ಎರಡು ಸಾಲುಗಳಲ್ಲಿ ನೋಡಿದರೆ ಯಥಾರ್ಥವಾಗಿ ಸ್ಪಷ್ಟವಾಗುತ್ತದೆ. ಕರ್ತೃತ್ವದ ದೃಷ್ಟಿಯಿಂದ ವಿಚಾರಿಸಿದರೆ ರಾಮದಾಸರಿಗೆ ಸಮರ್ಥ ಎಂಬ ಅಭಿದಾನವು ಶೋಭಿಸುವ ಹಂತಕ್ಕೆ ಈಗವರು ಬಂದು ಮುಟ್ಟಿದ್ದಾರೆಂದು ಹೇಳಲಡ್ಡಿಯಿಲ್ಲ.

ಈ ನಾಲ್ಕು ವರ್ಷಗಳ ಕಾಲದಲ್ಲಿ ಸಮರ್ಥರು ಸ್ವತಃ ಎಲ್ಲೆಡೆ ಸಂಚಾರ ಮಾಡುತ್ತಲಿದ್ದರು. ಯಾವ ಕೆಲ ಜನಸಂಪರ್ಕವನ್ನು ಈವರೆಗೆ ಅವರು ಸಾಧಿಸಿದ್ದರೊ, ಅದನ್ನವರು ಒಬ್ಬರೇ ಮಾಡಿದ್ದರು. ಶಿಷ್ಯರ ಪ್ರತ್ಯಕ್ಷ ಸಹಾಯವು ಅವರಿಗೆ ಇಲ್ಲಿ ವಿಶೇಷ ಆಗಿರಲಿಕ್ಕಿಲ್ಲ. ಆದರೆ ಈ ಸಮಯದ ಸುಮಾರಿಗೆ ಸಮರ್ಥರು ನಿರ್ಮಿಸಿದ ಶಿಷ್ಯವರ್ಗ ಅತ್ತಿತ್ತ ಸಂಚರಿಸುತ್ತಿರಬೇಕು. ಸಮರ್ಥರ ವಿಚಾರಗಳನ್ನು ಪ್ರಚಾರ ಮಾಡುವ ಬಲ ಹೆಚ್ಚಿರಬೇಕು. ಒಬ್ಬರಿಗಿಂತ ಹೆಚ್ಚು ಜನರು ಕಾರ್ಯದಲ್ಲಿ ತೊಡಗಿದರೆ ಕೆಲಸದ ಗತಿ ಸಹಜವಾಗಿ ಎಷ್ಟೋ ಪಟ್ಟು ಹೆಚ್ಚುವುದು. ಅನಂತರದಲ್ಲಿ ಹಾಗೇ ಆಯಿತು. ತರುಣ ಹಾಗೂ ಬುದ್ಧಿವಂತರಾದ ಶಿಷ್ಯರನ್ನು ಸೇರಿಸುವುದು, ಅವರಿಗೆ ದೀಕ್ಷೆ ಕೊಡುವುದು, ಅವರ ಮೇಲೆ ಸಂಸ್ಕಾರ ಮಾಡುವುದು ಮತ್ತು ಬೇರೆ ಬೇರೆ ಗ್ರಾಮಗಳಲ್ಲಿ ಮಠಗಳನ್ನು ನಿರ್ಮಿಸುವುದಕ್ಕೆ ಅವರನ್ನು ಕಳುಹಿಸುವುದು ಇವು ಸಮರ್ಥರ ಅಷ್ಟರವರೆಗೆ ನಿಶ್ಚಿತಗೊಂಡಿದ್ದ ಕಾರ್ಯಸ್ವರೂಪಗಳು. ಸರ್ವಸಂಗ ಪರಿತ್ಯಾಗ ಮಾಡಿದ ಅವರಂಥ ವಿರಕ್ತರಿಗೆ ಜನಜಾಗೃತಿ ಮಾಡಲು ಇದಕ್ಕಿಂತ ಬೇರೆ ಮಾರ್ಗವು ಆ ಕಾಲದಲ್ಲಿ ದೊರೆಯುವಂತಿರಲಿಲ್ಲ. ಸಮರ್ಥರು ಇಡೀ ಆಯುಷ್ಯ ಅನೇಕ ಮಠಗಳನ್ನು ಸ್ಥಾಪಿಸಿರುವುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ. ಅವರು ಸ್ಥಾಪಿಸಿದ ಮಠಗಳ ಸಂಖ್ಯೆಯನ್ನು ಭಾವಿಕರಾದ ಸಾಂಪ್ರದಾಯಿಕರು ಹನ್ನೊಂದು ನೂರರವರೆಗೆ ಒಯ್ದಿದ್ದಾರೆ. ಇದು ಕಾಣುವಂತೆ ಅತಿಶಯೋಕ್ತಿಯಿಂದ ಕೂಡಿದೆ. ಆದರೆ ಐವತ್ತು, ಐವತ್ತೈದರವರೆಗೆ ಸಮರ್ಥರು ಮಠಗಳನ್ನು ಸ್ಥಾಪಿಸಿದರು. ಅಲ್ಲಿ

ಶಿಷ್ಯರನ್ನು ನಿಯಮಿಸಿದರು. ಇದರಲ್ಲಿ ಸಂದೇಹವಿಲ್ಲ. ಇವುಗಳಲ್ಲಿ ಬಹುಸಂಖ್ಯೆಯ ಮಠಗಳು ಮಹಾರಾಷ್ಟ್ರದಲ್ಲಿರುವುದು ಸ್ವಾಭಾವಿಕ. ಆಂಧ್ರದ ಇಂದೂರಬೋಧನ ದಲ್ಲಿ ಹಾಗೂ ದಕ್ಷಿಣದ ದೂರದ ತಂಜಾವೂರಿನಲ್ಲಿ ಸಮರ್ಥರ ಮಠಗಳಿದ್ದವು. ಆ ಕಾಲದ ಪರಿಸ್ಥಿತಿಯನ್ನು ಗಮನದಲ್ಲಿರಿಸಿದರೆ ಈ ಕಾರ್ಯ ಚಿಕ್ಕಪುಟ್ಟದ್ದಾಗಿರಲಿಲ್ಲ. ಹೀಗೆ ಕಾರ್ಯಕ್ಷೇತ್ರಗಳನ್ನು ವಿಸ್ತರಿಸುವುದು ಮತ್ತು ಅವುಗಳನ್ನು ವ್ಯವಸ್ಥಿತವಾಗಿ ನಡೆಯಿಸುವುದು ಮಧ್ಯ ಯುಗದ ಕಾಲದಲ್ಲಿ ಬೇರೆ ಉದಾಹರಣೆ ಇಡೀ ಭರತಖಂಡ ದಲ್ಲಿ ಸಹಜವಾಗಿ ದೊರೆಯುವುದಿಲ್ಲ.

ಯಾವುದೇ ಗ್ರಾಮದಲ್ಲಿ ಮಠವನ್ನು ಸ್ಥಾಪಿಸಿದ ಬಳಿಕ ಶಿಷ್ಯರು ಅಲ್ಲಿ ಈಶ್ವರ ಚಿಂತನೆಯನ್ನಷ್ಟೆ ಮಾಡುತ್ತಿರಬೇಕೆಂಬ ಅಪೇಕ್ಷೆ ಸಮರ್ಥರದಾಗಿರಲಿಲ್ಲ. ಮುಮುಕ್ಷು ಜೀವಿಗಳಿಗೆ ಕೇವಲ ಈಶ್ವರ ಚಿಂತನೆಯು ಮಾರ್ಗವನ್ನು ತೋರಿಸುವುದಾಗಿರುತ್ತದೆ. ಆದರೆ ಅದಕ್ಕಾಗಿ ಬೇರೆ ಬೇರೆ ಗ್ರಾಮಗಳಲ್ಲಿ ಮಠಗಳನ್ನು ಸ್ಥಾಪಿಸುವ ಅವಶ್ಯಕತೆ ಇರುವುದಿಲ್ಲ. ತಿರುಗಿ ಈಶ್ವರನ ಉಪಾಸನೆಯು ಏಕಾಗ್ರಚಿತ್ತದಿಂದ ಆಗಬೇಕೆಂಬ ದೃಷ್ಟಿಯಲ್ಲಿ ಇಂಥ ಶಿಷ್ಯರು ಗ್ರಾಮದಿಂದ ದೂರ ಎಲ್ಲಿಯಾದರೂ ಕಾಡಿನಲ್ಲಿ ವಾಸ್ತವ್ಯ ಮಾಡುವುದು ಉಪಕಾರಕವಾಗುತ್ತಿತ್ತು. ಆಧ್ಯಾತ್ಮಿಕ ಸಾಧನೆಯನ್ನು ನಿರಾತಂಕವಾಗಿ ಮಾಡುವಂತಿದ್ದರೆ ನಿತ್ಯ ಗುರುವಿನ ಮಾರ್ಗದರ್ಶನವು ಆವಶ್ಯಕವೆಂದು ತಿಳಿಯು ತ್ತಾರೆ. ಅದಕ್ಕಾಗಿ ಶಿಷ್ಯರು ಗುರುಗಳ ಸಾನ್ನಿಧ್ಯದಲ್ಲಿರುವುದು ಹಿತಕರ. ಎಲ್ಲಿ ಯಾರಾ ದರೂ ಕೇವಲ ಪರಮಾರ್ಥ ಸಾಧನೆಯ ಉಪದೇಶವನ್ನು ಮಾಡುವ ಗುರು ಗಳಿದ್ದಾರೋ, ಅವರು ಇದೇ ಮಾರ್ಗವನ್ನು ಅನುಸರಿಸಿದ್ದಾರೆ. ಹೀಗೆ ಸಮರ್ಥರು ಮಾಡದಿರುವ ಉದ್ದೇಶ ಸ್ಪಷ್ಟವಿದೆ. ತಮ್ಮ ಶಿಷ್ಯರು ಈಶ್ವರ ಚಿಂತನೆಯ ಜತೆಯಲ್ಲಿ ಜನಜಾಗೃತಿಯ ಕೆಲಸದಲ್ಲಿ ಗಮನ ಹರಿಸಬೇಕೆಂದು ಅವರ ಗುರಿಯಾಗಿತ್ತು. ಅದಕ್ಕಾಗಿ ಅವರು ಶಿಷ್ಯರನ್ನು ತಮ್ಮ ಹತ್ತಿರ ಇಟ್ಟುಕೊಂಡಿರಲಿಲ್ಲ. ಎಲ್ಲೆಲ್ಲಿ ಸಾಧ್ಯವೋ ಆಯಾ ಸ್ಥಳಗಳಲ್ಲಿ ಮಠಗಳನ್ನು ಸ್ಥಾಪಿಸಿ ಅಲ್ಲಲ್ಲಿ ಅವರನ್ನು ಕಳುಹಿಸಿ ದರು. "ಮಹಂತರು ಮಹಂತರನು ನಿರ್ಮಿಸಬೇಕು । ಯುಕ್ತಿ ಬುದ್ಧಿಯಿಂದ ತುಂಬಬೇಕು । ಜ್ಞಾನಿಗಳನ್ನಾಗಿ ಮಾಡಿ ಕಳಿಸಬೇಕು ಸುತ್ತ । ದೇಶದ ತುಂಬ ॥" ಹೀಗೆ ಅವರ ವಚನವಿದೆ. ಆ ವಚನದ ಆವಿಷ್ಕಾರವೆಂದರೆ ಅವರ ಶಿಷ್ಯ ಸಮುದಾಯ.

ಮಠಗಳಲ್ಲಿ ಶ್ರೀರಾಮನ ಹಾಗೂ ಮಾರುತಿಯ ಮೂರ್ತಿಗಳನ್ನು ಸ್ಥಾಪಿಸು ತ್ತಿದ್ದರು. ಅಲ್ಲಿ ನಿತ್ಯ ಪೂಜೆಯಾಗುತ್ತಿತ್ತು. ಇದು ದೈನಂದಿನ ಕಾರ್ಯಕ್ರಮದ ಅಂಗ ವಾಗಿತ್ತು. ಇದರ ಜತೆಗೆ ಕೆಲವು ಪ್ರಾಸಂಗಿಕ ಕಾರ್ಯಕ್ರಮಗಳು ನಿಯೋಜಿತವಾಗು ತ್ತಿದ್ದವು. ಶ್ರೀರಾಮ ಜನ್ಮೋತ್ಸವ ಮತ್ತು ಹನುಮಾನ ಜಯಂತಿ ಈ ಸಮಾರಂಭ ಗಳು ಅವುಗಳಲ್ಲಿ ಮುಖ್ಯವಾಗಿರುತ್ತಿದ್ದವು. ಈ ಉತ್ಸವಗಳ ನಿಮಿತ್ತವಾಗಿ ಗ್ರಾಮ ಗಳಲ್ಲಿ ಜನರಿಗೆ ಶಿಷ್ಯರ ಸಂಪರ್ಕವು ಒದಗುತ್ತಿತ್ತು. ಇತರ ಎಲ್ಲ ದೇವಾಲಯಗಳಲ್ಲಿ ನಡೆಯುತ್ತಿರುವಂತೆ ಪ್ರವಚನ ಮತ್ತು ಕಥಾ ಕೀರ್ತನೆಗಳು ಈ ಮಠಗಳಲ್ಲಿಯೂ ಜರುಗುತ್ತಿದ್ದವು. ಇವುಗಳ ಮುಖಾಂತರ ಒಂದಿಲ್ಲ ಒಂದು ಧಾರ್ಮಿಕ ಹಾಗೂ

ಪಾರಮಾರ್ಥಿಕ ವಿಚಾರಗಳು ಸಮಾಜಕ್ಕೆ ತಲುಪಿದ್ದವು. ಆದರೆ ಸಮರ್ಥರು ಇಷ್ಟನ್ನೇ ಸಾಧಿಸುವವರಾಗಿರಲಿಲ್ಲ. ಪರಂಪರಾಗತ ಧಾರ್ಮಿಕ ವಿಚಾರಗಳಲ್ಲಿ ಏನಾದರೂ ಹೆಚ್ಚಿಗೆ ಹಾಗೂ ವಿಶೇಷತೆಗಳನ್ನು ಸಮಾಜಕ್ಕೆ ಹೇಳಬೇಕಾಗಿರುತ್ತಿತ್ತು. ಮಸೂರ ಮತ್ತು ಚಾಫಳಗಳಲ್ಲಿ ರಾಮನವಮಿಯ ಉತ್ಸವಗಳಿಂದ ಸಮಾಜದ ಹಿತಕ್ಕೆ ಪೋಷಕವಾಗುವಂಥದನ್ನು ಸಮರ್ಥರು ವಿಶೇಷವಾಗಿ ಜನತೆಯವರೆಗೆ ಮುಟ್ಟಿಸಿದ್ದು ನಮ್ಮ ಗಮನಕ್ಕೆ ಬರುತ್ತದೆ. ತಾವು ಸಾಧಿಸಿದ ಸಂಗತಿಗಳನ್ನು ತಮ್ಮ ಶಿಷ್ಯರು ಕೂಡ ತಮ್ಮ ತಮ್ಮ ಸ್ಥಳಗಳಲ್ಲಿ ಮಾಡಬೇಕೆಂಬುದು ಸಮರ್ಥರ ಅಪೇಕ್ಷೆ ಯಾಗಿರುತ್ತಿತ್ತು. ಯಾವ ವಿಚಾರಗಳ ಮೂಲಕ ಅದು ಸಾಧ್ಯವೋ, ಅಂಥ ವಿಚಾರ ಗಳನ್ನು ಸಮರ್ಥರು ಅತ್ತಿತ್ತ ತಮ್ಮ ಸಾಹಿತ್ಯದಲ್ಲಿ ಬಿತ್ತಿದ್ದಾರೆ. ಅವರ ಸಾಹಿತ್ಯ ವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇದು ಗಮನಕ್ಕೆ ಬರುತ್ತದೆ.

'ಮನೋಬೋಧೆ' (ಮನಾಚೆ ಶ್ಲೋಕ) ಈ ಹೆಸರಿನ ಸಮರ್ಥರ ಒಂದು ಸ್ವತಂತ್ರ ರಚನೆಯಿದೆ. ಭುಜಂಗ ಪ್ರಯಾತ್ ವೃತ್ತದಲ್ಲಿ ಇನ್ನೂರಐದು ಶ್ಲೋಕಗಳು ಅದರಲ್ಲಿವೆ. ಶ್ಲೋಕಗಳ ರಚನೆ ಸರಳ, ಪ್ರಾಸಾದಿಕ, ಆಬಾಲ ಸ್ತ್ರೀ ಪುರುಷರು ಸಹಜ ವಾಗಿ ಅರಿಯುವಂತಿವೆ. ತಮ್ಮನ್ನೇ ಮನಸ್ಸಿನಲ್ಲಿಟ್ಟುಕೊಂಡು ಪ್ರಿಯಜನರಿಗೆ ಮನೋಗತವನ್ನು ಹೇಳಬೇಕೆಂಬ ಪದ್ಧತಿಯಲ್ಲಿ ಈ ಶ್ಲೋಕಗಳು ಬರೆಯಲ್ಪಟ್ಟಿವೆ. ಆದ್ದರಿಂದ ಅವುಗಳಲ್ಲಿ ಆತ್ಮೀಯತೆ ಹಾಗೂ ಮುಕ್ತತೆ ಇಳಿದುಬಂದಿವೆ. ಯಾರನ್ನಾದರೂ ವಿಶ್ವಾಸದಲ್ಲಿ ತೆಗೆದುಕೊಳ್ಳಬೇಕು, ಅವರಿಗೆ ಹೇಳಬೇಕು ಮತ್ತು ಹಾಗೆ ಹೇಳುತ್ತ ಹೇಳುತ್ತ ಆತ್ಮಪರೀಕ್ಷಣ ಮಾಡುತ್ತ ನಾಲ್ಕು ಹಿತನುಡಿಗಳನ್ನು ತಿಳಿಸಬೇಕೆಂಬ ರೀತಿಯಲ್ಲಿ ಈ ಮಾತುಗಳು ಹೇಳಲ್ಪಟ್ಟಿವೆ. ಇದರಲ್ಲಿ ಮುಖ್ಯವಾಗಿ ಭಕ್ತಿ ಮಾರ್ಗದ ಉಪದೇಶವಿರುವುದು. ಪ್ರಾರಂಭದ ಗಣೇಶ ಶಾರದಾ ವಂದನೆಯ ಬಳಿಕ ಕೂಡಲೇ ಬರುವ "ಸಜ್ಜನರ ಮನ ಭಕ್ತಿ ಪಥದಲಿ ಸಾಗಲಿ ಸಾಗಲಿ । ಸ್ವಭಾವ ದಂತೆ ಶ್ರೀಹರಿ ದೊರೆಯಲಿ ॥" ಈ ಉದ್ಗಾರದಿಂದ ಸ್ಪಷ್ಟವಿದೆ.

ಆಧ್ಯಾತ್ಮದಲ್ಲಿಯ ಗಹನ ಸಿದ್ಧಾಂತವನ್ನೂ ಇಲ್ಲಿ ಹೇಳಿಲ್ಲ ಹಾಗೂ ಬ್ರಹ್ಮ ಮಾಯೆಯ ವಿವೇಚನೆಯನ್ನೂ ಮಾಡಿಲ್ಲ. ತತ್ತ್ವಜ್ಞಾನದಲ್ಲಿಯ ಸಿದ್ಧಾಂತಗಳು ಇಲ್ಲಿ ಉದ್ಗಾರಗಳ ಹಿಂದೆ ಹಿನ್ನೆಲೆಯಂತೆ ಬಂದಿವೆ. ಆ ತತ್ತ್ವಜ್ಞಾನವನ್ನು ಪ್ರತ್ಯಕ್ಷ ಜೀವನ ದಲ್ಲಿ ಅಳವಡಿಸಿಕೊಳ್ಳುವಂತಿದ್ದರೆ, ಅದಕ್ಕಾಗಿ ದೈನಂದಿನ ಆಚರಣೆಯು ಹೇಗಿರಬೇಕು ಮತ್ತು ತಮ್ಮ ಮನಸ್ಸಿಗಾಗಿ ಎಂಥ ಸಂಸ್ಕಾರವನ್ನು ಪಡೆದುಕೊಳ್ಳಬೇಕು, ಇವುಗಳ ನಿರ್ದೇಶನವನ್ನು ಮಾಡಲಾಗಿದೆ. ಆದ್ದರಿಂದ ವಿವೇಕ, ವೈರಾಗ್ಯ, ಸದಾಚಾರ, ಉಪಾಸನೆ, ಇಂದ್ರಿಯ ಸಂಯಮ ಇಂಥ ವಿಷಯಗಳು ಈ ಶ್ಲೋಕಗಳಲ್ಲಿ ಬಂದಿವೆ. "ಒಬ್ಬರ ಸಾವಿಗಾಗಿ ಇಷ್ಟೆಲ್ಲ ಶೋಕಿಸುವವನು । ಅಕಸ್ಮಾತ್ ಅವನೂ ಮುಂದೆ ಸಾಯುವವನು ॥" ಇಂಥ ಸಹಜವಾಗಿ ಹಿಡಿಯುವ ಶಬ್ದಗಳಲ್ಲಿ ಮಾನವ ಜೀವನದ ವಿನಾಶಕ ಸ್ವರೂಪವನ್ನು ವರ್ಣಿಸಲಾಗಿದೆ. ಆದರೆ "ಜಗತ್ತಿನಲ್ಲಿ ಸರ್ವಸುಖಿ ಯಾರು!" ಇಂಥ ಪ್ರಶ್ನೆಮಾಡಿ "ಮನವೇ, ನೀನು ಪೂರ್ವಸಂಚಯಿಸಿದುದು । ಅದರಂತೆ

ಭೋಗ ಪ್ರಾಪ್ತವಾದುದು ||" ಇಂಥ ಸರಳವಾದ ಉತ್ತರವನ್ನು ಕೊಡಲಾಗಿದೆ. "ಬಿಡಬೇಕು ಜನರ ನಿಂದ್ಯವನು | ಸರ್ವಭಾವದಿ ಮಾಡಬೇಕು ಜನ ವಂದ್ಯವನು||" ವ್ಯವಹಾರದಲ್ಲಿ ಉಪಯುಕ್ತವಾಗುವ ಇಂಥ ಉಪದೇಶಗಳಿವೆ. "ಸದಾಸರ್ವದಾ ದೇವ ಹತ್ತಿರದಲಿ | ಸ್ವಲ್ಪ ತಾಳಿ ನೋಡು ಕರುಣೆಯಲಿ ||" ಇಂಥ ಶಬ್ದಗಳಿಂದ ದುರ್ಬಲ ಮನಸ್ಸಿಗೆ ಆಧಾರ ಪೂರೈಸುವಂತಿದೆ.

ಕರುಣಾಸ್ತೋತ್ರಗಳಂತೆ ಈ ಮನೋಬೋಧೆಗಳ ರಚನೆ ಕೂಡ ಮನಸ್ಸಿಗೆ ಮುಟ್ಟುವಂತೆ ಪರಿಣಾಮಕಾರಿಯಾಗಿದೆ. ರಚನೆಯ ಹಿಂದಿನ ಹಿನ್ನೆಲೆ ಸ್ವಲ್ಪ ಭಿನ್ನ ವಾಗಿದೆ. ಆದ್ದರಿಂದ ಆಶಯದಲ್ಲಿಯೂ ಒಂದಿಷ್ಟು ಅಂತರ ಉಳಿದಿದೆ. ಒಂದರ ರಚನೆಯು ತಮ್ಮ ಪಾರಮಾರ್ಥಿಕ ಪ್ರವಾಸದಲ್ಲಿ ತೊಂದರೆಗಳ ಅನುಭವಗಳು ಬರತೊಡಗಿದಾಗ ಪರಮೇಶ್ವರನ ಕೋರಿಕೆಯಲ್ಲಿ ಆಗಿದೆ. ಆದರೆ ಎರಡನೆಯ ರಚನೆ ಯನ್ನು ಜನಸಾಮಾನ್ಯರಿಗೆ ಉಪದೇಶ ಮಾಡುವ ವ್ರತವನ್ನು ಸ್ವೀಕರಿಸಿದ ನಂತರ, ಅವರ ಮನಸ್ಸಿಗೆ ಆಸರೆಯನ್ನು ಪೂರೈಸುವ ಸಲುವಾಗಿ ಮಾಡಲಾಗಿದೆ. ಕರುಣಾ ಸ್ತೋತ್ರಗಳಲ್ಲಿ ಸ್ವಂತದ ಮರ್ಯಾದೆಯ ಉತ್ಕಟವಾದ ಅರಿವಿದೆ. ಮನೋಬೋಧೆ ಶ್ಲೋಕಗಳ ಹಿಂದೆ ಒಂದು ಆಶ್ವಾಸನೆಯಿದೆ. ಆತ್ಮಪ್ರತ್ಯಯದ ಪ್ರಜ್ಞೆಯಿದೆ. ಈ ಮನೋಬೋಧೆಗಳು ಐಹಿಕ ಹಾಗೂ ಪಾರಲೌಕಿಕ ಈ ಎರಡೂ ಸೀಮಾರೇಖೆಯ ಮೇಲೆ ನಿಲ್ಲುವಂತಿವೆ. ಸ್ವಂತ ಮನಸ್ಸಿಗೆ ತಿಳಿಹೇಳುತ್ತ, ಇತರರ ಮನಸ್ಸಿನಲ್ಲಿ ಕೂಡ ದಿಸೆ ತೋರುವ ಕೆಲಸವನ್ನು ಸಮರ್ಥರು ಅರಿವಿಲ್ಲದೆ ಸ್ವೀಕರಿಸಿದ್ದಾರೆ. ಸಾಧಕ ಹಾಗೂ ಉಪದೇಶಕರ ಈ ಎರಡೂ ಪಾತ್ರಗಳನ್ನು, ಅವರಲ್ಲಿ ಒಂದರಲ್ಲೊಂದು ಸೇರಿಸಿದ್ದು ಭಾಸವಾಗುತ್ತದೆ. ಇಂಥ ಎರಡು ಬಗೆಯ ಹಿನ್ನೆಲೆಯಲ್ಲಿ ಬರೆದ ಈ ಶ್ಲೋಕಗಳ ಉಪಯೋಗವು, ಸಮರ್ಥರ ಶಿಷ್ಯರು ತಮ್ಮ ತಮ್ಮ ಸ್ಥಳಗಳಲ್ಲಿ ಕೆಲಸ ಮಾಡುತ್ತಿರುವಾಗ ವಿಶೇಷವಾಗಿ ಆಗಿದೆ. ಶಿಷ್ಯರು ತಮ್ಮ ಉಪಜೀವನವನ್ನು ಭಿಕ್ಷೆ ಯಿಂದ ನಡೆಯಿಸಬೇಕೆಂದು ಸಮರ್ಥರ ಆದೇಶವಿತ್ತು. ಹಾಗೆ ಭಿಕ್ಷೆ ಬೇಡುತ್ತಿರುವಾಗ ಯಾರ ಮನೆಯ ಮುಂದಾದರೂ ನಿಂತರೆ ಒಂದು ಮನೋಬೋಧೆ ಶ್ಲೋಕವನ್ನು ಆ ಶಿಷ್ಯರು ಉಚ್ಚ ಧ್ವನಿಯಲ್ಲಿ ಹೇಳುತ್ತಿದ್ದರು. ಅನಂತರ "ಜಯ ಜಯ ರಘುವೀರ ಸಮರ್ಥ" ಎಂಬ ಘೋಷಣೆ ಮಾಡುತ್ತಿದ್ದರು. ಅದರ ಒಂದು ವಿಶೇಷ ಪರಿಣಾಮ ಸಮಾಜದ ಮೇಲೆ ಉಂಟಾಗುತ್ತಿತ್ತು.

ಚಾಫಳದ ರಾಮಮಂದಿರದ ಸ್ಥಾಪನೆಯಿಂದ ಸಮರ್ಥರಿಗೆ ತಮ್ಮ ಜೀವಿತ ಕಾರ್ಯದ ಎಳೆ ದೊರಕಿತು. ಅಲ್ಲಿ ಅವರ ಕಾರ್ಯಕ್ಕೆ ಗತಿ ಒದಗುತ್ತ ಹೋಯಿತು. ಅನಂತರದ ಅವರ ಇಡೀ ಬದುಕು ಆ ಕಾರ್ಯವಿಸ್ತರಣೆಯಲ್ಲಿ ಕಳೆಯಿತು. ಮಠ ಸ್ಥಾಪನೆ ಮತ್ತು ಶಿಷ್ಯಸಂಗ್ರಹ ಇವು ಅವರ ಬಾಹ್ಯರೂಪಗಳಾಗಿದ್ದವು. ವಿಶಿಷ್ಟ ವಿಚಾರಗಳ ಉಪದೇಶಗಳು ಅವರ ಅಂತರಂಗಗಳಾಗಿದ್ದವು. ಈ ಮಾಧ್ಯಮಗಳಿಂದ ಅವರು ತಮ್ಮ ಲೋಕ ಶಿಕ್ಷಣದ ಕಾರ್ಯವನ್ನು ಕೊನೆಯವರೆಗೆ ಮಾಡುತ್ತಲಿದ್ದರು. ಬೇರೆ ಬೇರೆ ಗ್ರಾಮಗಳಲ್ಲಿದ್ದ ಶಿಷ್ಯರು ನಡುನಡುವೆ ಅವರ ಭೇಟಿಗಾಗಿ ಬರುತ್ತಲಿ

ದ್ದರು. ಅವರ ಮಾರ್ಗದರ್ಶನವನ್ನು ಪಡೆಯುತ್ತಲಿದ್ದರು. ಹೊಸ ಶಿಷ್ಯರನ್ನು ದೊರಕಿಸುವ ಪ್ರಯತ್ನವು ಯಾವಾಗಲೂ ನಡೆದಿತ್ತು. ಅದು ನಡೆಯದ ಹೊರತು ಅವರ ಸಂಪ್ರದಾಯದ ಪ್ರಸಾರವು ಸಾಗುವಂತಿರಲಿಲ್ಲ. ಸ್ವಂತದ ವೈಯಕ್ತಿಕ ಸಂಸಾರವನ್ನು ಅಳಿಸಿ ಹಾಕಿ ಭಿಕ್ಷಾವೃತ್ತಿಯಿಂದ ಸಮಾಜದಲ್ಲಿ ಸತತವಾಗಿ ಸಂಚರಿಸುವ ಬುದ್ಧಿವಂತ ಶಿಷ್ಯರು ಸಮರ್ಥರಿಗೆ ಬೇಕಾಗಿದ್ದರು. ಇಂಥವರ ಸಂಖ್ಯೆ ಬೆರಳ ಮೇಲೆ ಎಣಿಸುವಂತಿರುವುದು ಸಹಜವಾಗಿ ಗಮನದಲ್ಲಿಡುವಂತಿದೆ. ಬಹಳ ಕಡಿಮೆ ಜನ ಶಿಷ್ಯರು ಸಮರ್ಥರಿಗೆ ದೊರೆತರು. ಅವರ ಸ್ಫೂರ್ತಿಯನ್ನು ಸಂಪೂರ್ಣವಾಗಿ ಆತ್ಮಸಾತ್ ಮಾಡಿಕೊಳ್ಳುವಂಥ ಶಿಷ್ಯರು, ಅಪೇಕ್ಷೆ ಪೂರೈಸುವವರು ಹಾಗೂ ಕರ್ತೃತ್ವಶಾಲಿಗಳು ಆಗಿರುತ್ತಿದ್ದರೋ ಇಲ್ಲವೋ ಎಂಬುದರ ಬಗ್ಗೆ ಮಾತ್ರ ಮನಸ್ಸು ಸಂದೇಹಪಡುತ್ತದೆ.

ಸಮರ್ಥರ ದರ್ಶನಕ್ಕಾಗಿ ಬರುವ ಸಮಾಜದಲ್ಲಿ ಇತರ ವ್ಯಕ್ತಿಗಳ ಗದ್ದಲವೂ ನಿತ್ಯ ಇರುತ್ತಿತ್ತು. ಸ್ವಭಾವತಃ ಸಮರ್ಥರಿಗೆ ಏಕಾಂತದಲ್ಲಿ ಅಭಿರುಚಿಯಿತ್ತು. ಆದರೆ ಜನರ ಸಂಪರ್ಕವನ್ನು ಸಾಧಿಸಲು ಆತಂಕವನ್ನು ಅವರು ಎಂದೂ ಬರಗೊಡಲಿಲ್ಲ. ಅವರ ಆಯುಷ್ಯದಲ್ಲಿ ಅನಂತರದ ಮೂವತ್ತು ಮೂವತ್ತೆರಡು ವರ್ಷಗಳು ಇದೇ ರೀತಿ ಕಳೆದಿರುತ್ತವೆ. ಈ ಅವಧಿಯಲ್ಲಿ ಅನೇಕ ಕಾರಣಗಳಿಗಾಗಿ ಅವರು ಸಂಚಾರವನ್ನು ಮಾಡಬೇಕಾಗುತ್ತಿತ್ತು. ಆಂಧ್ರ, ತೆಲಂಗಾಣ, ಕರ್ನಾಟಕ ಮುಂತಾದೆಡೆ ಅವರು ಹೋಗಿದ್ದರು. ಆದರೆ ಅವರ ಈ ಸಂಚಾರದ ವಿವರ ಬಹಳ ಕಡಿಮೆ ದೊರೆತಿದೆ. ಕೆಲಕೆಲವು ವರ್ಷಗಳಲ್ಲಿ ಒಂದು ಕೂಡ ಉಲ್ಲೇಖ ದೊರೆಯುವುದಿಲ್ಲ. ಆದ್ದರಿಂದ ಅವರ ಉತ್ತರಾಯುಷ್ಯದಲ್ಲಿಯ ಈ ಪರ್ವವನ್ನು ಸುಸಂಗತ ಹಾಗೂ ಸುವ್ಯವಸ್ಥಿತವಾಗಿ ಮಂಡಿಸುವುದು ಇಲ್ಲವೆ ಅವುಗಳಲ್ಲಿಯ ಘಟನೆಗಳ ಕಾರ್ಯಕ್ರಮದ ಉಲ್ಲೇಖ ಪಡೆಯುವುದು ಸಾಧ್ಯವಾಗುವುದಿಲ್ಲ. ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ವ್ಯಕ್ತಿಗಳ ಜತೆ ಅವರು ಭೇಟಿಯಾದ ಉಲ್ಲೇಖಗಳು ಅಲ್ಲಲ್ಲಿ ದೊರೆಯುತ್ತವೆ. ಆದರೆ ಅವುಗಳಲ್ಲಿ ವಾಸ್ತವತೆಯು ಅದ್ಭುತತೆಯ ದಟ್ಟವಾದ ಪರದೆಯ ಮರೆಯಲ್ಲಿ ಅಡಗಿದಂತಾಗಿದೆ. ಕೆಲವು ಸಮಯ ಅಚೆಯದೇನೂ ಕಾಣುವುದಿಲ್ಲ. ದುರ್ದೈವದಿಂದ ಈ ಉಲ್ಲೇಖಗಳು ತೀರ ಕಡಿಮೆಯಿವೆ. ಸ್ಥಳ, ಕಾಲಗಳ ಪೂರ್ಣ ವಿವರಗಳು ಬಹಳ ವಿರಳ ದೊರೆಯುತ್ತವೆ. ಸಮರ್ಥರನ್ನು ಭೇಟಿಯಾದ ವ್ಯಕ್ತಿಗಳಲ್ಲಿ ಪರಮಾರ್ಥಿಸಂತರು, ಸತ್ಪುರುಷರು ಇದ್ದಾರೆ. ಹಾಗೆಯೇ ರಾಜಕಾರಣದಲ್ಲಿ ಓಡಾಡುವ ವ್ಯಕ್ತಿಗಳೂ ಇದ್ದಾರೆ. ತಮ ತಮಗೆ ಯೋಗ್ಯವಾದ ವಿಷಯಗಳನ್ನು ಕುರಿತು ಅವರವರ ಸಂವಾದ ನಡೆದಿರುತ್ತಿತ್ತು. ಅವರವರ ಕಾರ್ಯಗಳಿಗೆ ಅನುರೂಪವಾದಂಥ ವಿಚಾರಗಳನ್ನು ಸಮರ್ಥರು ಉಪದೇಶಿಸುತ್ತಿದ್ದರು.

ಈ ಲೋಕಸಂವಾದಕ್ಕಾಗಿ ವಾಣಿ ಹಾಗೂ ಲೇಖನಿ ಈ ಎರಡು ಆಯುಧಗಳ ಉಪಯೋಗವನ್ನು ಸಮರ್ಥರು ಮುಕ್ತವಾಗಿ ಮಾಡಿದ್ದಾರೆ. ಕೀರ್ತನ ಪ್ರವಚನ ಮತ್ತು ಶಿಷ್ಯರಿಗೆ ಮಾಡಿದ ಉಪದೇಶ ಇವುಗಳ ಸಾಧನವು ವಾಣಿಯೇ ಆಗಿದೆ.

ಲೇಖನಿಯ ಉಪಯೋಗವು ಗ್ರಂಥರಚನೆಗಾಗಿ ಆಗಿದೆ. ವಾಣಿಯ ಮುಖಾಂತರ ಉಚ್ಚರಿಸಲ್ಪಡುವ ಶಬ್ದಗಳು ಆಯಾ ಕ್ಷಣಗಳಿಗಾಗಿ ಮಾತ್ರ ಇರುತ್ತವೆ. ಆ ಕ್ಷಣಗಳು ಕಳೆದರೆ ಅವು ಕೈಗೆ ಹತ್ತುವುದಿಲ್ಲ. ಲೇಖನಿಯ ಮುಖಾಂತರ ಅಕ್ಷರಬದ್ಧವಾದ ಶಬ್ದಗಳು ಉಳಿದು ಬಿಡುತ್ತವೆ. ಸ್ಥಳ ಮತ್ತು ಕಾಲ ಈ ಎರಡರ ಸೀಮೆಯನ್ನು ದಾಟಿ ಅವು ಆಚೆಗೆ ಮುಟ್ಟುತ್ತವೆ. ಸಮರ್ಥರು ನಿತ್ಯ ಮಾಡಿದ ಸಂವಾದವು ನಮಗೆ ಮುಟ್ಟುವುದು ಸಾಧ್ಯವಿರಲಿಲ್ಲ. ಆದರೆ ಅವರು ಬರೆದ ಗ್ರಂಥಗಳು ನಮ್ಮವರೆಗೆ ಬಂದಿವೆ. ತಮ್ಮ ನಿತ್ಯ ಸಂವಾದದಲ್ಲಿ ಅವರು ಏನು ಹೇಳಿದ್ದಾರೆ, ಅದರ ಅನುಮಾನ ವನ್ನು ಅವರ ಗ್ರಂಥಗಳಿಂದ ಕಟ್ಟಲು ಬರುತ್ತದೆ. ಆ ದೃಷ್ಟಿಯಿಂದಲೇ ಅವರ ಗ್ರಂಥಗಳಿಗೆ ಮಹತ್ತ್ವವಿದೆ. ಅವರು ಮಾಡಿದ ಕಾರ್ಯಗಳು ಮುಖ್ಯವಾಗಿ ವೈಚಾರಿಕ ಸಿಂಹಾವಲೋಕನದ ಕ್ಷೇತ್ರದಲ್ಲಿವೆ. ಆದಕ್ಕಾಗಿ ಅವರ ವಿಚಾರಗಳನ್ನು ಹಾಗೂ ಅವುಗಳಲ್ಲಿಯ ವಿಶೇಷತೆಗಳನ್ನು ಅರಿತುಕೊಳ್ಳುವುದಕ್ಕೆ ಅವರ ಸಾಹಿತ್ಯದತ್ತ ಒಂದು ದೃಷ್ಟಿಕ್ಷೇಪ ಹಾಕುವುದು ಅವಶ್ಯಕವಾಗಿದೆ.

# ಗ್ರಂಥರಾಜ ದಾಸಬೋಧ

ಸಮರ್ಥರು ಅಪಾರ ಲೇಖನಗಳನ್ನು ಬರೆದಿದ್ದಾರೆ. ಕೇವಲ ವಿವೇಚನಾಪರ ಇಲ್ಲವೆ ತತ್ತ್ವಜ್ಞಾನಪರ ಭಾಗಗಳನ್ನು ಬಿಟ್ಟರೆ ಸಮರ್ಥರ ಒಳ್ಳೆಯ ವಿಚಾರಗಳ ಮೂಲವು ಅವರು ಪ್ರತ್ಯಕ್ಷ ಪಡೆದ ಅನುಭವದಲ್ಲಿಯೇ ಇದೆ. ಆದ್ದರಿಂದ ಆ ವಿಚಾರಗಳಿಗೆ ವಾಸ್ತವತೆಯ ಪ್ರತ್ಯಕ್ಷ ಅಡಿಪಾಯ ಲಭ್ಯವಾಗಿದೆ. ಅವರ ಒಟ್ಟಿನ ಸಾಹಿತ್ಯದಲ್ಲಿ ಇಂಥ ರಚನೆಗಳು ಕಡಿಮೆ ಇರುವುದೇನೋ ಸರಿ. ಆದರೆ ಉಪೇಕ್ಷಿಸುವಷ್ಟು ಕಡಿಮೆ ಯಿಲ್ಲ. ಆ ಸ್ವಲ್ಪ ರಚನೆಗಳಲ್ಲಿ ಅವರ ವಿಚಾರಗಳು ಮತ್ತು ವ್ಯಕ್ತಿತ್ವದ ವೈಶಿಷ್ಟ್ಯಗಳು ಸೇರಿಕೊಂಡಿವೆ. ಸಮರ್ಥರ ಬರವಣಿಗೆಯು ಹೆಚ್ಚುಕಡಿಮೆ ಅವರ ಆಯುಷ್ಯದ ಕೊನೆಯವರೆಗೂ ಸಾಗಿತ್ತು. ತೀರ್ಥಯಾತ್ರೆಯ ಕಾಲದಲ್ಲಿ ಆ ಲೇಖನಿಯ ಗತಿ ಮಂದವಾಗಿರುವುದು ಸಾಧ್ಯವಿದೆ.

ಮಹಾರಾಷ್ಟ್ರದಲ್ಲಿಯ ಇತರ ಸರ್ವಸಂತರ ಹಾಗೆ ಸಮರ್ಥರ ಸಾಹಿತ್ಯದಲ್ಲಿ ಹೆಚ್ಚಿನ ಭಾಗದಲ್ಲಿ ಪರಮಾರ್ಥ ವಿಷಯಗಳೇ ತುಂಬಿಕೊಂಡಿವೆ. ಪದಗಳು, ಸ್ತೋತ್ರಗಳು, ಆರತಿಗಳು ಹಾಗೂ ಅಭಂಗಗಳು ಅವರ ಬಹಳಷ್ಟು ಬಿಡಿ ರಚನೆಗಳಾಗಿವೆ. ಅವರ ಹೆಸರಿನಲ್ಲಿ ಸುಮಾರು ಏಳುನೂರು ಬಿಡಿ ಶ್ಲೋಕಗಳು ಹಾಗೂ ಎರಡುವರೆ ಸಾವಿರ ಬಿಡಿ ಓವಿಗಳಿರುತ್ತವೆ. ವಿವಿಧ ಪ್ರಕಾರಗಳ ಕರುಣಾಸ್ತೋತ್ರಗಳ ಶ್ಲೋಕಗಳ ಸಂಖ್ಯೆ ಹದಿನೈದು ನೂರರವರೆಗಿದೆ. ಮನೋಬೋಧೆ ಶ್ಲೋಕಗಳು ಎರಡು ನೂರು ಐದಿವೆ. ಅವುಗಳ ಸ್ವತಂತ್ರ ಗುಂಪು ಇದ್ದರೂ ಕೂಡ ಈ ರಚನೆಗಳ ಬಿಡಿ ಎಂದೇ ಹೇಳಬೇಕು. ಸುಂದರ ಕಾಂಡ ಮತ್ತು ಯುದ್ಧಕಾಂಡ ಇವು ರಾಮಾಯಣದ ಮೇಲಿನ ರಚನೆಗಳ ಕಥಾಪರವಾಗಿವೆ. ಕಥೆಯ ಬಗೆಗಿನ ರಚನೆಗಳು ಇವಿಷ್ಟೆ. ಇತರ ಎಲ್ಲ ರಚನೆಗಳು ತತ್ತ್ವಜ್ಞಾನ ಪರ ಹಾಗೂ ವಿಚಾರಪ್ರಧಾನವಾಗಿವೆ. ಷಟ್‌ರಿಪು, ಪಂಚೀಕರಣ, ಚತುರ್ಥಮಾನ, ಪಂಚಮಾನ ಮತ್ತು ಮಾನಪಂಚಕ ಈ ರಚನೆಗಳು ಅನುಷ್ಟುಭ ಛಂದಸ್ಸಿನಲ್ಲಿವೆ. ಪೂರ್ವಾರಂಭ, ಪ್ರಾಚೀನ ಪುರುಷ, ಅಂತರ್ಭಾವ, ಆತ್ಮಾರಾಮ, ಪಂಚಸಮಾಸಿ, ಸಪ್ತಸಮಾಸಿ, ಸಗುಣ ಧ್ಯಾನ, ನಿರ್ಗುಣ ಧ್ಯಾನ ಮತ್ತು ಮಾನಸ ಪೂಜಾ ಈ ಒಂಬತ್ತು ಲಘು ಕಾವ್ಯಗಳು ಓವಿಬದ್ಧವಾಗಿವೆ. ಆನಂದವನಭುವನ, ಜನಸ್ವಭಾವಗೋಸಾವಿ, ಕ್ಷಾತ್ರಧರ್ಮ, ರಾಜಧರ್ಮ, ಸೇವಕ ಧರ್ಮ, ಬಾಗ ಪ್ರಕರಣ, ಕಾರಖಾನೆ ಪ್ರಕರಣ ಇಂಥ ಅನೇಕ ವಿಷಯಗಳ ಮೇಲೆ ಪ್ರಾಸಂಗಿಕ ಪ್ರಕರಣಗಳನ್ನು ಸಮರ್ಥರು ಬರೆದಿದ್ದಾರೆ.ಅನಂತರದ ಮಹತ್ತ್ವದ ವರ್ಗವು ಹದಿನಾಲ್ಕು ಓವಿಶತಕದ್ದು. ಇವುಗಳನ್ನು ಓವಿಶತಕಗಳೆಂದು ಕರೆದಿದ್ದರೂ ಕೂಡ ಈ ರಚನೆಗಳು ಅಭಂಗದಲ್ಲಿವೆ. ಈ ಅಭಂಗಗಳು ಓವಿಗೆ ತೀರ ಹತ್ತಿರ

ಬರುತ್ತವೆ ಅಷ್ಟೆ. ಸಂತಸಂಗ, ಬ್ರಹ್ಮಮಾಯಾ, ಸಗುಣ ನಿರ್ಗುಣ, ನವವಿಧ ಭಕ್ತಿ, ಪ್ರಾರಬ್ಧ ಪ್ರಯತ್ನ–ಇಂಥ ವಿಷಯಗಳು ಈ ಓವಿ ಶತಕದಲ್ಲಿವೆ. ಇಲ್ಲಿಯ ಎಲ್ಲ ಬಹಳಷ್ಟು ವಿಷಯಗಳು, ಅವರ ಇತರ ಆಧ್ಯಾತ್ಮಪರ ಪ್ರಕರಣಗಳಲ್ಲಿ ಮತ್ತು ಮುಂದೆ ದಾಸಬೋಧೆಯಲ್ಲಿ ಇರುತ್ತವೆ. ಆ ಮೇಲಿನ ಮಹತ್ತ್ವದ ರಚನೆಗಳು ಎರಡು. 'ಇಪ್ಪತ್ತೊಂದು ಸಮಾಸಿ' ಇಲ್ಲವೆ ಹಳೆಯ ದಾಸಬೋಧೆ ಹಾಗೂ ಗ್ರಂಥರಾಜ ದಾಸಬೋಧೆ–ಇವೇ ಸಮರ್ಥರ ಒಟ್ಟಿನ ಸಾಹಿತ್ಯ ಸಂಪದವು.

ಸಮರ್ಥರು ಯಾವ ರಚನೆಯನ್ನು ಯಾವಾಗ ಮಾಡಿದರು ಈ ಬಗೆಗೆ ನಿರ್ವಿವಾದವಾದ ಯಾವ ಪ್ರಮಾಣಗಳು ದೊರೆಯುವುದಿಲ್ಲ. ದಾಸಬೋಧೆಯಲ್ಲಿ ಒಂದು ಸ್ಥಳದಲ್ಲಿ ಅವರು ಕಾಲದ ಉಲ್ಲೇಖವನ್ನು ಮಾಡಿದ್ದಾರೆ (ದಾಸಬೋಧ 6. 4. 7)– ಅದು ಶಕೆ 1581 ಅಂದರೆ ಸನ್ 1659 ಆಗುತ್ತದೆ. ಇದರ ಮೇಲಿಂದ ಆ ಸಮಾಸವು ಆಗ ಬರೆಯಲ್ಪಟ್ಟಿತೆಂದು ಹೇಳಲುಬರುತ್ತದೆ. ಇತರ ರಚನೆಗಳನ್ನು ಅವರು ಯಾವಾಗ ಮಾಡಿದರೆಂದು ತಿಳಿಯಲು ಯಾವ ಸಾಧನಗಳೂ ಇಲ್ಲ. ಬಹಳಷ್ಟು ಕರುಣಾಸ್ತೋತ್ರಗಳು ಮನೆಬಿಟ್ಟು ಬಂದ ಕೂಡಲೇ ಬರೆದವುಗಳಾಗಿರಬೇಕು. ಹಳೆಯ ದಾಸಬೋಧೆಯು ಟಾಕಳಿಯ ವಾಸ್ತವ್ಯವು ಮುಗಿಯುತ್ತ ಬಂದ ಕಾಲದಲ್ಲಿ ಬರೆಯಲ್ಪಟ್ಟಿರಬೇಕು. ಮನೋಬೋಧೆಯ ಶ್ಲೋಕಗಳು ಶಿಷ್ಯ ಸಂಪ್ರದಾಯವನ್ನು ಸೇರಿಸಲು ಆರಂಭಿಸಿದ ಕಾಲದಲ್ಲಿ ಬರೆಯಲ್ಪಟ್ಟಿರಬೇಕು ಮತ್ತು ದಾಸಬೋಧೆಯ ಉತ್ತರಾರ್ಧವು ಆಯುಷ್ಯದ ಉತ್ತರಕಾಲದಲ್ಲಿ, ಇಲ್ಲವೆ ಅದರ ಮೊದಲಿನ ಎಂಟು ದಶಕಗಳು ಆ ಮೊದಲಿನ ಕಾಲದಲ್ಲಿ ಬರೆಯಲ್ಪಟ್ಟಿರಬೇಕು. ಹೀಗೆ ಒಂದು ಸ್ಥೂಲ ತರ್ಕವನ್ನು ನಾವು ಮಾಡಲು ಸಾಧ್ಯವಿದೆ. ಓವಿ ಶತಕಗಳ ರಚನೆಯಲ್ಲಿ ಕೆಲವು ಸ್ಥಳಗಳಲ್ಲಿ ದಾಮಯಮಕವನ್ನು ಸಾಧಿಸಲಾಗಿದೆ. ಈ ಪ್ರಕರಣಗಳ ರಚನೆಯಲ್ಲಿ ವೈಶಿಷ್ಟ್ಯಗಳ ಮೇಲೆ ಒತ್ತುಕೊಡುವ ಮತ್ತು ಅದರಿಂದ ಒಂದಿಷ್ಟು ಕೃತ್ರಿಮದತ್ತ ಒಲಿದ ಲೇಖನಗಳು ಪೂರ್ವ ವಯಸ್ಸಿನಲ್ಲಿ ರಚಿತವಾದವುಗಳಾಗಿರಬೇಕು. ದಾಸಬೋಧೆಯಲ್ಲಿ ಬಹಳಷ್ಟು ಆಧ್ಯಾತ್ಮಪರ ವಿಷಯಗಳು ಬಂದುಹೋದ ಬಳಿಕ ಅವೇ ವಿಷಯಗಳಲ್ಲಿ ಮತ್ತೆ ಆತ್ಮಾರಾಮ ಇಲ್ಲವೆ ಪಂಚಸಮಾಸಿ ಈ ರೀತಿಯ ಸ್ವತಂತ್ರ ಪ್ರಕರಣಗಳನ್ನು ಬರೆಯಬೇಕೆಂದು ಕಾಣುವ ಸಂಭವ ಕಡಿಮೆಯಿದೆ. ಆಗ ಅಂಥ ಪ್ರಕರಣಾತ್ಮಕ ರಚನೆಗಳು ದಾಸಬೋಧೆಯ ಮೊದಲೇ ಇರಬೇಕು. ಛಂದಸ್ಸಿನ ಅಪಪ್ರಯೋಗ, ರಚನೆಗಳಲ್ಲಿ ಶಿಥಿಲತೆ ಮತ್ತು ಶಬ್ದ ಚಮತ್ಕೃತಿಯ ಹವ್ಯಾಸ ಇಂಥ ದೋಷಗಳು ಆ ರಚನೆಯಲ್ಲಿ ದೊರೆಯುತ್ತವೆ. ಅವು ಆರಂಭದ ಕಾಲದಲ್ಲಿರಬೇಕು. ಸ್ಪಷ್ಟವಾದ ಆಧ್ಯಾತ್ಮಕ್ಕಾಗಿಯೇ ಬರೆದ, ವೈರಾಗ್ಯದ ಮೇಲೆ ಒತ್ತುಕೊಡುವ ಮತ್ತು, ಐಹಿಕದ ಒಂದಿಷ್ಟು ಸ್ಪರ್ಶವಿರದ ಇಂಥ ಪ್ರಕರಣಗಳು ಪೂರ್ವ ವಯಸ್ಸಿನಲ್ಲಿಯೇ ಇರುವವು. ಆದರೆ ಐಹಿಕದಲ್ಲಿಯ ವಿಚಾರದ ಎಳೆ ಯಾವ ರಚನೆಗಳಲ್ಲಿ ದೊರೆಯುವುದೋ ಅವು ಉತ್ತರ ವಯಸ್ಸಿನವು ಎಂದು ಹೇಳಲಡ್ಡಿಯಿಲ್ಲ. ಕೊನೆಗೆ ರಚನಾ ಕಾಲದ ಸಲುವಾಗಿ ಈ ರೀತಿ ಕೇವಲ ಅನುಮಾನದ ಆಶ್ರಯವನ್ನು ಪಡೆಯು

ಬೇಕಾಗುತ್ತದೆ. ಆ ವಿಷಯವಾಗಿ ಯಾವ ಖಚಿತ ನಿರ್ಧಾರವನ್ನು ಮಾಡಲಾಗುವುದಿಲ್ಲ.

ಹಳೆಯ ಮರಾಠಿ ಸಾಹಿತ್ಯದಲ್ಲಿ ಹೆಚ್ಚಾಗಿ ಪ್ರಸಿದ್ಧಿ ಪಡೆದ ಆಧ್ಯಾತ್ಮಿಕ ಗ್ರಂಥಗಳಿವೆ. ಪ್ರಮುಖ ಗ್ರಂಥಗಳು ಗೀತಾ ಮತ್ತು ಭಾಗವತಗಳ ಮೇಲಿನ ಟೀಕಾ ಸ್ವರೂಪದವು. ಜ್ಞಾನದೇವರ 'ಭಾವಾರ್ಥ ದೀಪಿಕೆ', ಏಕನಾಥರ 'ಏಕಾದಶ ಸ್ಕಂದ ಟೀಕೆ' ಹಾಗೂ ವಾಮನ ಪಂಡಿತರ 'ಯಥಾರ್ಥ ದೀಪಿಕೆ' ಇವೇ ಆ ಮೂರು ಗ್ರಂಥಗಳು. ಸ್ವತಂತ್ರವಾಗಿ ಬರೆದಂಥ ಇವೇ ಮೂರು ಗ್ರಂಥಗಳೆಂದು ಹೇಳಲಾಗುತ್ತದೆ. ಮುಕುಂದರಾಜನ 'ವಿವೇಕಸಿಂಧು', ಜ್ಞಾನದೇವರ 'ಅನುಭವಾಮೃತ' ಮತ್ತು ಸಮರ್ಥರ 'ದಾಸಬೋಧೆ' ಈ ಮೂರರಲ್ಲಿ ವಿಸ್ತಾರದ ದೃಷ್ಟಿಯಲ್ಲಿ ದಾಸಬೋಧೆಯು ಎಲ್ಲಕ್ಕಿಂತ ದೊಡ್ಡದಾಗಿದೆ. ಮುಕುಂದರಾಜರ ವಿವೇಕಸಿಂಧು ಗ್ರಂಥವು ಉಪನಿಷತ್ತಿನಲ್ಲಿಯ ತತ್ತ್ವಜ್ಞಾನದ ಮೇಲೆ ಆಧಾರಿತವಾಗಿದೆ. ಅದು ಮರಾಠಿ ಭಾಷಿಕರ ವಿಶೇಷ ವಾಚನದಲ್ಲಿಲ್ಲ. ಅನುಭವಾಮೃತದ ಬಗೆಗೆ ಜನಮನದಲ್ಲಿ ಅಪಾರ ಆದರವಿದೆ. ಆದರೆ ಅದರಲ್ಲಿಯ ವಿವೇಚನೆಯು ಗಹನ, ಗೂಢವಾಗಿರುವದರಿಂದ ಅದು ಕೂಡ ವಿಶೇಷವಾಗಿ ಓದಲ್ಪಡುವುದಿಲ್ಲ.

ಸ್ವತಂತ್ರ ಗ್ರಂಥ ಹಾಗೂ ಅನೇಕರ ವಾಚನದಲ್ಲಿರುವ ದೃಷ್ಟಿಯಿಂದ ಸಮರ್ಥರ ದಾಸಬೋಧೆಯ ಸ್ಥಾನವು ವಿಶೇಷವಾಗಿದೆ. ಸಮರ್ಥ ಸಾಂಪ್ರದಾಯಿಕರಿಗಂತೂ ಈ ಗ್ರಂಥವೆಂದರೆ ಗೀತೆಯೇ ಸರಿ. ಜ್ಞಾನದೇವ ಎಂಬ ಹೆಸರನ್ನು ಉಚ್ಚರಿಸಿದ ಕೂಡಲೇ 'ಜ್ಞಾನೇಶ್ವರಿ' ನೆನಪಾಗುತ್ತದೆ. ಏಕನಾಥ ಎಂದ ಕೂಡಲೇ 'ನಾಥಭಾಗವತ'ವು ಕಣ್ಣೆದುರು ಬರುತ್ತದೆ. ತುಕಾರಾಮ ಶಬ್ದವನ್ನು ಹೇಳಿದ ಕೂಡಲೇ ಅವರ ಅಭಂಗ ವಾಣಿ ಹೃದಯದಲ್ಲಿ ಚಿಮ್ಮುತ್ತದೆ. ಅದೇ ರೀತಿ ಸಮರ್ಥರೆಂದ ಕೂಡಲೇ ಅವರ ದಾಸಬೋಧೆಯು ಸ್ಮರಣೆಯಾಗುತ್ತದೆ. ದಾಸಬೋಧೆಯೇ ಸಮರ್ಥರ ಸಾಹಿತ್ಯದಲ್ಲಿಯ ಮೂರ್ತಿ ಇದ್ದಂತೆ. ಸಮರ್ಥರು ಅಂತ್ಯ ಕಾಲಕ್ಕೆ ಈ ಗ್ರಂಥವನ್ನು ತಮ್ಮ ಶಿಷ್ಯರ ವಶಕ್ಕೆ ಒಪ್ಪಿಸಿದರೆಂದು ಉಲ್ಲೇಖವನ್ನು ಅನಂತರ ಮಾಡಿದ್ದಾರೆ. ಒಂದು ಆಖ್ಯಾಯಿಕೆಯು ಈ ರೀತಿ ಹೇಳಲ್ಪಡುತ್ತದೆ. ಶಿಷ್ಯರ ಪರೀಕ್ಷೆಯನ್ನು ಮಾಡಬೇಕಾದ ಸಮಯ ಸಮರ್ಥರು ದಾಸಬೋಧೆಯಲ್ಲಿಯ ಸಮಾಸದ ಪುಟಗಳನ್ನು ಅವರೆದುರು ಹರಡಿ ಇಡುತ್ತಿದ್ದರು. ಯಾವ ಶಿಷ್ಯನು ಆ ಹರಡಿದ ಪುಟಗಳನ್ನು ಸಹಜವಾಗಿ ಕ್ರಮಬದ್ಧ ರೀತಿಯಲ್ಲಿ ಹೊಂದಿಸುತ್ತಿದ್ದನೋ, ಅವನು ದಾಸಬೋಧೆಯ ನಿತ್ಯ ಅಧ್ಯಯನ ಮಾಡುವವನೆಂದು ಸಮರ್ಥರ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತಿದ್ದನು. ಆದರೆ ಇದು ಕೇವಲ ಆಖ್ಯಾಯಿಕೆ ಇರಬೇಕು. ಕಾರಣವೆಂದರೆ, ಸಮರ್ಥರ ದಾಸಬೋಧೆಯು ಅಂತಿಮ ಸ್ವರೂಪವನ್ನು ಅವರ ಆಯುಷ್ಯದ ಕೊನೆಯ ಕೆಲ ತಿಂಗಳುಗಳಲ್ಲಿ ಪಡೆದಿರಬೇಕೆಂದು ಅಭ್ಯಾಸಿಗಳ ಸಂದೇಹವಿದೆ.

ದಾಸಬೋಧೆಯು ಒಂದು ಸ್ವತಂತ್ರ ಗ್ರಂಥವಾಗಿದ್ದರೂ ಸತತವಾಗಿ ಬರೆಯಲ್ಪಟ್ಟ ಸುವ್ಯವಸ್ಥಿತ ರಚನೆಯ ಗ್ರಂಥವಲ್ಲ. ಯಾರೋ ಅಧಿಕಾರಿ ವಿದ್ವಾಂಸರು ಅನೇಕ

ವಿಷಯಗಳ ಮೇಲೆ ಬೇರೆ ಬೇರೆ ಲೇಖನಗಳನ್ನು ಬರೆಯುತ್ತಿರಬೇಕು, ಆ ದೃಷ್ಟಿಯಿಂದ ಹೇಗೋ ವಿಷಯಗಳನ್ನು ಒಟ್ಟುಗೂಡಿಸಿ ಯಾರಾದರೂ ಒಂದು ಗ್ರಂಥವನ್ನು ಸಿದ್ಧಪಡಿಸಬೇಕು, ಹೀಗೆ ದಾಸಬೋಧೆಯ ಸ್ಥಿತಿಯಾಗಿದೆ. ಒಬ್ಬೊಬ್ಬ ಲೇಖಕನ ಲೇಖನಗಳ ವೈಶಿಷ್ಟ್ಯಪೂರ್ಣ ರೀತಿಗಳು ಕೆಲವು ವೇಳೆ ಸಹಜವಾಗಿ ನಿಶ್ಚಿತವಾಗುತ್ತಿರುತ್ತವೆ. ಸಮಯ ಸಮಯಕ್ಕೆ ಸ್ಫುರಿತವಾದ ಅಭಂಗಗಳು ಇವು ತುಕಾರಾಮರ ಇಲ್ಲವೆ ನಾಮದೇವರ ವಾಣಿಯ ಸ್ವರೂಪಗಳಾಗಿವೆ. ಆಯಾ ಸಮಯ ಎದುರು ಬಂದ ವಿಷಯಗಳ ಮೇಲೆ ಶಿಷ್ಯರಿಗೆ ಉಪದೇಶ ಮಾಡುವ ನಿಮಿತ್ತವಾಗಿ ಕೆಲವು ಓವಿಗಳನ್ನು ಬರೆಯುವುದು ಮತ್ತು ಅವುಗಳ ಒಂದು ಸಮಾಸವನ್ನು ಸಿದ್ಧಪಡಿಸುವುದು ಹೀಗೆ ಸಮರ್ಥರ ಲೇಖನಗಳ ಪದ್ಧತಿಯು ಸಹಜವಾಗಿ ರೂಢಿಗತವಾಯಿತು. ಒಂದಿಷ್ಟು ವಿಷಯಗಳ ಮೇಲೆ ನಾಲ್ಕು, ಐದು ಇಲ್ಲವೆ ಏಳು ಸಮಾಸಗಳನ್ನು ಸೇರಿಸಿ, ಅವುಗಳಿಂದ ಚತುರ್ಥಮಾನ ಇಲ್ಲವೆ ಚತುಃಸಮಾಸಿ, ಪಂಚಸಮಾಸಿ, ಸಪ್ತಸಮಾಸಿ ಹೀಗೆ ಬಿಡಿ ಪ್ರಕರಣಗಳು ಸಿದ್ಧವಾಗಿರುತ್ತವೆ.

ದಾಸಬೋಧೆಯಲ್ಲಿ ಹತ್ತು ಸಮಾಸದ ಎಂಟನೆಯ ಜ್ಞಾನಶತಕವು ಹೀಗೆ ಯಾವಾಗಲೋ ಬರೆಯಲ್ಪಟ್ಟಿತು. ಅದನ್ನೇ ದಾಸಬೋಧೆಯಲ್ಲಿ ಮುಂದೆ ಸೇರಿಸಲಾಗಿದೆ. ಅಂತರ್ಗತ ಪ್ರಮಾಣದಿಂದ ಇದು ಸಿದ್ಧವಾಗುತ್ತದೆ. ಆಯಾ ಸಮಯ ಬಿಡಿ ಲೇಖನಗಳನ್ನು ಬರೆಯುತ್ತಿರಬೇಕು ಮತ್ತು ಅವುಗಳಲ್ಲಿ ಸಂಕಲನದ ಒಂದಿಷ್ಟು ಪ್ರಕರಣ ಇಲ್ಲವೆ ಗ್ರಂಥ ಸಿದ್ಧವಾಗಬೇಕು. ಇದೇ ಸಮರ್ಥರ ಬಹುತೇಕ ಸಾಹಿತ್ಯದ ಸ್ಥಿತಿ ಎಂದು ಕಾಣುತ್ತದೆ. ದಾಸಬೋಧೆಯು ಇದಕ್ಕೆ ಅಪವಾದವಾಗಿಲ್ಲ. ಅದರಲ್ಲಿಯೇ ಇನ್ನೊಂದು ಪ್ರಸಂಗ ಮಹತ್ವದ್ದಾಗಿದೆ. ಚಿಕ್ಕ ಪ್ರಕರಣಗಳ ಸಂಕಲನವನ್ನು ಮತ್ತೆ ಮಾಡುವ ಪ್ರಸಂಗವು ಬರುವ ಕಾರಣವಿಲ್ಲ. ಆದರೆ ದಾಸಬೋಧೆ ಗ್ರಂಥವು ಬಹಳ ದೊಡ್ಡದಿದೆ. ಹತ್ತು ಸಮಾಸಗಳ ಒಂದು ದಶಕದಂತೆ ಇಪ್ಪತ್ತು ದಶಕಗಳು, ಅಂದರೆ ಒಟ್ಟಿಗೆ ಇನ್ನೂರು ಸಮಾಸದಷ್ಟು ಅದರ ವಿಸ್ತಾರವಿದೆ. ಈ ಎಲ್ಲ ಸಮಾಸಗಳು ದೀರ್ಘ ಕಾಲಾವಧಿಯಲ್ಲಿ ಬರೆಯಲ್ಪಟ್ಟಿವೆ. ಅವುಗಳ ಸಂಕಲನವೇ ಒಂದಕ್ಕಿಂತ ಹೆಚ್ಚಿನ ಸಮಯಗಳಲ್ಲಿ ಆಗಿವೆ.

ಜ್ಞಾನದಶಕ–ದಾಸಬೋಧೆಯಲ್ಲಿ ಎಂಟನೆಯ ದಶಕ–ಸ್ವತಂತ್ರವಾಗಿ ಬರೆಯಲ್ಪಟ್ಟಿದೆ. ನಾಲ್ಕನೆಯ ಹಾಗೂ ಐದನೆಯ ದಶಕಗಳಲ್ಲಿ ಜ್ಞಾನದಶಕದ ಉಲ್ಲೇಖ ಬಂದಿದೆ. "ಆ ಪಂಚಭೂತಗಳ ವಿಚಾರು ಜ್ಞಾನದಶಕದಿ ಹೇಳಿದೆ॥" ಇದು ನಾಲ್ಕನೆಯ ದಶಕದಲ್ಲಿನ ಉಲ್ಲೇಖ. ಆದರೆ "ಹೇಳಿದಂತೆ ಜ್ಞಾನದಶಕದಲಿ ನನ್ನ ಲೇಖನಕೆ ವಿರಾಮ ಸಲ್ಲಿಸಿದೆ॥" ಎಂದು ಐದನೆಯ ದಶಕದಲಿ ಹೇಳಿದ್ದಾರೆ (4–10–1 ಮತ್ತು 5–10–45). ಎರಡೂ ಸ್ಥಳಗಳಲ್ಲಿ ಭೂತಕಾಲದ ಕ್ರಿಯಾಪದವನ್ನು ಉಪಯೋಗಿಸಿದ್ದಾರೆ. ಈ ವಿಚಾರವು ಮುಂದೆ ಜ್ಞಾನದಶಕದಲ್ಲಿ ಬರುವದೆಂದು ಹೇಳಿಲ್ಲ. ಇದರ ಮೇಲಿಂದ ನಾಲ್ಕನೆಯ ಮತ್ತು ಐದನೆಯ ದಶಕಗಳನ್ನು ಬರೆದ ಆ ಸಮಯ, ಜ್ಞಾನದಶಕವು ಮೊದಲೇ ಬರೆದಾಗಿತ್ತೆಂಬುದು ಸ್ಪಷ್ಟವಿದೆ.

ಏಳನೆಯ ದಶಕದ ಕೊನೆಗೆ "ಸರಳ ಶಬ್ದಗಳ ಪ್ರಯತ್ನ! ಬಂತು ಪುಸ್ತಕದ ಕೊನೆಗೆ!" ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ (7-10-42). ಅದರ ಮುಂದೆ ಯಾರು ಈ ಗ್ರಂಥದಲ್ಲಿಯ ವಿವೇಕವನ್ನು ಚೆನ್ನಾಗಿ ಗಮನಿಸುವರೋ, ಅವರಿಗೆ ನಿಶ್ಚಯವಾಗಿ ಜ್ಞಾನವಾಗುವುದೆಂದು ಹೇಳಿದ್ದಾರೆ. "ಈ ಮಾತುಗಳಿರಲಿ! ಅಧಿಕಾರದಿಂದ ಪಡೆಯಲಿ!" ಹೀಗೆಯೂ ಅನಂತರ ಹೇಳಿದ್ದಾರೆ (7-10-45 ಮತ್ತು 49). ಈ ಉದ್ಗಾರವು ಗ್ರಂಥ ಮುಗಿಯುತ್ತ ಬಂದ ಬಗೆಗೆ ಸ್ಪಷ್ಟ ಉದಾಹರಣೆಯಾಗಿದೆ. ದಾಸಬೋಧೆಯ ಈ ಮೊದಲಿನ ಏಳು ದಶಕಗಳು ಸತತವಾಗಿ ಬರೆಯಲ್ಪಟ್ಟಿರಬೇಕು. ದಾಸಬೋಧೆಯ ಮೊದಲಿನ ರೂಪ ಇಷ್ಟೇ ಇರಬೇಕು. ಹೀಗೆ ಈ ಉಲ್ಲೇಖದಿಂದ ಖಚಿತವಾಗಿ ಹೇಳಲು ಬರುತ್ತದೆ. ಏಳನೆಯ ದಶಕದ ಕೊನೆಗೆ ಗ್ರಂಥ ಮುಕ್ತಾಯದ ಸೂಚನೆ ಬರುತ್ತದೆ. ಇದರಿಂದ ಮೊದಲು ಏಳು ದಶಕಗಳು ಸತತವಾಗಿ ಬರೆಯಲ್ಪಟ್ಟಿರಬೇಕೆಂದು ಹೇಳಲು ಬರುತ್ತದೆ. ಇದು ಕೂಡ ಒಂದು ತರ್ಕವೇ ಆಗಿದೆ. ಈ ವಿಷಯದ ಬಗೆಗೂ ಮತಭೇದಗಳಿವೆ. ಮೊದಲು ಆರು ದಶಕಗಳು ಸತತವಾಗಿ ಬರೆಯಲ್ಪಟ್ಟಿರಬೇಕು ಮತ್ತು ಏಳನೆಯ ದಶಕವು ಸ್ವತಂತ್ರವಾಗಿ ಬರೆಯಲ್ಪಟ್ಟಿರಬೇಕು ಎಂದು ಇನ್ನೂ ಒಂದು ಅಭಿಪ್ರಾಯವಿದೆ. ಏಳನೆಯ ದಶಕದ ಮೊದಲನೆಯ ಸಮಾಸವು ಮಂಗಲಾಚರಣವಾಗಿದೆ ಮತ್ತು ಅದರಲ್ಲಿ ಗಣೇಶ, ಶಾರದಾ, ಸದ್ಗುರು ಹಾಗೂ ಶ್ರೋತೃಗಳನ್ನು ಪ್ರಥಮ ವಂದಿಸಿ ಮುಂದೆ ಅಧ್ಯಾತ್ಮದ ಮಹತ್ತ್ವವನ್ನು ಸ್ಪಷ್ಟಪಡಿಸಲಾಗಿದೆ. ಒಂದು ಸ್ವತಂತ್ರ ರಚನೆಯ ಪ್ರಾರಂಭವೆಂದು ತಿಳಿಯುವ ಹಾಗೆ ಏಳನೆಯ ದಶಕದ ಮೊದಲನೆಯ ಸಮಾಸವಿದೆ.

ಮೊದಲ ಆರು ಇಲ್ಲವೆ ಏಳನೆಯ ದಶಕಗಳು ಸತತವಾಗಿ ಬರೆಯಲ್ಪಟ್ಟಿವೆ. ಎಂಟನೆಯ ದಶಕವು ಮೊದಲು ಸ್ವತಂತ್ರವಾಗಿ ಬರೆಯಲ್ಪಟ್ಟಿತ್ತು. ಮುಂದೆ ಅದನ್ನು ಜೋಡಿಸಲಾಯಿತು. ಉಳಿದ ಹನ್ನೆರಡು ದಶಕಗಳು, ಇವು ಸಮಯ ಸಮಯಕ್ಕೆ ಬರೆದ ಬಿಡಿ ಸಮಾಸಗಳನ್ನು ಒಟ್ಟಿಗೆ ತೆಗೆದುಕೊಳ್ಳಲಾಯಿತು. ಮೊದಲು ಎಂಟು ಹಾಗೂ ಹನ್ನೆರಡು ಸೇರಿಸಿ ಇಪ್ಪತ್ತು ದಶಕಗಳ ದಾಸಬೋಧೆಯನ್ನು ಸಿದ್ಧಪಡಿಸಲಾಯಿತು ಎಂಬುದು ಈಗ ಮಾನ್ಯವಾಗಿದೆ. ಇದರರ್ಥವಿಷ್ಟೆ. ಎಂಟನೆಯ ದಶಕದ ನಂತರದ ನೂರಿಪ್ಪತ್ತು ಸಮಾಸಗಳು ನೇರ ರಚನೆಗಳಲ್ಲ. ಅವು ಕಾಲಕಾಲಕ್ಕೆ ಮಾಡಿದ ಬಿಡಿ ರಚನೆಗಳಾಗಿವೆ. ತಂಜಾವೂರ ಮಠದ ಅಧಿಪತಿ ಭೀಮಸ್ವಾಮಿಯವರು ಸಮರ್ಥರ ನಿರ್ವಾಣದ ವರ್ಣನೆ ಮಾಡಿದ್ದು, ಅದರಲ್ಲಿ ದಾಸಬೋಧೆಯ ಇಪ್ಪತ್ತು ದಶಕಗಳ ಈ ಕೊನೆಯ ಸಂಕಲನವು ಶಕೆ 1603ರ ಮಾರ್ಗಶೀರ್ಷ ತಿಂಗಳಿನಲ್ಲಿ ಮಾಡಲ್ಪಟ್ಟಿದೆ ಎಂದು ಹೇಳಿದ್ದಾರೆ. ಭೀಮಸ್ವಾಮಿಯವರ ಈ ಹೇಳಿಕೆ ಸಾಧಾರವಿದ್ದರೆ, ಸಮರ್ಥರು ಸಮಾಧಿ ಪಡೆಯುವ ಮುಂಚೆ ಕೇವಲ ಎರಡು ಮೂರು ತಿಂಗಳಿನಲ್ಲಿ ದಾಸಬೋಧೆಯು ಅಂತಿಮ ಸ್ವರೂಪವನ್ನು ಪಡೆದಿತ್ತೆಂದು ಹೇಳಬೇಕಾಗುತ್ತದೆ.

ಅದು ಹೇಗೇ ಇರಲಿ, ಇಷ್ಟನ್ನು ನಿಶ್ಚಯವಾಗಿ ಹೇಳಬಹುದಾಗಿದೆ. ದಾಸಬೋಧೆ

ಗ್ರಂಥರಚನೆ ಏಕಕಾಲಕ್ಕೆ ಆಗಿಲ್ಲ. ಕಾಲಕಾಲಕ್ಕೆ ಬೇರೆ ಬೇರೆ ವಿಷಯಗಳ ಮೇಲೆ ಬಿಡಿ ಸಮಾಸಗಳು ಬರೆಯಲ್ಪಟ್ಟು, ಅವುಗಳ ಸಂಕಲನ ಮಾಡಿ ಈ ಗ್ರಂಥವನ್ನು ಸಿದ್ಧಪಡಿಸಿದ್ದಾರೆ. ಇದಕ್ಕೆ ಅಪವಾದವಿದ್ದರೆ, ಹೆಚ್ಚೆಂದರೆ ಮೊದಲ ಏಳು ಇಲ್ಲವೆ ಎಂಟು ದಶಕಗಳೇ ಆಗಿರಬೇಕು. ಈ ಇನ್ನೂರು ಸಮಾಸಗಳಲ್ಲಿ ಇಪ್ಪತ್ತೊಂದು ಸಮಾಸಗಳಲ್ಲಿಯ ನಾಲ್ಕು ಸಮಾಸಗಳನ್ನು ಅವು ಇದ್ದಂತೆ ತೆಗೆದುಕೊಂಡಿರಬೇಕು. ಇದನ್ನು ನೋಡಿದರೆ ಇದು ಸಂಕಲನ ಪ್ರಕ್ರಿಯೆಯಲ್ಲಿ ನಡೆದಂತಿದೆ. ದಾಸಬೋಧೆಯಲ್ಲಿ ಆರಂಭದಿಂದ ಕೊನೆಯವರೆಗೆ ಸಂಲಗ್ನ ವಿವೇಚನೆಯು ದೊರೆಯುವುದಿಲ್ಲ. ಒಂದು ಸಮಾಸದ ನಂತರ ಮುಂದಿನ ಸಮಾಸವು ಏಕೆ ಬಂತು ಇಲ್ಲವೆ ಒಂದು ವಿಷಯದ ನಂತರ ಎರಡನೆಯ ವಿಷಯ ಏಕೆ ಬಂತು, ಇದನ್ನು ನಿರ್ಧರಿಸುವುದಾಗುವುದಿಲ್ಲ. ಸುಸಂಗತ ರಚನೆಯ ಅಭಾವ ತಿಳಿದುಬರುತ್ತದೆ. ಪುನರುಕ್ತಿಗಳಾಗಿದ್ದು ಗೊತ್ತಾಗುತ್ತದೆ. ಆ ಗ್ರಂಥದ ರಚನೆಯು ಯಾವ ರೀತಿಯಲ್ಲಿ ನಡೆಯಿತೆಂಬುದನ್ನು ಗಮನಕ್ಕೆ ತೆಗೆದುಕೊಂಡರೆ, ಈ ಎಲ್ಲ ಕೊರತೆಗಳ ಸ್ಪಷ್ಟತೆ ಆಗುತ್ತದೆ.

ಇಪ್ಪತ್ತನೆಯ ದಶಕದಲ್ಲಿ ಹತ್ತನೆಯ ಅಂದರೆ ದಾಸಬೋಧೆಯಲ್ಲಿ ಕೊನೆಯ ಸಮಾಸ ಮಾತ್ರ, ಈ ಸಂಕಲನವನ್ನು ಪೂರ್ತಿ ಮಾಡಿದ ಬಳಿಕ ಬರೆಯಲ್ಪಟ್ಟಿರಬೇಕೆಂದು ಅಲ್ಲಿಯ ವಿಷಯಗಳಿಂದ ತಿಳಿದುಬರುತ್ತದೆ. ಆದರೆ ಹೀಗೆ ಕೊನೆಯ ಸಂಕಲನ ಮಾಡುವ ಸಮಯದಲ್ಲಿ ಏಳನೆಯ ದಶಕದಲ್ಲಿ ಪುಸ್ತಕದ ಕೊನೆ ಹತ್ತಿರಕ್ಕೆ ಬಂದಂಥ ಉಲ್ಲೇಖವನ್ನು ತೆಗೆದುಹಾಕಬೇಕು ಇಲ್ಲವೆ ಆ ದಶಕದ ಮೊದಲನೆಯ ಸಮಾಸದಲ್ಲಿಯ ಮಂಗಲಾಚರಣವನ್ನು ಬಿಡಬೇಕು. ಎಂಟನೆಯ ಜ್ಞಾನದಶಕದ ಉಲ್ಲೇಖವು ಆದರ ಮೊದಲಿನ ನಾಲ್ಕನೆಯ, ಐದನೆಯ ದಶಕದಲ್ಲಿ ಬರುತ್ತಿದ್ದರೆ ಯೋಗ್ಯ, ಆ ರೀತಿ ಸರಿಪಡಿಸಬೇಕು. ವಿಷಯಗಳ ಪುನರುಕ್ತಿಗಳಿರುವ ಸಮಾಸಗಳನ್ನು ಕಡಿಮೆ ಮಾಡಬೇಕು. ಗ್ರಂಥದ ಒಟ್ಟು ರಚನೆ ಸುಸಂಗತವಾಗುವಂತೆ ಸರಿಪಡಿಸಬೇಕೆಂಬುದು ಸಮರ್ಥರಂಥ ಪ್ರಯತ್ನಶೀಲ ವ್ಯಕ್ತಿಗೆ ತಿಳಿಯದಿರುವುದು ಮಾತ್ರ ವಿಚಿತ್ರವಾಗಿ ತೋರುತ್ತದೆ. ಸಮರ್ಥರಿಗೆ ಅಶಿಸ್ತು ಸೇರುತ್ತಿರಲಿಲ್ಲ. ಪ್ರತಿಯೊಂದು ವಿಷಯದಲ್ಲಿ ಅವರು ಶಿಸ್ತನ್ನು ಬಯಸುತ್ತಿದ್ದರೆಂಬುದನ್ನು ಗಮನಕ್ಕೆ ತೆಗೆದುಕೊಂಡರೆ ಮನಸ್ಸಿನಲ್ಲಿ ಅತಿಯಾಗಿ ವಿರೋಧಾಭಾಸ ಕಂಡಿದೆ.

ಮೊದಲು ಸತತ ಬರೆದ ಏಳು ದಶಕಗಳು ಹಾಗೂ ಅದಕ್ಕಿಂತ ಮೊದಲು ಬರೆದ ಎಂಟನೆಯ ದಶಕವು ಹೀಗೆ ಒಟ್ಟಿಗೆ ಎಂಟು ದಶಕಗಳ ದಾಸಬೋಧೆಯ ಒಂದು ಭಾಗವನ್ನು ಮಾಡಲು ಬರುತ್ತದೆ. ಬೇರೆ ಬೇರೆ ಸಮಯ ಬರೆಯಲ್ಪಟ್ಟ ಬಿಡಿ ಸಮಾಸಗಳ ಸಂಕಲನದಲ್ಲಿಯ ಒಂಬತ್ತರಿಂದ ಇಪ್ಪತ್ತು-ಈ ಹನ್ನೆರಡು ದಶಕಗಳನ್ನು ಸೇರಿಸಿ ಗ್ರಂಥದ ಎರಡನೆಯ ಭಾಗವನ್ನು ಕಲ್ಪಿಸಲು ಬರುತ್ತದೆ. ಈ ಮೇಲಿನ ವಿವೇಚನೆಯಿಂದ ಇದನ್ನು ಗಮನಿಸಬಹುದು. ಇದಕ್ಕೆ ಕೆಲವರು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂಬ ಹೆಸರುಗಳನ್ನು ಕೊಟ್ಟಿದ್ದಾರೆ. ಮೊದಲ ಎಂಟು ದಶಕಗಳ ಒಟ್ಟಿನ ಓವಿಗಳ ಸಂಖ್ಯೆ 3866, ಆದರೆ ಮುಂದಿನ ಹನ್ನೆರಡು ದಶಕಗಳಲ್ಲಿನ ಸಂಖ್ಯೆ

3885 ಇರುತ್ತದೆ. ಒಟ್ಟಿಗೆ ದಾಸಬೋಧೆಯ ಓವಿಗಳ ಸಂಖ್ಯೆ 7751 ಇರುತ್ತದೆ. ದಾಸಬೋಧೆಯಲ್ಲಿ ಯಾವ ಸಂಪೂರ್ಣ ವಿವೇಚನೆಯು ಬಂದಿದೆಯೋ ಅದರಲ್ಲಿಯೇ ಈ ಭಾಗವನ್ನು ಮನ್ನಿಸಬೇಕಾಗುತ್ತದೆ. ಇದು ಅಲ್ಲಿ ಬಂದಿರುವ ಎಲ್ಲ ವಿಷಯಗಳ ಅವಲೋಕನ ಮಾಡಿದರೆ ಕಂಡುಬರುತ್ತದೆ.

ದಾಸಬೋಧೆಯಲ್ಲಿ ತಾವು ಯಾವ ವಿಷಯ ಹೇಳಿದ್ದಾರೆಂಬುದನ್ನು ಸಮರ್ಥರು ಮೊದಲ ಸಮಾಸದಲ್ಲಿಯೇ ಸ್ಪಷ್ಟಪಡಿಸಿದ್ದಾರೆ. ಸಾಮಾನ್ಯವಾಗಿ ಪ್ರಾಚೀನ ಮರಾಠಿಯಲ್ಲಿ ಗ್ರಂಥಗಳ ಆರಂಭವು ಇಷ್ಟದೇವತೆಗಳ ವಂದನೆಯಿಂದ ಆಗುತ್ತಿತ್ತು. ಆದರೆ ಸಮರ್ಥರು ಎಲ್ಲವನ್ನು ಮೊದಲ ದಶಕದಲ್ಲಿಯೇ ಗಣೇಶ, ಶಾರದಾ, ಗುರು, ಸಂತ, ಶ್ರೋತೃಗಳಿಂದ ಆ ನರದೇಹಿಗಳವರೆಗೆ ಸ್ತವನದಲ್ಲಿ ಕೊಟ್ಟಿದ್ದಾರೆ. ಮೊದಲ ಸಮಾಸದಲ್ಲಿ ಗ್ರಂಥದ ಹೆಸರು, ವಿಷಯ ಹಾಗೂ ಫಲಶ್ರುತಿ ಇವುಗಳ ಉಲ್ಲೇಖವನ್ನು ಅವರು ಮಾಡಿದ್ದಾರೆ. ಗ್ರಂಥದ ಹೆಸರು ದಾಸಬೋಧೆ ಇರುತ್ತದೆ. ಅದು ಗುರುಶಿಷ್ಯರ ಸಂವಾದ ರೂಪದಲ್ಲಿದೆ. ಅದರಲ್ಲಿ ಭಕ್ತಿ ಮಾರ್ಗವನ್ನು ಸ್ಪಷ್ಟಪಡಿಸಲಾಗಿದೆ. ಇಷ್ಟು ಸಂಗತಿಗಳನ್ನು ಅವರು ಮೊದಲಿನ ಎರಡು ಓವಿಗಳಲ್ಲಿಯೇ ಹೇಳಿದ್ದಾರೆ. ಗ್ರಂಥವು ಪರಮಾರ್ಥಪರ ಹಾಗೂ ಆಧ್ಯಾತ್ಮಿಕ ವಿಷಯ ಎಂಬುದು ಸ್ಪಷ್ಟವಿದೆ. ಎಂಟನೆಯ ದಶಕದ ಕೊನೆಗೆ ಬರುವ ಎಲ್ಲ ವಿಷಯಗಳು ಪರಮಾರ್ಥದ ದೃಷ್ಟಿಯಿಂದ ಉಪಯುಕ್ತವಾಗಿವೆ. ಸದ್ಗುರು, ಸಚ್ಛಿಷ್ಯ, ಶ್ರೋತೃ, ವಕ್ತೃ, ಬದ್ಧ, ಮುಮುಕ್ಷು, ಸಾಧಕ, ಸಿದ್ಧ ಮೊದಲಾದ ಎಲ್ಲರ ಲಕ್ಷಣಗಳನ್ನು ಹೇಳುವುದರಲ್ಲಿ ಪರಮಾರ್ಥಕ್ಕೆ ಪ್ರಾಧಾನ್ಯತೆಯಿದೆ. ನರದೇಹದ ಮಹಿಮೆಯನ್ನೇ ಆ ದೃಷ್ಟಿಯಲ್ಲಿ ಹೇಳಲಾಗಿದೆ. ಎಂಟನೆಯ ದಶಕವಂತೂ ಜ್ಞಾನದರ್ಶಕವಾಗಿದೆ. ಅದರಲ್ಲಿ ಅದ್ವೈತದ ವಿಚಾರವು ಮುಖ್ಯವಾಗಿದೆ. ಆರನೆಯ ಏಳನೆಯ ದಶಕಗಳಲ್ಲಿಯೂ ಬ್ರಹ್ಮ ಹಾಗೂ ಮಾಯಾ ಇವುಗಳ ವಿವೇಚನೆಗೆ ಪ್ರಮುಖ ಸ್ಥಾನವಿದೆ.

ಭಕ್ತಿಯ ವಿವೇಚನೆಗೆ ಸಂಪೂರ್ಣವಾಗಿ ನಾಲ್ಕನೆಯ ದಶಕವನ್ನು ಕೊಡಲಾಗಿದೆ. ಭಾಗವತದಲ್ಲಿ ಪ್ರಹ್ಲಾದನ ಮುಖದಿಂದ ಹೇಳಲ್ಪಟ್ಟ ನವವಿಧ ಭಕ್ತಿಯನ್ನು ಸಮರ್ಥರು ಇಲ್ಲಿ ಸ್ಪಷ್ಟಪಡಿಸಿದ್ದಾರೆಂದು ಶ್ರವಣ, ಕೀರ್ತನ, ಸ್ಮರಣ ಮೊದಲಾದ ಭಕ್ತಿಯ ಒಂದೊಂದು ಪ್ರಕಾರದಲ್ಲಿ ಒಂದೊಂದು ಸಮಾಸವನ್ನು ಕೊಡಲಾಗಿದೆ. ಹತ್ತನೆಯ ಸಮಾಸದಲ್ಲಿ ಆ ಭಕ್ತಿಯಿಂದ ಪ್ರಾಪ್ತವಾಗುವ ಮುಕ್ತಿಯ ನಾಲ್ಕು ಪ್ರಕಾರಗಳನ್ನು ವಿಶದಪಡಿಸಿದ್ದಾರೆ. ಆತ್ಮನಿವೇದನೆಯ ಭಕ್ತಿಯಲ್ಲಿ ಕೊಟ್ಟ ಅದ್ವೈತಾನುಭವಪರವಾದ ಅರ್ಥ ಮತ್ತು ಅದರಲ್ಲಿ ಕೊಟ್ಟ ಎಲ್ಲಕ್ಕಿಂತ ಹೆಚ್ಚಿನ ಮಹತ್ತ್ವ ಇವು ಸಮರ್ಥರ ಭಕ್ತಿ ವಿವೇಚನೆಯ ವೈಶಿಷ್ಟ್ಯಗಳಾಗಿವೆ. ಸಾಧನೆಯ ದೃಷ್ಟಿಯಲ್ಲಿ ಶ್ರವಣ, ಮನನ ಮತ್ತು ಸತತ ಚಿಂತನ ಇವುಗಳ ಮೇಲೆ ಸಮರ್ಥರ ಭಾರವಿದೆ. ಭಕ್ತಿ, ಜ್ಞಾನ ಹಾಗೂ ವೈರಾಗ್ಯ ಇವುಗಳಿಗೆ ಅವರು ಮಹತ್ತ್ವದ ಸ್ಥಾನ ಕೊಟ್ಟಿದ್ದಾರೆ. ಅವರ ಭಕ್ತಿಯಲ್ಲಿ ಸರ್ವತ್ರ ಸಗುಣಗಳಿವೆ. ಆದರೆ ಆ ಸಗುಣಗಳು ಕೊನೆಗೆ ನಿರ್ಗುಣಗಳಲ್ಲಿ ಲಯವಾಗುವಂತಿವೆ. ಭಕ್ತಿಯ ಈ ವಿವರಣೆಯ ವಿಷಯದಲ್ಲಿ

ಸಮರ್ಥರು ವಿಠ್ಠಲನ ಬದಲಿಗೆ ಶ್ರೀರಾಮನೇ ದೇವತೆಯೆಂದು ಮನ್ನಿಸಿದ್ದಾರೆ. ಇದಿಷ್ಟೇ ಆ ಇತರ ಭಾಗವತ ಧರ್ಮೀಯ ಸಂತರಲ್ಲಿ ಹಾಗೂ ಸಮರ್ಥರಲ್ಲಿಯ ಭೇದವಾಗಿದೆ. ಭಕ್ತಿಯ ಮೂಲಕೇಂದ್ರ ಅದೇ ಇರುತ್ತದೆ. ಅದ್ವೈತ ಸಿದ್ಧಾಂತದ ಮೇಲೆಯೇ ಆ ಭಕ್ತಿ ನಿಂತಿದೆ.

ಸಮರ್ಥರು ಹದಿನಾಲ್ಕು ಪ್ರಕಾರದ ಬ್ರಹ್ಮರನ್ನು ಉಲ್ಲೇಖಿಸುತ್ತಾರೆ. ಅವರಲ್ಲಿ ವಿಮಲ ಎಂಬ ಕೇವಲಬ್ರಹ್ಮನು ಎಲ್ಲರ ಮೊದಲಿಗನಾಗಿದ್ದಾನೆ. ಸಮರ್ಥರು ಹೇಳಿದ ಈ ವಿಮಲ ಬ್ರಹ್ಮನೆಂದರೆ ವೇದಾಂತದಲ್ಲಿಯ ನಿರ್ಗುಣ, ನಿರಾಕಾರ ಮತ್ತು ಅಧಿಷ್ಠಾನರೂಪದ ಪರಬ್ರಹ್ಮ. ಮಾಯೆಯೇ ಮಿಥ್ಯೆಯೆಂದು ಹೇಳುತ್ತ ಹೇಳುತ್ತ ಅದು ಮೂಲ ನಿರ್ಮಾಣವಾಗಿಯೇ ಇಲ್ಲ ಮತ್ತು ವಿಶ್ವವೇ ಅಸ್ತಿತ್ವದಲ್ಲಿ ಬಂದಿರಲಿಲ್ಲ ಎಂದು ಹೇಳಿ, "ಎಲಾ, ಎಲ್ಲಿ ಏನೂ ಇರಲಿಲ್ಲ! ಅವರ ವಾರ್ತೆ ಹೇಗೆ ತಿಳಿಯಿತು!" ಹೀಗೆ ಅಜಾತವಾದದ ಸೀಮೆಯವರೆಗೆ ಸಮರ್ಥರು ಮುಟ್ಟಿದ್ದಾರೆ. ಅವರ ಬಿಡಿ ಪ್ರಕರಣಗಳಲ್ಲಿಯೂ ಈ ರೀತಿಯ ಉಲ್ಲೇಖಗಳು ಅಲ್ಲಲ್ಲಿ ಬರುತ್ತವೆ. ಆದರೆ ಇದು ಸಮರ್ಥರ ಕೊನೆಯ ಸಿದ್ಧಾಂತವಲ್ಲ. ಪಂಚೀಕರಣದ ಎಲ್ಲ ಸೂಕ್ಷ್ಮ ವಿವರಣೆ ಕೊಡುತ್ತ ಕೊಡುತ್ತ ಆ ವಿಶ್ವದ ನಿರ್ಮಾಣ ಹಾಗೂ ನಿರ್ನಾಮ ಹೇಗಾಗುತ್ತವೆ ಎಂದು ವರ್ಣನೆ ಮಾಡುತ್ತಾರೆ. ಇಷ್ಟೇ ಅಲ್ಲ, ಪರಮಾರ್ಥಿ ಪುರುಷನು ವಿಶ್ವದ ವ್ಯವಹಾರದಲ್ಲಿ ಗಮನವನ್ನು ಹರಿಸಲೇಬೇಕು ಎಂದು ಉತ್ತರಾಯುಷ್ಯದಲ್ಲಿ ಆಗ್ರಹ ಪೂರ್ವಕವಾಗಿ ಪ್ರತಿಪಾದಿಸುತ್ತಿರುವಾಗ, ಮಾನವನ ಇಂದ್ರಿಯಗಳಿಗೆ ಪ್ರತ್ಯಕ್ಷವಾಗಿ ಅನುಭವವಾಗುವ ಆ ವಿಶ್ವದ ಅಸ್ತಿತ್ವವನ್ನು ಸುಸ್ಪಷ್ಟ ವಾಸ್ತವತೆಯ ಪಾತಳಿಯಲ್ಲಿ ಅದನ್ನು ಸ್ವೀಕರಿಸಿದಂತೆ ಕಾಣುತ್ತದೆ. ಮೋಕ್ಷವನ್ನು ಪಡೆಯುವ ದೃಷ್ಟಿಯಿಂದ ಕೇವಲ ಶಬ್ದ ಜ್ಞಾನವು ಸಾಕಾಗುವುದಿಲ್ಲ. ಆದರೆ ಆ ಜ್ಞಾನದ ಸ್ವಾನುಭವವು ಆಗಬೇಕು. ಅದಕ್ಕಾಗಿ ಸಾಧನೆಯನ್ನು ಮಾಡಬೇಕು. ಈ ವಿಚಾರವನ್ನು ಸಮರ್ಥರು ಮೇಲಿಂದ ಮೇಲೆ ಹೇಳುತ್ತಾರೆ. "ಸದಾ ಸ್ವರೂಪಾನುಸಂಧಾನ! ಇದೇ ಮುಖ್ಯ ಸಂತನ ಲಕ್ಷಣ!" ಹೀಗೆ ಅವರು ಹೇಳಿದ್ದಾರೆ (5–8–97). ದಾಸಬೋಧೆಯ ಪ್ರಾರಂಭದಲ್ಲಿಯೇ "ಬಹುವಾಗಿ ಅಧ್ಯಾತ್ಮ ನಿರೂಪಣ! ನಿರೂಪಿಸಿದ" (1–1–3). ಹೀಗೆ ಯಾವ ಗ್ರಂಥದ ವರ್ಣನೆಯನ್ನು ಮಾಡಿರುವರೋ, ಅದು ಮೊದಲಿನ ಎಂಟು ದಶಕಗಳಲ್ಲಿ ಪೂರ್ವಾರ್ಧಕ್ಕೆ ಸರಿಹೊಂದುವಂತಿದ್ದರೂ ಮುಂದಿನ ಹನ್ನೆರಡು ದಶಕಗಳ ಉತ್ತರಾರ್ಧದಲ್ಲಿ ಅವುಗಳನ್ನು ಅಷ್ಟು ಯಥಾರ್ಥವಾಗಿ ಅರ್ಥ ಮಾಡಲು ಬರುವುದಿಲ್ಲ. ಉತ್ತರಾರ್ಧದಲ್ಲಿಯ ಈ ಸಮಾಸಗಳು ಬೇರೆ ಬೇರೆ ಸಮಯದಲ್ಲಿ ಬರೆಯಲ್ಪಟ್ಟಿವೆ. ಆಯಾ ಪ್ರಸಂಗಗಳಲ್ಲಿ ಶಿಷ್ಯರಿಗೆ ವಿಶಿಷ್ಟ ವಿಷಯಗಳನ್ನು ತಿಳಿ ಹೇಳುವುದಕ್ಕಾಗಿಯೇ ಇವುಗಳನ್ನು ಬರೆದಿರಬೇಕು. ಆದ್ದರಿಂದ ಇವುಗಳಲ್ಲಿ ಅನೇಕ ವಿಷಯಗಳು ಬಂದಿವೆ. ಈ ಎಲ್ಲ ವಿಷಯಗಳು ಕೇವಲ ಪರಮಾರ್ಥದ ಬಗೆಗೆ ಇಲ್ಲವೆ ಅಧ್ಯಾತ್ಮ ನಿರೂಪಣೆಯ ಬಗೆಗೆ ಸಂಬಂಧಿಸಿವೆ ಎಂಬಿಲ್ಲ. ಮೊದಲಿನ ಎಂಟು ದಶಕಗಳಲ್ಲಿ ಕೇವಲ ಪರಮಾರ್ಥವಿದೆ. ಆದರೆ ಮುಂದಿನ ಹನ್ನೆರಡು ದಶಕಗಳಲ್ಲಿ ಪ್ರಪಂಚ ಹಾಗೂ

ಪರಮಾರ್ಥ ಇವೆರಡೂ ಇವೆ. ಮೊದಲಿನ ಎಂಟು ದಶಕಗಳಲ್ಲಿ ಕೇವಲ ಆಧ್ಯಾತ್ಮ ವಿವೇಚನೆಯಿದೆ. ಆದರೆ ಮುಂದಿನ ಹನ್ನೆರಡು ದಶಕಗಳಲ್ಲಿ ಆಧ್ಯಾತ್ಮದ ಜತೆಗೆ ವ್ಯಾವಹಾರಿಕ ಉಪದೇಶವೂ ಇದೆ. ಮೊದಲಿನ ಎಂಟು ದಶಕಗಳಲ್ಲಿ ಎಲ್ಲ ಗಮನವು ಕೇವಲ ಪರಲೋಕದ ಕಡೆಗಿದೆ. ಆದರೆ ಮುಂದಿನ ಹನ್ನೆರಡು ದಶಕಗಳಲ್ಲಿ ಆ ಪರ ಲೋಕದ ಜತೆಯಲ್ಲಿಯೇ ಇಹಲೋಕದ ಕಡೆಗೂ ಇದೆ. ಮೊದಲಿನ ಎಂಟು ದಶಕ ಗಳಲ್ಲಿ ಸಮರ್ಥರು ಹೇಳಿದ ಜ್ಞಾನವು, ಅದು ಗುರುಗೀತೆಯಲ್ಲಿಯು ಇತರ ಸಂತರ ಗ್ರಂಥಗಳಲ್ಲಿ ದೊರೆಯುವ ಪ್ರಕಾರವೇ ಇದೆ. ಆದರೆ ಮುಂದಿನ ಹನ್ನೆರಡು ದಶಕ ಗಳಲ್ಲಿ, ಅವರು ಮಾಡಿದ ಉಪದೇಶಗಳಲ್ಲಿ ಇತರ ಅನೇಕ ವಿಷಯುಗಳಿರುತ್ತವೆ. ಅದೇ ರೀತಿ ಬೇರೆ ಸಂತರ ಗ್ರಂಥಗಳಲ್ಲಿ ದೊರೆಯುವ ವಿಷಯಗಳ ಹಿನ್ನೆಲೆ ಸಿಗುತ್ತದೆ, "ಮುಖ್ಯವಾಗಿ ಅವು ಹರಿಕಥಾ ನಿರೂಪಣ!" ಇದೇ ಸಮರ್ಥರ ವಿಚಾರಗಳ ಮುಖ್ಯ ಸೂತ್ರಗಳು. ಅವು ಮೊದಲಿನ ಎಂಟು ದಶಕಗಳಲ್ಲಿ ಎಲ್ಲೆಡೆ ವಿಶೇಷವಾಗಿ ಕಾಣ ಬರುತ್ತವೆ. ಮುಂದಿನ ಹನ್ನೆರಡು ದಶಕಗಳಲ್ಲಿಯೂ ಅವು ಇರುತ್ತವೆ. ಆದರೆ ಅವು ಗಳನ್ನು ಸೇರಿಸಿ "ಎರಡನೆಯದು ರಾಜಕಾರಣ!" ಎಂದು ಸಮರ್ಥರು ಹೇಳುತ್ತಾರೆ. ಮತ್ತೆ ಅವುಗಳಿಗೆ "ಮೂರನೆಯದು ಸಾವಧಾನ! ಸರ್ವ ವಿಷಯಗಳಲ್ಲಿ! ನಾಲ್ಕನೆ ಯದು ನಿಷ್ಕಾಮಕಾರ್ಯ!" ಹೀಗೆ ಪುರವಣಿ ಜೋಡಿಸುವರು (11.5.4–5). ಈ ರಾಜಕಾರಣ, ಈ ಸರ್ವ ವಿಷಯಗಳಲ್ಲಿನ ಎಚ್ಚರ ಮತ್ತು ಈ ನಿಷ್ಠೆಯ ಕಾರ್ಯ ಇವುಗಳ ಸುಸಂಗತವಾದ ಅನೇಕ ವಿಷಯಗಳು ಮುಂದಿನ ಹನ್ನೆರಡು ದಶಕಗಳಲ್ಲಿ ಬರುತ್ತವೆ. ಇತರ ಸಂತರಿಗಿಂತ ಸಮರ್ಥರಲ್ಲಿದ್ದ ವಿಶೇಷತೆ ದಾಸಬೋಧೆಯ ಮೊದಲಿನ ಎಂಟು ದಶಕಗಳಲ್ಲಿ ಕಾಣುವುದಿಲ್ಲ. ಅದು ಮುಂದಿನ ಹನ್ನೆರಡು ದಶಕ ಗಳಲ್ಲಿ ಕಾಣುತ್ತದೆ.

ಭಕ್ತಿ ಹಾಗೂ ಅಧ್ಯಾತ್ಮ ಈ ವಿಷಯಗಳು ಮುಂದಿನ ಹನ್ನೆರಡು ದಶಕಗಳಲ್ಲಿ ಬಂದಿಲ್ಲವೆಂದು ಇದರರ್ಥವಲ್ಲ. ಆ ಎರಡೂ ವಿಷಯಗಳು ಇದ್ದೇ ಇವೆ. ಆದರೆ ಪ್ರಪಂಚ ಮತ್ತು ಪರಮಾರ್ಥ ಇವುಗಳ ವಿವೇಕವನ್ನು ಹೇಳುವ ಅನೇಕ ವಿಷಯಗಳೇ ಬಂದಿವೆ. ರಾಜಕಾರಣದ ಬಗೆಗೆ ಸ್ವತಂತ್ರ ಸಮಾಸ ಬಂದಿದೆ. "ಧರ್ಮಸ್ಥಾಪನೆಯ ನರ! ಆತನೇ ಈಶ್ವರನ ಅವತಾರ!" ಹೀಗೆ ಸಾಕ್ಷಿ ಕೊಡುವ ಮತ್ತು "ಮುಂದೆ ಆಗುವನು" ಎಂದು ಆಶ್ವಾಸನೆ ನೀಡುವ ಸಮಾಸಗಳನ್ನು ಸಮರ್ಥರು ಬರೆದಿದ್ದಾರೆ (ಸಮಾಸ 18.6). "ಸತತ ಏಕಾಂತದಲ್ಲಿರಬೇಕು" ಇಂಥ ವಿಚಾರಗಳನ್ನು ಸಮರ್ಥರು ಹೇಳಿದ್ದಾರೆ. ಅದರ ಜತೆಗೆ "ಮಹಂತನು ಮಹಂತನನು ನಿರ್ಮಿಸಬೇಕು!" ಈ ಸಂದೇಶವನ್ನೂ ನೀಡಿದ್ದಾರೆ (11.10.10, 11.10.17). ಪ್ರಯತ್ನವಾದದ ಖಂಡಿತ ಪುರಸ್ಕಾರವನ್ನು ಅವರು ಮಾಡಿದ್ದಾರೆ. ಅದರ ಜತೆಗೆ "ಮುಂಡರ ಕೂಡ ಮುಂಡರೇ ಆಗಬೇಕು" ಎಂದು ಮೇಲ್ನೋಟದಲ್ಲಿ ಸಾಧುವೃತ್ತಿಯ ಪಾರಮಾರ್ಥಿಕ ಸಂತರಿಗೆ ಶೋಭಿಸದ ವಿಚಾರಗಳನ್ನು ಹೇಳಿದ್ದಾರೆ (19.9.30). ವಿವೇಕ, ಪ್ರಬೋಧ, ಪ್ರತ್ಯಯ, ಅನುಭವ ಇವುಗಳ ಉಲ್ಲೇಖ ಉತ್ತರಾರ್ಧದಲ್ಲಿ ಅನೇಕ ಸ್ಥಳಗಳಲ್ಲಿ

ಬಂದಿವೆ. ಪೋಲ್ಟೋಟಕ್ಕೆ ಭಿಕಾರಿಗಳಂತೆ ಅಂದರೆ ಕೇವಲ ಯಾರಾದರೂ ಕ್ಷುದ್ರರಂತೆ ಕಾಣುವ, ಆದರೆ ಗುಪ್ತರೂಪದಲ್ಲಿ ಪ್ರಭಾವಿಯಾಗಿರುವ ಜನರಲ್ಲಿ ಅನೇಕ ಅನುಯಾಯಿಗಳನ್ನು ಆಯ್ದು, ಜನರ ಮನಸ್ಸಿನ ಮೇಲೆ ಅಧಿಕಾರ ನಡೆಯಿಸುವಂಥ ಮಹಾಪುರುಷರ ವರ್ಣನೆಗಳು ಬಂದಿವೆ (ಸಮಾಸ 15.2). ಸಮುದಾಯವನ್ನು ಹೇಗೆ ನಿರ್ಮಿಸುವುದು, ಮಂಡಲಿಗಳನ್ನು ಹೇಗೆ ನಡೆಯಿಸುವುದು ಹಾಗೂ ಬೆಳೆಸುವುದು ಇವುಗಳಿಗೆ ದಿಕ್ಸೂಚಿಯಾಗಿವೆ (ಸಮಾಸ 11.6 ಮತ್ತು 11.10). ಪರೋಪಕಾರ ಮಾಡಿ, ಬೇರೆಯವರ ಸುಖದಲ್ಲಿ ಸುಖಿಗಳಾಗುವ ಹಾಗೂ ದುಃಖದಲ್ಲಿ ದುಃಖಿಗಳಾಗುವ ವ್ಯಕ್ತಿಗಳನ್ನು ಹೇಗೆ ಒಟ್ಟುಗೂಡಿಸಬೇಕೆಂಬ ದಿಗ್ದರ್ಶನವನ್ನು ಮಾಡಿದ್ದಾರೆ (ಸಮಾಸ 19.3 ಹಾಗೂ 4). ತಮ್ಮ ಪರಿವಾರದಲ್ಲಿ ತೀಕ್ಷ್ಣಬುದ್ಧಿಯ ಮಕ್ಕಳನ್ನು ಹೇಗೆ ಹುಡುಕಬೇಕು, ಅವರನ್ನು ಹೇಗೆ ಕೈವಶ ಮಾಡಿಕೊಳ್ಳಬೇಕು, ಅವರ ಬಾಲ ಮನಸ್ಸಿನಲ್ಲಿ ಸಂಸ್ಕಾರವನ್ನು ಹೇಗೆ ಮೂಡಿಸಬೇಕು, ಜನರ ಭಾಷೆಯಲ್ಲಿ ಮಾತನಾಡಿ ಹಾಗೂ ನಡೆಯಲ್ಲಿ ನಡೆದು, ಅವರಿಗೆ ನಿಧಾನವಾಗಿ ಹೇಗೆ ಕಲಿಸಬೇಕು ಮತ್ತು ಎಲ್ಲ ಜನರನ್ನು ಹೇಗೆ ಜಾಣರನ್ನಾಗಿ ಮಾಡಿಬಿಡಬೇಕು ಇವುಗಳ ಮಾರ್ಗವನ್ನು ತೋರಿಸಿದ್ದಾರೆ. ಅಧ್ಯಾತ್ಮದ ಜತೆಗೆ ಇತರ ಅನೇಕ ವ್ಯಾವಹಾರಿಕ ವಿಷಯಗಳ ಉಪದೇಶಗಳು ದಾಸಬೋಧೆಯ ಒಂಭತ್ತರಿಂದ ಇಪ್ಪತ್ತು ಈ ದಶಕಗಳಲ್ಲಿ ಅನೇಕ ಸ್ಥಳಗಳಲ್ಲಿ ಏಕೆ ಬಂದಿವೆ ಎಂಬುದು ಇವುಗಳಿಂದ ಸ್ಪಷ್ಟವಾಗುತ್ತದೆ.

ಹೀಗೆ ವಿವಿಧ ವಿಷಯಗಳು ಬಂದಿದ್ದರಿಂದ ಹಾಗೂ ಅವುಗಳಲ್ಲಿಯೇ ಅಂತರಾತ್ಮ, ಆತ್ಮನಿವೇದನ ಭಕ್ತಿ ಇಲ್ಲವೆ "ಚಂಚಲನದಿ ಗುಪ್ತಗಂಗಾ!" ಹೀಗೆ ಆಧ್ಯಾತ್ಮಿಕ ವಿಷಯಗಳೇ ಮಿಶ್ರಣವಾಗಿರುವುದರಿಂದ ಮೊದಲಿನ ಎಂಟು ದಶಕಗಳಲ್ಲಿಯ ವಿವೇಚನೆಯಲ್ಲಿ ಕಾಣುವ ಏಕರೂಪತೆಯು ಅದು ದಾಸಬೋಧೆಯ ಮುಂದಿನ ಭಾಗಗಳಲ್ಲಿ ತೋರುವುದಿಲ್ಲ ಅಸ್ತವ್ಯಸ್ತವಾಗಿ ವಿವಿಧ ವಿಷಯಗಳು ಹೇಗೋ ಒಂದೆಡೆ ಬಂದಿರುವ ಅನುಭವವಾಗುತ್ತದೆ. ಒಟ್ಟಿಗೆ ಗ್ರಂಥವನ್ನು ಓದಿದರೆ ಮನಸ್ಸಿನ ಮೇಲಾಗುವ ಅವರ ಪರಿಣಾಮ ಕೂಡ ಒಂದೇ ರೀತಿಯಾಗದೆ, ಸಮ್ಮಿಶ್ರ, ಸಂಕೀರ್ಣವಾಗುತ್ತದೆ. ಪರಿಣಾಮದ ದೃಷ್ಟಿಯಲ್ಲಿ ವಿಚಾರಿಸಿದರೆ, ಸಮರ್ಥರ ವಾಣಿ ಅಧ್ಯಾತ್ಮ ಇಲ್ಲವೆ ಇತರ ವಿಷಯಗಳ ವಿವೇಚನೆಯಲ್ಲಿಯೂ ಪ್ರಭಾವಪೂರ್ಣ ಎನಿಸುತ್ತದೆ. ಅವರ ಜ್ಞಾನದಲ್ಲಿ ಭಕ್ತಿಯ ವರ್ಣನೆ ಎಷ್ಟು ಸರಸವಾಗಿದೆಯೋ, ಅಷ್ಟೇ ಧರ್ಮ ಸಂಸ್ಥಾಪಕ "ಕೈವಾರಿ ಪರಮಾರ್ಥಿ" ರಾಜನದಿದೆ. ಹಾಗೇ ಅವರು ಗುಹೆಯಲ್ಲಿ ಹೋಗಿ ಇರುವ, ಆದರೆ ಸ್ವಭಾವಗತ ಗುಣಗಳ ಅನುಭವದಿಂದ ಜನರಿಗೆ ಅಭಿರುಚಿ ನೀಡುವ ಲೋಕಸಂಗ್ರಹ ಶೀಲ ಮಹಂತರ ವರ್ಣನೆಯಿದೆ. ಆದರೂ ಮುಖ್ಯವಾಗಿ ಐಹಿಕ ಜೀವನಕ್ಕೆ ಸಂಬಂಧವಿದ್ದ ಆ ಭಾಗಗಳು ಪಾರಲೌಕಿಕಕ್ಕೆ ಸಂಬಂಧಿಸಿರುವ ಆಧ್ಯಾತ್ಮ ವಿಚಾರಗಳ ಜೊತೆ ಕೂಡಿಸಿ ಹೇಳಿದ್ದರಿಂದ ಗ್ರಂಥವಾಚಕರ ಮನಸ್ಸಿನಲ್ಲಿ ಆಗುವ ಒಟ್ಟಿನ ಪರಿಣಾಮ ಸಮ್ಮಿಶ್ರವಾಗುತ್ತದೆ.

ಪರಸ್ಪರ ಯಾವ ಸಂಬಂಧವೂ ಇಲ್ಲದ ವಿಷಯಗಳು ದಾಸಬೋಧೆಯ ಉತ್ತರಾರ್ಧ ದಲ್ಲಿ ಅನೇಕ ಸ್ಥಳಗಳಲ್ಲಿ ಒಂದಕ್ಕೊಂದು ಹತ್ತಿರ ಬಂದಿವೆ. ಹದಿನಾಲ್ಕನೆಯ ದಶಕದ ಆರಂಭದಲ್ಲಿ ನಿಸ್ಪೃಹತೆಯ ಲಕ್ಷಣವನ್ನು ಸ್ಪಷ್ಟಪಡಿಸಿದ ಬಳಿಕ ಭಿಕ್ಷೆಯ ಮಹತ್ತ್ವ ವನ್ನು ಹೇಳಲಾಗಿದೆ. ಅನಂತರ ಕವಿತ್ವದ ಲಕ್ಷಣ. ಇದು ತೀರ ಬೇರೆ ವಿಷಯ ವಾಗಿದ್ದು, ಆ ದಶಕದ ಸಮಾಪ್ತಿಯು ಬ್ರಹ್ಮ ಹಾಗೂ ಮಾಯಾ ಇವುಗಳ ವಿವರಣೆ ಯಿಂದ ಆಗಿದೆ. ಇದು ಕೇವಲ ಒಂದಿಷ್ಟು ಸ್ಥಳಗಳಲ್ಲಿ ಬಂದಿರುವ ಅಪವಾದವಲ್ಲ. ಇತರ ಅನೇಕ ದಶಕಗಳಲ್ಲಿ ಒಂದರ ಹಿಂದೆ ಒಂದು ಬರುವ ವಿಷಯಗಳ ಸ್ಥಿತಿಯು ಹೆಚ್ಚು ಕಡಿಮೆ ಇದೇ ಪ್ರಮಾಣದಲ್ಲಿದೆ. ಪುನರುಕ್ತಿಯ ಪ್ರಕಾರವೂ ಹೀಗೇ ಇದೆ. ಚಾತುರ್ಯ ಈ ವಿಷಯವು ಹದಿನಾಲ್ಕನೆಯ ದಶಕದಲ್ಲಿ ಬಂದಿದ್ದರೂ ತಕ್ಷಣ ಹದಿನೈದನೆಯ ದಶಕದಲ್ಲಿ ಎರಡು ಸಮಾಸಗಳಲ್ಲಿ ಬಂದಿವೆ. ಅದರ ಮೊದಲು ಮತ್ತು ಅನಂತರ, ಶಾಶ್ವತವೆಂದರೆ ನಿರ್ಗುಣ ಬ್ರಹ್ಮ, ಚಂಚಲವೆಂದರೆ ಸಗುಣ ಬ್ರಹ್ಮ, ಹಾಗೂ ಸೂಕ್ಷ್ಮಜೀವ ಮತ್ತು ಪಿಂಡಗಳ ಉತ್ಪತ್ತಿ ಈ ವಿಷಯಗಳು ಬಂದಿವೆ. ಹತ್ತೊಂಬತ್ತನೆಯ ದಶಕದ ಮೊದಲ ಸಮಾಸವು ಲೇಖನಕ್ರಿಯೆ ಎಂಬ ಹೆಸರಿನಿಂದ ಇದೆ. ಆದರೆ ಆ ದಶಕದಲ್ಲಿ ಮುಂದೆ ರಾಜಕಾರಣ ಸಮಾಸ ಬರುತ್ತವೆ. ಅದರ ಮುಂದೆ ಉಪಾಧಿ ಹಾಗೂ ವಿವೇಕ ಇವುಗಳ ಲಕ್ಷಣಗಳು ಸ್ಪಷ್ಟಪಡಿಸಲ್ಪಟ್ಟಿವೆ. ಲೇಖನ ಕ್ರಿಯೆಗಳ ವಿವರಣೆಯನ್ನು ವಿದ್ಯಾರ್ಥಿಗಳಿಗಾಗಿ ಮಾಡಿದ ಸ್ವರೂಪದಲ್ಲಿವೆ ಯೆಂದು ಹೇಳಬೇಕಾಗಿಲ್ಲ. ರಾಜಕಾರಣ ವಿಷಯವು ಕೇವಲ ಲೌಕಿಕ ಜೀವನಕ್ಕೆ ಸಂಬಂಧಿಸಿದೆ. ಆದರೆ ಉಪಾಧಿ ಹಾಗೂ ವಿವೇಕ ಇವುಗಳ ಸ್ಪಷ್ಟೀಕರಣದಲ್ಲಿ ಐಹಿಕ ಮತ್ತು ಪಾರಲೌಕಿಕ ವಿಚಾರಗಳ ಮಿಶ್ರಣವಿದೆ. ಈ ಎಲ್ಲ ಸಮ್ಮಿಶ್ರ ವಿವೇಚನೆ ಗಳನ್ನು ನೋಡಿದರೆ ಆಧ್ಯಾತ್ಮ ವಿವೇಚನೆಯಲ್ಲಿ ಮುಳುಗಿದ ದಾಸಬೋಧೆಯ ಮೊದಲ ಎಂಟು ದಶಕಗಳನ್ನು ಸಮರ್ಥರು ಸ್ವತಂತವಾಗಿರಿಸಿದ್ದಾರೆ. ಒಂಬತ್ತನೆಯ ದಶಕದಿಂದ ಮುಂದಿನ ಭಾಗಗಳಲ್ಲಿ ಬರುವ ಸಮಾಸಗಳ ವಿಷಯಾನುಸಾರ ಕ್ರಮಬದ್ಧ ವಾಗಿ ವರ್ಗೀಕರಣ ಮಾಡಿ, ಅವುಗಳ ಬೇರೆ ಬೇರೆ ಚಿಕ್ಕ ಪ್ರಕರಣಗಳನ್ನು ಮಾಡಿದ್ದರೆ, ಅದು ಬಹಳ ಒಳ್ಳೆಯದಾಗಿರುತ್ತಿತ್ತೆಂದು ಮನಸ್ಸಿನಲ್ಲಿ ಮೂಡಿ ಹೋಗುತ್ತದೆ.

ಇಲ್ಲಿ ಇನ್ನೊಂದು ವಿಚಾರ ಮನಸ್ಸಿನಲ್ಲಿ ಮೂಡುತ್ತದೆ. ಆಧ್ಯಾತ್ಮದಲ್ಲಿಯ ಪ್ರಮುಖ ವಿಚಾರವಿದು. ಮಾನವ ಜೀವನವು ಕ್ಷಣಭಂಗುರವಾದುದು, ವಿಶ್ವವು ಮಿಥ್ಯೆ ಮತ್ತು ಪ್ರಪಂಚದ ಈ ಮಾಯಾಮೋಹದಲ್ಲಿ ಸಿಲುಕದೆ ದುರ್ಲಭವಾದ ನರದೇಹವು ಪ್ರಾಪ್ತವಾದುದರಿಂದ ಮನುಷ್ಯನು ಶಾಶ್ವತ ಕಲ್ಯಾಣದ ಅಂದರೆ ಮೋಕ್ಷದ ದಾರಿಯಲ್ಲಿ ನಡೆಯಬೇಕು. ದಾಸಬೋಧೆಯ ಮೊದಲ ಎಂಟು ದಶಕ ಗಳಲ್ಲಿ ಇಷ್ಟೇ ಅಲ್ಲದೆ ಇತರ ಎಲ್ಲ ಆಧ್ಯಾತ್ಮ ವಿಷಯಗಳ ಬಿಡಿ ಪ್ರಕರಣಗಳಲ್ಲಿ ಸಮರ್ಥರು ಇವೇ ವಿಚಾರಗಳನ್ನು ಮಂಡಿಸುತ್ತಾರೆ. ಈ ವಿಚಾರಗಳನ್ನು ಒಂದಿಷ್ಟು ಹೊಸೆದು ದಾಸಬೋಧೆಯ ಉತ್ತರಾರ್ಧದಲ್ಲಿ ಅವರು "ಮೊದಲು ನೆಟ್ಟಗೆ ಪ್ರಪಂಚ ಮಾಡಿರಿ !" ಎಂದು ಹೇಳುತ್ತಾರೆ. ಈ ಜಗತ್ತಿನಲ್ಲಿ ವ್ಯವಹಾರವನ್ನು ಸಾವಧಾನದಿಂದ

ಹಾಗೂ ನಿಷ್ಠಾಪೂರ್ವಕ ಮಾಡಬೇಕೆಂದು ಹೇಳುತ್ತಾರೆ. ಮಹಂತರು ಮಹಂತರನ್ನು ನಿರ್ಮಿಸಬೇಕು. ಅವರಿಗೆ ಯುಕ್ತಿಬುದ್ಧಿ ತಿಳಿಸಬೇಕು "ಅವರಿಗೆ ಜ್ಞಾನ ಬೋಧಿಸಿ ಬೇರೆ ಬೇರೆಡೆ। ಕಳುಹಿಸಿಕೊಡಿ!" ಹೀಗೆ ಲೋಕ ಸಂಗ್ರಹದ ಉಪದೇಶವನ್ನು ಆಗತ್ಯವಾಗಿ ಮಾಡುತ್ತಾರೆ. ಸಮರ್ಥರು ಹೀಗೆ ಮಾಡುವಾಗ ಆ ವೇಳೆಯಲ್ಲಿ ಈ ಇಹಲೋಕ ಪರ ವಿಚಾರಗಳ ಸಮನ್ವಯವನ್ನು ಮೊದಲಿನ ನಿಚ್ಚಳ ವೈರಾಗ್ಯದ ಮೇಲೆ ಮತ್ತು ಮೋಕ್ಷಪರವಾದಂಥ ಆಧ್ಯಾತ್ಮದಲ್ಲಿ ಹೇಗೆ ಸೇರಿಸಬೇಕೆಂಬುದನ್ನು ಸ್ಪಷ್ಟಪಡಿಸಬೇಕಾಗಿತ್ತು. ಪರಮಾರ್ಥ ಹಿಂದೆ ಎದ್ದು ನಿಲ್ಲುವ ಆಧ್ಯಾತ್ಮ ವಿಚಾರಗಳನ್ನು ಅವರು ಹೇಳಿದ್ದಾರೆ. ಹಾಗೆಯೇ ಅವರು ಪ್ರಪಂಚ ಪರಮಾರ್ಥ ವಿವೇಕದ ಹಿಂದಿನ ಸಂಭಾವ್ಯ ತತ್ವವಿಚಾರಗಳನ್ನು ತೋರಿಸಬೇಕಾಗಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ.

ಆದ್ದರಿಂದ ಸಮರ್ಥರ ಮೋಕ್ಷಪರ ವೈರಾಗ್ಯ ವಿಚಾರಗಳು ಮತ್ತು ಇತರ ಇಹಪರ, ರಾಜಕಾರಣದ ನಿಷ್ಠಾಪೂರ್ವಕ ಇಲ್ಲವೆ ಸರ್ವ ವಿಷಯಗಳಲ್ಲಿ ಎಚ್ಚರಗೊಳಿಸುವ ವಿಚಾರಗಳು ಈ ಎರಡೂ ಬಗೆಯ ವಿಚಾರಗಳು ಒಂದೇ ಗ್ರಂಥದಲ್ಲಿ ಹತ್ತಿರ ಹತ್ತಿರ ಬಂದಿವೆ. ಕೆಲವು ವೇಳೆ ಅವು ಒಂದಕ್ಕೊಂದು ತೀರ ಹತ್ತಿರ ಇಡಲ್ಪಟ್ಟಿವೆ. ಆದರೆ ಆ ಎರಡರಲ್ಲಿಯ ವೈಚಾರಿಕ ಸಂಗತಿಗಳು ಸ್ಪಷ್ಟವಾಗಿಲ್ಲ. ಮಾನವ ಜೀವನದ ಕಡೆಗೆ ನೋಡುವ ಈ ಎರಡೂ ದೃಷ್ಟಿಕೋನಗಳು ತೀರ ಭಿನ್ನವಾಗಿವೆ. ಎರಡರ ಉಪದೇಶವನ್ನು ದಾಸಬೋಧೆಯಲ್ಲಿ ಮಾಡಲಾಗಿದೆ. ಆದರೆ ಆ ಎರಡನ್ನೂ ಸಮಾವಿಷ್ಟ ಮಾಡಬೇಕೆಂಬ ಆಧ್ಯಾತ್ಮ ವಿಚಾರವು ಮಂಡಿಸಲ್ಪಟ್ಟಿಲ್ಲ. ನಿವೃತ್ತಿಯನ್ನು ಏಕೆ ಸ್ವೀಕರಿಸಬೇಕು, ಇದನ್ನು ಸ್ಪಷ್ಟಪಡಿಸಲಾಗಿದೆ. ಆದರೆ ಪ್ರವೃತ್ತಿಯನ್ನು ಏಕೆ ಸ್ವೀಕರಿಸಬೇಕೆಂಬುದರ ಬಗೆಗೆ ಬಿಚ್ಚಿ ತೋರಿಸಿಲ್ಲ. ಈ ವಿಷಯವಾಗಿ ನಾವು ಸಮರ್ಥರಿಗೆ ದೋಷ ಕೊಡಬೇಕೆಂದೇನಿಲ್ಲ. ಅವರ ಗಮನವು ಇಂಥ ತಾತ್ತ್ವಿಕ ಪಾತಳಿಯಿಂದ ಸಮನ್ವಯದತ್ತ ಹೋಗಿಲ್ಲ. ಇಷ್ಟನ್ನು ನಾವು ಹೇಳಬಹುದು. ಅವರ ಸ್ವಂತದ ಜೀವನವು ಕೊನೆಯವರೆಗೆ ಸಂಪನ್ನವಾಗಿತ್ತು. ಜನರ ಕರುಣೆ ಅಂತಃಕರಣದಲ್ಲಿ ತುಂಬಿದ್ದರಿಂದ ಪಾರಮಾರ್ಥದ ಕಠಿಣಮಾರ್ಗವು ದುರ್ಬಲರಿಗೆ ಸಹಿಸುವುದಿಲ್ಲವೆಂಬುದು ಸ್ಪಷ್ಟವಾಗಿ ಕಂಡಿದ್ದರಿಂದ ವ್ಯಾವಹಾರಿಕ ಪಾತಳಿಯ ಮೇಲೆ ಒಂದು ಅನಿವಾರ್ಯ ಆವಶ್ಯಕತೆ ಎಂದು ಅವರು ಪ್ರಯತ್ನವಾದದ, ರಾಜಕಾರಣದ, ಎಲ್ಲ ವಿಷಯಗಳ ಜಾಗೃತೆಯ, ನಿಷ್ಠಾಪೂರ್ವಕ ಪ್ರಯತ್ನದ ಮತ್ತು ಲೋಕ ಸಂಗ್ರಹದ ಉಪದೇಶ ಮಾಡಿದ್ದಾರೆಂದು ಹೇಳಬೇಕಾಗುತ್ತದೆ.

ಸಮರ್ಥರ ಬಹಳಷ್ಟು ಲೇಖನಗಳು ಬಿಡಿಯಾಗಿವೆ. ಕ್ರಮಬದ್ಧ, ಸುಸಂಗತ, ಸುಸಂಬದ್ಧ ಆಧ್ಯಾತ್ಮ ವಿಚಾರಗಳನ್ನು ಅವರು ಮಂಡಿಸಿದ್ದು ಕಾಣುವುದಿಲ್ಲ. ಇದಕ್ಕೆ ಒಂದೆರಡು ಅಪವಾದಗಳನ್ನು ತೋರಿಸಲು ಬರುತ್ತದೆ. ದಾಸಬೋಧೆಯಲ್ಲಿ ಮೊದಲಿನ ಆರು ಇಲ್ಲವೆ ಏಳು ದಶಕಗಳು, ಎಂಟನೆಯ ಜ್ಞಾನದಶಕ, ಇಲ್ಲವೆ ಆತ್ಮಾರಾಮ ಮತ್ತು ಪಂಚಸಮಾಸಿ ಇಂಥ ಪ್ರಕರಣಗಳು, ಅವರ ಇತರ ಎಲ್ಲ ಲೇಖನಗಳು ಆಯಾ

ಸಮಯದ ಆವಶ್ಯಕತೆಗನುಸಾರ, ಶಿಷ್ಯರು ಕೇಳಿದ್ದ ಆಯಾ ಸಮಯದ ಪ್ರಶ್ನೆಗಳನು ಸಾರ ಅಥವಾ ಸಮರ್ಥರು ಸ್ವಂತವೇ ಯಾವ ವೇಳೆಯಲ್ಲಿ ಒಂದಿಷ್ಟು ವಿಚಾರಗಳನ್ನು ಮಂಡಿಸಬೇಕೆಂದಾಗ, ಆ ಸಮಯದಲ್ಲಿ ಸಹಜ ಪ್ರೇರಣೆಯಿಂದ ನಿರ್ಮಾಣವಾಗಿರುತ್ತವೆ. ಆಧ್ಯಾತ್ಮದಲ್ಲಿಯ ಎಲ್ಲ ವಿಷಯಗಳು ಸಮರ್ಥರ ಲೇಖನಗಳಲ್ಲಿ ಬಂದಿರುತ್ತವೆ ಇಲ್ಲವೆ ವಿವಿಧ ಸಿದ್ಧಾಂತಗಳಲ್ಲಿಯ ಪರಸ್ಪರ ಸಮನ್ವಯವನ್ನು ಮತ್ತು ಪರಸ್ಪರ ವಿರೋಧವನ್ನು ಅವರು ತೋರಿಸಿದ್ದಾರೆಂದು ಕಂಡು ಬರುವುದಿಲ್ಲ. ಖಂಡನೆ ಮಂಡನೆ ಈ ಭಾಗವೇ ಅವರ ಲೇಖನದಲ್ಲಿಲ್ಲ. ಕೆಲವು ವಿಷಯಗಳು ವಿವಿಧ ಸಮಾಸಗಳಲ್ಲಿ ಮತ್ತೆ ಮತ್ತೆ ಬಂದಿವೆ. ಆ ಸಮಯ ಪುನರುಕ್ತಿಯಾದ ಬಗೆಗೆ ತಿಳಿಯುತ್ತದೆ. ಒಂದೇ ವಿಷಯದ ಮೇಲೆ ಅನೇಕ ಸಲ ಬರೆದಿರುವುದರಿಂದ ಈ ಪುನರುಕ್ತಿ ಗಟ್ಟಿಯಾಗಿದೆಯೆಂದು ತಿಳಿಯಬೇಕು. ಒಂದೇ ವಿಷಯದ ಮೇಲೆ ಪುನಃ ಪುನಃ ಏಕೆ ಬರೆಯಲ್ಪಟ್ಟಿತು ಈ ಪ್ರಶ್ನೆ ಏಳುತ್ತದೆ. ಶಿಷ್ಯರು ಪ್ರಶ್ನೆಗಳನ್ನು ಕೇಳಿದ್ದರಿಂದ ಹೀಗೆ ಆಗಿರಬಹುದೆಂದೆನಿಸುತ್ತದೆ.

ಸಮರ್ಥರ ಪ್ರತಿಪಾದಿತ ವಿಷಯದಲ್ಲಿ ಸರಳ ಕೈ ಹಾಕುವ ಹಾಗೂ ನನ್ನ ಹೇಳಿಕೆಯನ್ನು ಸ್ಪಷ್ಟವಾಗಿ ಮಂಡಿಸುವಂತಿದೆ. ಆದ್ದರಿಂದ ಅದರಲ್ಲಿ ಎಲ್ಲಿಯೂ ಸಂದಿಗ್ಧತೆಯಿಲ್ಲ. ಪರಸ್ಪರ ವಿರೋಧಿ ಇಲ್ಲವೆ ವಿಸಂಗದಂಥ ವಿಚಾರಗಳು ಎಲ್ಲಿಯೂ ಬರುವುದಿಲ್ಲ. ವಿವಿಧ ಹಿನ್ನೆಲೆಯಲ್ಲಿ ಮಾಡಿದ ವಿವೇಚನೆಗಳು ಬರುತ್ತವೆ. ಅದರ ಉಲ್ಲೇಖವನ್ನು ಈ ಮೊದಲು ಮಾಡಲಾಗಿದೆ. ವೈರಾಗ್ಯಪರ ಹಾಗೆಯೇ ಪ್ರಯತ್ನಪರ ಇಲ್ಲವೆ ಪರಮಾರ್ಥಪರ ಹಾಗೆಯೇ ಲೋಕಸಂಗ್ರಹಪರ ಇಂಥ ವಿಚಾರಗಳು ಅದಕ್ಕಾಗಿ ಬಂದಿರುತ್ತವೆ. ಆದರೆ ಆ ಲೇಖನಗಳನ್ನು ಅವರು ಬೇರೆ ಬೇರೆ ಸಮಯದಲ್ಲಿ ಬರೆದಿರಬೇಕೆಂದು ತೋರುತ್ತದೆ. ಸಮರ್ಥರ ಆಧ್ಯಾತ್ಮಿಕ ವಿಚಾರ ವಿಶ್ವದ ನಿರ್ಮಾಣ ಹೇಗೆ ಆಯಿತೆಂಬುದನ್ನು ನಿರ್ಧರಿಸಲು ಬರುವುದಿಲ್ಲ. ಅದಕ್ಕಾಗಿ ಅವಶ್ಯಕವಾದ ಮಾಹಿತಿಯು ದೊರೆತಿಲ್ಲ. ಒಂದಿಷ್ಟು ಸಂಸ್ಕೃತವನ್ನು ಅವರು ಅಭ್ಯಾಸ ಮಾಡಿರಬಹುದೆಂದು ತರ್ಕಿಸಬಹುದು. ಆದರೆ ಇದಕ್ಕಿಂತ ಅವರು ಸಾಕಷ್ಟು ಶ್ರವಣ ಮಾಡಿರಬೇಕು. ಅವರು ನಿಜವಾದ ಅರ್ಥದಲ್ಲಿ ಬಹುಶ್ರುತರಾಗಿದ್ದರು. ಈ ಶ್ರವಣದಲ್ಲಿ ಅವರು ಜೀವನದಲ್ಲಿ ಪಡೆದ ಅನುಭವಗಳು ಸೇರಿರಬೇಕು. ಸಮರ್ಥರು ಪರಮಾರ್ಥಿ ಇದ್ದರೂ ಕೂಡ ಸ್ವಭಾವದಿಂದ ಅವರ ಮನಸ್ಸು ವಾಸ್ತವತೆಯನ್ನು ಎದುರಿಸುವಂಥದ್ದು ಹಾಗೂ ಆ ಅವಲೋಕನದಲ್ಲಿ ಏನನ್ನಾದರೂ ಗ್ರಹಣ ಮಾಡುವಂಥದ್ದು ಇತ್ತು. ಅವರ ಈ ವ್ಯಕ್ತಿತ್ವದಲ್ಲಿಯ ವೈಶಿಷ್ಟ್ಯತೆಯಿಂದ ಶ್ರವಣದಲ್ಲಿಯ ಮತ್ತು ವಾಚನದಲ್ಲಿಯ ಕೆಲವಿಚಾರಗಳ ಮುದ್ರೆ ಅವರ ಮನಸ್ಸಿನ ಮೇಲೆ ಮೂಡಿದವು. ಅವರ ಅಹರ್ನಿಶಿ ಚಿಂತನದ, ಸ್ವತಂತ್ರ ದೃಷ್ಟಿಕೋನದ ಮತ್ತು ನಿತ್ಯ ಅವಲೋಕನದ ಪ್ರಭಾವವು ಅವುಗಳಲ್ಲಿ ತುಂಬಿತ್ತು. ಸಮರ್ಥರ ಈ ಅವಲೋಕನ ಹಾಗೂ ಸಮಾಜ ನಿರೀಕ್ಷಣ ಅತಿಶಯ ಸೂಕ್ಷ್ಮವಾಗಿದ್ದವು. ವಿವಿಧ ವಿಷಯಗಳನ್ನು ಸ್ಪಷ್ಟಪಡಿಸುವಾಗ ಅನೇಕ ಬಗೆಯ ವಿವರಣೆಗಳನ್ನು ಅವರು ಪೂರೈಸಿದ್ದು,

ಆವುಗಳಲ್ಲಿ ಇದರ ಆಧಾರ ನಮಗೆ ತೋರುತ್ತದೆ. ಅವರ ಎಲ್ಲ ಬಹಳಷ್ಟು ಸ್ವತಂತ್ರ ವಿಚಾರಗಳು ಈ ಅವಲೋಕನದಲ್ಲಿ ಮೂಡಿನಿಂತಿವೆ. ಅವರು ಸ್ಪಷ್ಟಪಡಿಸಿದ ಮಹಂತರ, ನಿಸ್ಪೃಹರ ಇಲ್ಲವೆ ಉತ್ತಮ ವ್ಯಕ್ತಿಗಳ ಲಕ್ಷಣಗಳು ಅವರ ಚಿಂತನೆಯಿಂದ ಬಂದಿರುತ್ತವೆ. ಆದರೆ ಚತುರ ರಾಜಕಾರಣಿ ವ್ಯಕ್ತಿಗಳನ್ನು ಜತೆಗೂಡಿಸುವಲ್ಲಿ ಅವರು ಹೇಳಿದ ಸೂಕ್ಷ್ಮ ವಿಚಾರಗಳು, ಅವರು ಜೀವನದಲ್ಲಿ ಪಡೆದ ಪ್ರತ್ಯಕ್ಷ ಅನುಭವಗಳಿಂದ ಹಾಗೂ ಅವರು ಮಾಡಿದ ಸಮಾಜ ನಿರೀಕ್ಷಣೆಯಿಂದ ಬಂದಿರಬೇಕು. ಈ ಎಲ್ಲ ವಿಚಾರಗಳಲ್ಲಿದ್ದ ಸಿಚ್ಚಳ ಐಹಿಕದ ಹಾಗೂ ವಾಸ್ತವತೆಯ ಅಭಿಪ್ರಾಯವನ್ನು ಮರೆ ಮಾಡಲು ಬರುವುದಿಲ್ಲ. ಅವರು ಅಳವಡಿಸಿಕೊಂಡ ಉಪದೇಶದ ಪಾತ್ರದಿಂದ ಈ ಎಲ್ಲ ವಿಚಾರಗಳಿಗೆ ಒಂದು ಖಚಿತ ಆಕಾರ ಬಂದಿದೆ. ಅದರಿಂದ ಅವರ ಲೇಖನಗಳು ಒಂದು ವಿಶಿಷ್ಟ ಸ್ವರೂಪ ಪಡೆದಿವೆ.

ಉಪದೇಶದ ಪಾತ್ರವೆಂದು ಈಗ ಹೇಳಿದೆ. ಸಮರ್ಥರ ಲೇಖನಗಳಲ್ಲಿ ಅವರ ಹಾಗೂ ಈ ಭೂಮಿಕೆಯ ಅನುಭವಗಳು ಅನೇಕ ಸ್ಥಳಗಳಲ್ಲಿ ಬರುತ್ತವೆ. ಕರುಣಾಷ್ಟಕಗಳ ಹಾಗೂ ಇತರ ಕೆಲವು ಬಿಡಿ ರಚನೆಗಳನ್ನು ಬಿಟ್ಟರೆ ಬೇರೆಡೆ ಎಲ್ಲ ಸ್ಥಳಗಳಲ್ಲಿ ಈ ಉಪದೇಶಕನ ಪಾತ್ರದಲ್ಲಿ ಸಮರ್ಥರು ತಮ್ಮ ವಿಚಾರಗಳನ್ನು ಬರೆಯುತ್ತಿದ್ದರು. ಮನೋಬೋಧೆಯನ್ನು ಬರೆಯುವುದನ್ನು ಗಮನಿಸಿದರೆ ಸ್ವಂತ ಮನಸ್ಸಿನಲ್ಲಿ ಅದೇನೇ ಇರಲಿ, ಆದರೆ ಉಪದೇಶಿಸುವ, ವಿವರಿಸುವ ಭೂಮಿಕೆಯಿದೆ. ಸಮರ್ಥರು ತಮ್ಮ ಲೇಖನಗಳಲ್ಲಿ ಶ್ರೀರಾಮನ ಭಕ್ತಿ ಇಲ್ಲವೆ ಸೇವಕ, ಗುರುವಿನ ಜಿಜ್ಞಾಸುಶಿಷ್ಯ ಇಂಥ ಪಾತ್ರವನ್ನು ಪ್ರಾರಂಭದ ಕೆಲ ಸಮಯ ಪಡೆದಿದ್ದಾರೆ. ಆದರೆ ಅನಂತರ ಕೊನೆಯವರೆಗೆ ಅವರು ಓರ್ವ ಸಮಾಜ ಶಿಕ್ಷಕನೆಂದು ವ್ಯವಹರಿಸಿದ್ದಾರೆ. ಉಪದೇಶಿಸುವುದು, ವಿಚಾರಗಳನ್ನು ತಿಳಿ ಹೇಳುವುದು ಆಚರಣೆಯ ದಿಶೆಗಳನ್ನು ತೋರಿಸುವುದು, ಹಿತಾಹಿತಗಳನ್ನು ವಿವರಿಸಿ ಹೇಳುವುದು ಇವೇ ಕೆಲಸಗಳನ್ನು ಅವರು ಇಡೀ ಆಯುಷ್ಯ ಮಾಡಿದರು. ಅದೇ ರೀತಿಯಲ್ಲಿ ತಮ್ಮ ಎಲ್ಲ ಲೇಖನಗಳನ್ನು ಬರೆದರು. ಶಿಷ್ಯರಿಗೆ ಧೈರ್ಯ ಹೇಳುವುದು, ನಿರ್ವಹಿಸಿಕೊಂಡು ಹೋಗುವುದು, ಆಶ್ವಾಸನೆ ಕೊಡುವುದು, ಅವರ ಆತ್ಮವಿಶ್ವಾಸವನ್ನು ಜಾಗೃತಗೊಳಿಸುವುದು ಹಾಗೂ ಅದನ್ನು ಬೆಳೆಸುವುದು, ಅಪಾಯದ ಸ್ಥಳಗಳಲ್ಲಿ ಅವರನ್ನು ಎಚ್ಚರಿಸುವುದು ಇಂಥ ಎಲ್ಲ ಪ್ರಸಂಗಗಳು ಅವುಗಳಲ್ಲಿ ಬರುತ್ತವೆ.

ಸಮರ್ಥರ ತತ್ವಜ್ಞಾನಪರ ಲೇಖನಗಳ ಬಹಳಷ್ಟು ಸ್ಥಾನಗಳಲ್ಲಿ ಅವರದು ಇದೇ ಪಾತ್ರವಿದೆ. ಒಂದಿಷ್ಟು ಸಿದ್ಧಾಂತಗಳನ್ನು ಕೇವಲ ತಟಸ್ಥ ರೀತಿಯಲ್ಲಿ ಮಂಡಿಸಿ ತೋರಿಸಬೇಕೆಂದು ಅವರು ತಮ್ಮ ಲೇಖನಗಳನ್ನು ಬರೆದಿಲ್ಲ. ಆದರೆ ಆ ಸಿದ್ಧಾಂತ ಗಳನ್ನು ಶಿಷ್ಯರಿಗೆ ತಿಳಿಸಿಕೊಡಬೇಕೆಂದು ಬರೆಯುತ್ತಿದ್ದರು. ಪಂಡಿತರ ಜಗತ್ತಿನಲ್ಲಿ ತಮ್ಮ ಗ್ರಂಥಗಳಿಗೆ ಏನಾದರೂ ಒಂದು ಮಾನ್ಯತೆ ದೊರೆಯಲಿ ಎಂಬ ರೀತಿಯ ಆಸೆ ಸಮರ್ಥರ ಮನಸ್ಸಿನಲ್ಲಿ ಎಂದೂ ಬಂದಿರಲಿಕ್ಕಿಲ್ಲ. ಅವರ ಮನಸ್ಸಿನ ಬಯಕೆ ಆ ದಿಸೆ ಯಲ್ಲಿ ಎಂದೂ ವಿವರಿಸಿರಲಿಕ್ಕಿಲ್ಲ. ಅದು ಅವರ ವ್ಯಕ್ತಿತ್ವವಾಗಿರಲಿಲ್ಲ. ಅವರ

ಕಣ್ಣೆದುರು ಸದಾಕಾಲ ಅಜ್ಞರು, ಜಿಜ್ಞಾಸುಗಳು ಇಂಥ ಸಾಮಾನ್ಯ ಸಮಾಜವಿದೆ. ಈ ಸಮಾಜಕ್ಕೆ ಯಾವುದಾದರೂ ಮಾರ್ಗದರ್ಶನ ದೊರೆಯಬೇಕೆಂದು ಅವರ ಮನಸ್ಸಿನ ಸಂಕಲ್ಪವಾಗಿತ್ತು. ಪ್ರಜ್ಞಾವಂತ ಪುರುಷರಿಗೆ ಇದೊಂದು ಕರ್ತವ್ಯವೆಂದು ಅವರು ಭಾವಿಸಿರಬೇಕು. ಗುರುವಿನ ಭೂಮಿಕೆಯನ್ನು ಸ್ವೀಕರಿಸುವಲ್ಲಿ ಸ್ವಂತ ವಿಚಾರದ ಬಗೆಗೆ ಒಂದು ಖಚಿತವಾದ ಆತ್ಮವಿಶ್ವಾಸ ಇರಬೇಕಾಗುತ್ತದೆ. ಅದು ಸಮರ್ಥರಲ್ಲಿ ಪೂರ್ಣವಾಗಿ ಇತ್ತು. ಮತ್ತೆ ಅದು ಅವರ ನುಡಿಯಲ್ಲಿ ಎಲ್ಲೆಡೆ ತುಂಬಿ ಕೊಂಡಿತ್ತು. ಆ ದೃಷ್ಟಿಯಿಂದ ಅವರೊಬ್ಬ 'ಸಮರ್ಥ' ಉಪದೇಶಕರು. ಅವರು ಸ್ವತಃ ರಾಮದಾಸ ಎಂದು ಹೇಳಿಕೊಳ್ಳುತ್ತಿದ್ದರು. ಎಂತಲೇ ದಾಸಬೋಧೆ ಗ್ರಂಥನಾಮ ದಲ್ಲಿ 'ದಾಸ' ಈ ಪದ ಬಂದಿದೆ. ಆದರೆ ಆ ಸಮಯದಲ್ಲಿ ಈ ದಾಸರು ತಮ್ಮ ಶಿಷ್ಯ ರಿಗೆ ಮಾಡಿದ ಶ್ರೀರಾಮನ ಬೋಧೆಯೇ ಈ 'ದಾಸಬೋಧೆ'ಯು ಮತ್ತು ಅದೇ ಆ ಗ್ರಂಥದ ನಿಜರೂಪ. ಭಕ್ತಿಯ ಸ್ವರೂಪವನ್ನು ಇಲ್ಲವೆ ಆಧ್ಯಾತ್ಮದ ಸಿದ್ಧಾಂತವನ್ನು ಸಾಧಕ ಬಾಧಕ ಪ್ರಮಾಣದಿಂದ ಮಂಡಿಸಿ ತೋರಿಸುವ ಗ್ರಂಥ ಇದಲ್ಲ. ಆದರೆ ಆ ಸಿದ್ಧಾಂತಗಳ ಆಧಾರದಿಂದ ಗುರುಗಳು ತಮ್ಮ ಶಿಷ್ಯರಿಗೆ ಮಾಡಿದ ಆ ಉಪದೇಶ ಗಳಿವೆ.

ಸಮರ್ಥರ ಬಹಳಷ್ಟು ರಚನೆಗಳು ಗುರು ಹಾಗೂ ಶಿಷ್ಯರ ಇಲ್ಲವೆ ಹೇಳುವವರ ಹಾಗೂ ಕೇಳುವವರ ಸಂವಾದ, ಈ ಮಾಧ್ಯಮದಿಂದ ರೂಪಗೊಂಡಿವೆ. ಇವು ಆ ದೃಷ್ಟಿಯಿಂದ ಸುಂದರವಾಗಿವೆ. ಅವರು ವಿದ್ವಾಂಸನ ಭೂಮಿಕೆಯಿಂದ ಆಧ್ಯಾತ್ಮದ ವಿವೇಚನೆಯನ್ನು ಬಹಳಷ್ಟು ಕಡಿಮೆ ಸ್ಥಳಗಳಲ್ಲಿ ಮಾಡುತ್ತಾರೆ. ಬಹಳಷ್ಟು ಸ್ಥಳ ಗಳಲ್ಲಿ ಅವರು ಶಿಷ್ಯರಿಗೆ ವಿಚಾರ ತಿಳಿಸಿ ಹೇಳುತ್ತಾರೆ. ಅವರಿಗೆ ಮಾರ್ಗದರ್ಶನ ಮಾಡುತ್ತಾರೆ. ಅವರ ಲೇಖನ ಶೈಲಿಯಲ್ಲಿ ಕೂಡ ಒಂದು ವಿಶಿಷ್ಟ ಸ್ವರೂಪವು ದೊರೆತಿರುತ್ತದೆ. ಶಿಷ್ಯರ ಅಜ್ಞಾನದ ಬಗೆಗೆ ಅವರಿಗೆ ಅರಿವಿದೆ. ಆ ರೀತಿ ಅವರ ಬಗೆಗೆ ಕಳವಳ ಹಾಗೂ ಸಹಾನುಭೂತಿಯಿದೆ. ಶಿಷ್ಯರು ಸಂದೇಹಗಳ ಬಗೆಗೆ ಕೇಳುತ್ತಾರೆ. ಅದಕ್ಕೆ ಸಮರ್ಥರು ಉತ್ತರಿಸುತ್ತಾರೆ. ಕೆಲವು ವೇಳೆ ಶಿಷ್ಯರಾಗಿ ಗುರುಗಳೇ ಸಂದೇಹ ನಿರ್ಮಿಸಿಕೊಂಡು ಅದನ್ನು ನಿವಾರಿಸಿಕೊಳ್ಳುತ್ತಾರೆ. ಗುರು ಹಾಗೂ ಶಿಷ್ಯ ಇವರಲ್ಲಿಯ ಸಂವಾದಗಳ ಅನೇಕ ಪ್ರಕಾರಗಳು ಸಮರ್ಥರ ಸಾಹಿತ್ಯದಲ್ಲಿ ನಮಗೆ ಕಂಡುಬರು ತ್ತದೆ. ಕೆಲವೆಡೆ ಶಿಷ್ಯರು ಪ್ರಾರಂಭದಲ್ಲಿಯೇ ಪ್ರಶ್ನೆ ಕೇಳಿದ್ದಾರೆ ಹಾಗೂ ಗುರುಗಳು ಆ ನಿಮಿತ್ತದಿಂದ ಒಂದಿಷ್ಟು ವಿಷಯಗಳ ಸವಿಸ್ತಾರ ವಿವೇಚನೆಯನ್ನು ಮಾಡಿದ್ದಾರೆ. ಆದರೆ ಕೆಲವೆಡೆ ಒಂದು ಓವಿಯಲ್ಲಿ ಪ್ರಶ್ನೆ ಹಾಗೂ ಮುಂದಿನ ಓವಿಯಲ್ಲಿ ಉತ್ತರ ಹೀಗೆ ರಚನೆಗಳು ಬಂದಿವೆ. ಕ್ವಚಿತ್ತಾಗಿ ಮೊದಲಿನ ಓವಿಗಳಲ್ಲಿ ಒಂದೊಂದು ಚರಣ ದಲ್ಲಿ ಒಂದೊಂದು ಪ್ರಶ್ನೆ ಹಾಗೂ ಮುಂದಿನ ಓವಿಗಳಲ್ಲಿ ಆ ಎಲ್ಲ ಉತ್ತರಗಳು ಬಂದಿದ್ದು ಕಂಡುಬರುತ್ತದೆ.

ಶಿಷ್ಯರು ಪ್ರಶ್ನೆ ಕೇಳಿಲ್ಲ ಆದರೆ ಅದರ ಸ್ಥಾನದಲ್ಲಿ ತಾವು ಹೇಳಿದ ವಿಚಾರಗಳು ಸರಿಯಾಗಿ ಬಂದಿಲ್ಲ ಎಂದು ತಿಳಿದುಬಂದಾಗ ಗುರುಗಳು ತಾವೇ ಆಗಿ ..ಅವರಿಗೆ

ಉಪದೇಶ ಮಾಡಲು ಆರಂಭಿಸಿದ್ದಾರೆ. ಇಂಥ ವರ್ಣನೆಯನ್ನು ಆತ್ಮಾರಾಮ ಪ್ರಕರಣದ ಆರಂಭದಲ್ಲಿ ಮಾಡಲಾಗಿದೆ. ಅಲ್ಲಿ ಗುರುಗಳು ಶಿಷ್ಯರಿಗೆ ಹೇಳುತ್ತಾರೆ: "ನಾನು ನಿನಗೆ ಅತ್ಯುಚ್ಚ ಸ್ಥಾನ ಕೊಡುವೆ. ನಿನ್ನ ಹತ್ತಿರ ಯಾವುವು ನಾಶಕಾರಕ ಇವೆಯೋ ಅವುಗಳನ್ನು ನನಗೆ ನೀಡು." ಗುರುಗಳ ಈ ಹೇಳಿಕೆಗೆ ಶಿಷ್ಯರು ಒಪ್ಪಿಗೆ ನೀಡುತ್ತಾರೆ ಮತ್ತು ಗುರುವಿನ ಮಾತಿನ ಎಳೆ ಹಿಡಿದು "ನಾಶಕಾರಕ ಏನನ್ನು ಹಾಕಬೇಕು! ಅದನ್ನು ನನಗೆ ಸ್ವಾಮಿಗಳೇ ಹೇಳಬೇಕು!" ಎಂದು ಕೇಳುತ್ತಾರೆ. ಇಲ್ಲಿ "ಮಾಯಾತ್ಮಕವೆಲ್ಲ ನಾಶಕಾರಿ" ಎಂದು ಹೇಳಿ ಗುರುಗಳು ಆ ಮಾಯೆಯ ಸ್ವರೂಪ ವನ್ನು ಸ್ಪಷ್ಟಪಡಿಸುತ್ತಾರೆಂಬ ವರ್ಣನೆಯನ್ನು ಸಮರ್ಥರು ಮಾಡುತ್ತಾರೆ. ಇಂಥ ಪ್ರಶ್ನೋತ್ತರಗಳಲ್ಲಿ ನಾಟಕೀಯತೆಯು ಸ್ಪಷ್ಟವಾಗಿದೆ. ಗುರು ಹಾಗೂ ಶಿಷ್ಯ ಇವರ ಸಂವಾದದ ಇಂಥ ಬೇರೆ ಬೇರೆ ಸ್ವರೂಪಗಳು ನಮಗೆ ದಾಸಬೋಧೆಯಲ್ಲಿಯೂ ದೊರೆಯುತ್ತವೆ. ಈ ಸಂವಾದಗಳ ಕೆಲವು ಸ್ಥಳಗಳಲ್ಲಿ ಒಂದು ಬಗೆಯ 'ಹಜರ ಜವಾಬಿ'ನ* ರೀತಿಯಿದೆ. ಆದರೆ ಆ ಸಮಯದಲ್ಲಿ ಜರುಗುವ ಪ್ರಶ್ನೋತ್ತರಗಳಲ್ಲಿ ಖಂಡತುಂಡ ರೀತಿ ಕಂಡುಬರುತ್ತದೆ. ಈ ವಿಶೇಷತೆಯಿಂದ ಅದರ ಆಕರ್ಷಣೆ ಖಚಿತ ವಾಗಿ ತುಂಬಿಬರುತ್ತದೆ. ಇಲ್ಲಿಯ ಕೆಲವು ಪ್ರಶ್ನೋತ್ತರಗಳು ಅತ್ಯಂತ ವಾಸ್ತವ ರೂಪದಲ್ಲಿ ಬಂದಿವೆ. ಅವುಗಳಲ್ಲಿಯ ಕೆಲವು ಭಾಗಗಳನ್ನು ಪ್ರತ್ಯಕ್ಷ ನಡೆದ ಸಂವಾದ ಗಳಿಂದಲೇ ತೆಗೆದುಕೊಂಡಿರಬೇಕೆಂದು ಮನಸ್ಸಿನಲ್ಲಿ ಮೂಡಿಹೋಗುತ್ತದೆ. ಸಮರ್ಥರ ಅಕ್ಕಪಕ್ಕದಲ್ಲಿ ಶಿಷ್ಯರ ಗುಂಪು ಇರುವುದು ಅಸಾಧ್ಯವೆಂದು ತಿಳಿಯ ಲಾಗದು. ಈ ಸಂವಾದಗಳಲ್ಲಿ ಪೂರ್ವಪಕ್ಷ ಉತ್ತರಪಕ್ಷ ಈ ಭಾಗಗಳು ಮಾತ್ರ ಸಹಸಾ ಕಾಣುವುದಿಲ್ಲ. ಪೂರ್ವಪಕ್ಷ ಹಾಗೂ ಉತ್ತರಪಕ್ಷಗಳನ್ನು ಮಂಡಿಸಲು ಎರಡೂ ಬದಿಯ ವ್ಯಕ್ತಿಗಳು ಬಹಳಷ್ಟು ಅರಿತವರು ಮತ್ತು ಸಮಬಲದವರು ಇರಬೇಕಾಗುತ್ತದೆ. ಸಮರ್ಥರ ಲೇಖನಗಳ ಎಲ್ಲ ಸ್ಥಳಗಳಲ್ಲಿ ಮಾತುಗಾರನಾದ ಗುರುವೇ ಈ ಜ್ಞಾನಿಯಾಗಿದ್ದಾನೆ. ಆದರೆ ಶ್ರೋತೃಗಳಾದ ಶಿಷ್ಯರು ಜಿಜ್ಞಾಸು ಗಳಾಗಿದ್ದಾರೆ. ಆದ್ದರಿಂದ ಅವರಲ್ಲಿಯ ಎಲ್ಲ ವಿವೇಚನೆಗಳು, ಗುರುಗಳು ತಮ್ಮ ಅಜ್ಞಾನಿಯಾದಂಥ ಶಿಷ್ಯರಿಗೆ ತಿಳಿಸಿಕೊಡುವ ರೀತಿಯಲ್ಲಿ ಹೇಳಿದಂತಾಗಿವೆ.

ತಾತ್ವಿಕ ವಿವೇಚನೆಯನ್ನು ಮಾಡುತ್ತಿರುವಲ್ಲಿ ಉತ್ತಮ ಶಬ್ದಚಿತ್ರಗಳನ್ನು ರೇಖಿಸುವುದು ಸಮರ್ಥರ ಒಂದು ವೈಶಿಷ್ಟ್ಯವಾಗಿದೆ. ಬದ್ಧ, ಮುಮುಕ್ಷು, ವಿರಕ್ತ, ನಿಸ್ಪೃಹ, ಮಹಂತ, ಉತ್ತಮ ಪುರುಷ ಇವರ ಬಗೆಗೆ ಮಾಡಿದ ವರ್ಣನೆಗಳು ಈ ದೃಷ್ಟಿಯಿಂದ ನೋಡುವಂತಿದೆ. ಮೂರ್ಖ,ಕಲಿತ ಮೂರ್ಖ ಇಲ್ಲವೆ ದರಿದ್ರ ಪುರುಷರ ಚಿತ್ರಗಳು ಬೇರೆ ರೀತಿಯಲ್ಲಿವೆ. ಮಾಯೆಯ ಮಿಥ್ಯತ್ವ, ಮೃತ್ಯುಲೋಕದ ನಶ್ವರತೆ, ಕಾಲದ ಸರ್ವಭಕ್ಷತೆ ಇವುಗಳ ವರ್ಣನೆಯಲ್ಲಿಯೂ ಶಬ್ದಚಿತ್ರಗಳನ್ನು ಮೂಡಿಸುವ ಆ ಶೈಲಿ ತುಂಬಿ ಬಂದಿದೆ. ವಾಸ್ತವಿಕವಾಗಿ ಇಂಥ ಶಬ್ದಚಿತ್ರಗಳು

---

* ಪ್ರತ್ಯಕ್ಷ ಉತ್ತರ, ತತ್ಕಾಲ ಉತ್ತರಿಸುವ ರೀತಿ.

ಲಲಿತ ಸಾಹಿತ್ಯದ ಗಶೇಷತೆಗಳು. ಆದರೆ ಸಮರ್ಥರ ತಾತ್ತ್ವಿಕ ಹಾಗೂ ವಿವೇಚನಪರ ಸಾಹಿತ್ಯದಲ್ಲಿ ನಮಗೆ ಇಂಥ ಚಿತ್ರಗಳು ದೊರೆಯುತ್ತವೆ. ಅವರ ಆಯಾ ವಿವೇಚನೆಗಳು ಇದರಿಂದ ಆಕರ್ಷಕವಾಗಿವೆ. ಅವುಗಳ ಜತೆ ಅವರ ಅನುಭವಗಳಿಗೆ ಒಂದಿಷ್ಟು ಬಲ ಬರುತ್ತದೆ. ಸಮರ್ಥರ ಲೋಕ ವ್ಯವಹಾರದ ನಿರೀಕ್ಷಣೆಯು ಬಹಳ ಸೂಕ್ಷ್ಮವಾಗಿತ್ತು. ಆ ನಿರೀಕ್ಷಣೆಯ ಉಪಯೋಗವು ಇಂಥ ಶಬ್ದ ಚಿತ್ರಗಳ ವಿವರಣೆ ತುಂಬುವುದರಲ್ಲಿ ಆಗಿದೆ. ಕೆಲವು ಸಮಯ ಈ ವಿವರಣೆಗಳು ಆವಶ್ಯಕತೆಗಿಂತ ಹೆಚ್ಚಾಗುತ್ತವೆ. ಕೆಲವೆಡೆ ಇನ್ನೂ ಅತಿಯಾಗುತ್ತವೆ. "ಆತ ಒಬ್ಬ ಮೂರ್ಖ!" ಇಲ್ಲವೆ "ಪ್ರತ್ಯೇ ಎಂದೆನಬೇಡ!" ಇಲ್ಲವೆ "ಇಲಿ ಹೇಳುವುದು ಇದು ನನ್ನ ಮನೆ!" ಇಂಥ ಕೆಲ ನಿಶ್ಚಿತ ಚರಣಗಳ ಹಾಗೂ ಶಬ್ದಸಂಹಿತೆಯ ಆವೃತ್ತಿಗಳನ್ನು ಬೆನ್ನ ಹಿಂದೆಯೇ ಮಾಡುತ್ತ ಹೋಗಿದ್ದಾರೆ. ಅದರಲ್ಲಿ ಪ್ರತಿ ಸಮಯ ಹೆಚ್ಚಿನ ವಿವರಣೆ ತುಂಬುತ್ತ ಹೋಗಿದ್ದಾರೆ. ಆ ಅಪಾರ ವಿವರಣೆ ಕಂಡು ನಾವು ತಕ್ಷಣ ಆಶ್ಚರ್ಯಚಕಿತರಾಗುತ್ತೇವೆ. ಆದರೆ ಸಾಹಿತ್ಯದ ದೃಷ್ಟಿಯಲ್ಲಿ ಇಂಥ ವರ್ಣನೆಗಳಲ್ಲಿ ಬರುವ ಪುನರುಕ್ತಿಗಳಿಂದ ಮತ್ತು ಒಂದೇ ರೀತಿಯಿಂದ ನಮ್ಮ ಮನಸ್ಸಿನ ಮೇಲೆ ಅಂಥ ಪರಿಣಾಮವಾಗುವುದಿಲ್ಲ. ಈ ವಿವರಣೆಗಳಲ್ಲಿ ಕೆಲವು ಸಮಯ ಒಂದಿಷ್ಟು ಕೋಷ್ಟಕದ ಇಲ್ಲವೆ ದೀರ್ಘಪಟ್ಟಿಯ ಸ್ವರೂಪ ಬರುತ್ತವೆ. ಆದ್ದರಿಂದ ಸಮರ್ಥರು ಯಾರಿಗಾಗಿ ಈ ಎಲ್ಲವನ್ನು ಹೇಳುತ್ತಲಿದ್ದಾರೆ, ಆ ಶಿಷ್ಯರು ಅತೀ ಬಾಲಬುದ್ಧಿಯವರಿರಬೇಕು ಎಂಬ ವಿಚಾರ ಮನಸ್ಸಿನಲ್ಲಿ ಮೂಡಿ ಹೋಗುತ್ತದೆ.

ಆಯಾ ವಿಷಯಗಳಲ್ಲಿ ಅನೇಕ ಬಗೆಯ ವಿವರಣೆಗಳನ್ನು ಮಾಡುವುದಕ್ಕಾಗಿ ಅವಶ್ಯವಿದ್ದ ಶಬ್ದ ಸಂಗ್ರಹವು ಸಮರ್ಥರ ಬಳಿಯಲ್ಲಿದೆ. ಅವರು ತಮ್ಮ ಲೇಖನಗಳಲ್ಲಿ ಉಪಯೋಗಿಸಿದಷ್ಟು ಶಬ್ದಗಳನ್ನು, ಈ ದಾಸೋಪಂತರನ್ನು ಬಿಟ್ಟು ಬೇರೆ ಯಾವ ಕವಿಗಳು ಉಪಯೋಗಿಸಿಕೊಂಡಿಲ್ಲ. ಕಾವ್ಯ ರಚನೆಯಲ್ಲಿಯೂ ಅವರದೊಂದು ಅಧಿಕಾರವಿದೆ. ಓವಿ, ಅಭಂಗ ಮತ್ತು ಅನುಷ್ಟುಭ ಈ ಮೂರೂ ಛಂದಸ್ಸಿನ ಉಪಯೋಗವನ್ನು ಅವರು ಮಾಡಿಕೊಂಡಿದ್ದಾರೆ. ಅದನ್ನು ಸತತವಾಗಿ ಸಹಜತೆಯಿಂದ ಮಾಡಲಾಗಿದೆ. ಆದರೆ ಶಬ್ದಸಂಗ್ರಹವು ಬಹಳಷ್ಟು ಇದ್ದರೂ ಆ ಭಂಡಾರದಿಂದ ಕೇವಲ ಯೋಗ್ಯ ಹಾಗೂ ಸಮರ್ಪಕವಾದಂಥ ಶಬ್ದಗಳ ಆಯ್ಕೆಯನ್ನು ಮಾಡುವ ದಕ್ಷತೆಯನ್ನು ಸಮರ್ಥರು ತೋರಿಲ್ಲ. ಆದರೂ ಕೂಡ ಅಂಥ ಆಯ್ಕೆ ಮಾಡುವುದಕ್ಕೆ ಮನಸ್ಸಿನಲ್ಲಿ ಒಂದಿಷ್ಟು ವಿಚಾರ ಬಂದ ಬಳಿಕ ಅದರ ಪಕ್ವತೆಗೆ ಹಾಗೂ ಆವಿಷ್ಕಾರಕ್ಕೆ, ಸೌಂದರ್ಯ ಪ್ರಾಪ್ತವಾಗುವುದಕ್ಕೆ ಯಾವ ಒಂದು ಬಿಡುವನ್ನು ಕೊಡಬೇಕಾಗುತ್ತದೆಯೋ ಅದನ್ನು ಸಮರ್ಥರು ಎಂದಿಗೂ ಕೊಟ್ಟಂತೆ ಕಾಣುವುದಿಲ್ಲ. ತಮ್ಮ ಲೇಖನಗಳಲ್ಲಿ ಏನಾದರೂ ಕ್ರಿಯಾಡಿಸಬೇಕು, ಏನಾದರೂ ಸಂಸ್ಕಾರವನ್ನಿರಿಯಬೇಕು ಇಂಥ ಪರಿಷ್ಕಾರದ ವಿಷಯವಾಗಿ ಅವರ ಗಮನ ಎಂದೂ ಹೊರಳಿರಲಿಲ್ಲ. ಯಾವ ಸಮಯದಲ್ಲಿ ಯಾವುದು ಮನಸ್ಸಿನಲ್ಲಿ ಬರುವುದೋ, ಅವರು ಅದನ್ನು ಹಾಗೇ ಹೇಳಿ ಬಿಟ್ಟಿದ್ದಾರೆ. ಅದಕ್ಕೆ ಯಾವ ಆಕಾರ ಮೂಡಿತೋ

ಅದೇ ನಿಜ. ಶಬ್ದಗಳ ರೂಪಗಳು ಶುದ್ಧವಾಗಿರಬೇಕೆಂಬುದರ ಬಗೆಗೂ ಅವರ ಗಮನವಿಲ್ಲ. ಛಂದಸ್ಸಿನ ಅನುಕೂಲಕ್ಕಾಗಿ ಆ ಶಬ್ದಗಳನ್ನು ಹೇಗಾದರೂ ಭಗ್ನಗೊಳಿಸಿದ್ದರು ಮತ್ತು ವಿಶೇಷವೆಂದರೆ, ಇಂಥ ಶಬ್ದಭಂಗ ಕಾರ್ಯ ತಮ್ಮ ಕೈಯಿಂದ ಆಗುತ್ತಲಿದೆ ಎಂಬುದು ಕೂಡ ಅವರ ಗಮನದಲ್ಲಿರುತ್ತಿರಲಿಲ್ಲ. ಹಿಂದೆ ಮುಂದೆ ನೋಡದೆ ಇಷ್ಟು ತಪ್ಪಾದ ಶಬ್ದ ರೂಪಗಳನ್ನು ಅವರಂತೆ ಉಪಯೋಗಿಸಿದ ಬೇರೆ ಮರಾಠಿ ಕವಿಗಳನ್ನು ಬಹುಶಃ ಶೋಧಿಸಬೇಕಾಗುತ್ತದೆ. ಸಮರ್ಥರಾದ ಪ್ರಯತ್ನಶೀಲ ಪುರುಷರು ಈ ವಿಷಯವಾಗಿ ಏನಾದರೂ ವಿಶೇಷ ಉದಾಹರಣೆಯನ್ನು ಹೇಳಿಕೊಡಬೇಕಾಗಿತ್ತೆಂಬುದು ತಿಳಿಯದೆ ಇರುವುದಿಲ್ಲ.

ಈ ರೀತಿಯ ದೋಷಗಳು ಸೇರಲಾರದ ಸಮರ್ಥರ ಲೇಖನಗಳು ಅತಿಶಯ ಅರ್ಥಗರ್ಭಿತ, ಸಹಜ ಸುಂದರ ಹಾಗೂ ವಾಚಕರ ಅಂತಃಕರಣವನ್ನು ಕಲಕುವಂತಿವೆ. ಬಹಿರಂಗದಲ್ಲಿ ಯಾವ ದೋಷವಿದ್ದರೂ ಅವರ ಎಲ್ಲ ಲೇಖನಗಳು ಅತೀ ಪರಿಣಾಮಕಾರಕವಾಗಿವೆ ಎಂಬುದನ್ನು ಮರೆಯಲಾಗದು. ಈ ಪರಿಣಾಮಕತೆಯ ಗುಣ ಮುಖ್ಯತಃ ಅವರ ಖಂಡತುಂಡ ಹಾಗೂ ಅನುಭವಪೂರ್ಣ ಉದ್ಗಾರಗಳಲ್ಲಿ ಬರುತ್ತದೆ. ಸಮರ್ಥರು ಬರೆಯುತ್ತಿರುವುದು ತಮ್ಮ ಅಂತರಂಗದಲ್ಲಿ ಉಕ್ಕುವ ಸ್ವಾಭಾವಿಕ ಪ್ರತಿಕ್ರಿಯೆಯಿಂದ. ಈ ಉದ್ಗಾರಗಳಲ್ಲಿ ಕೃತ್ರಿಮತೆಯ ಅಂಶವಿಲ್ಲ. ತಾವು ತಿಳಿಯಬೇಕಾದ ವಿಷಯಗಳಿಗೆ ಅವರು ಯಾವುದೇ ವಿಶೇಷ ರೂಪವನ್ನು ಕೊಡುವ ಪ್ರಯತ್ನವನ್ನು ಮಾಡಿಲ್ಲ. ಅವುಗಳ ಆವಿಷ್ಕಾರದಲ್ಲಿ ಅಡ್ಡ ಪರದೆಗಳಂಥ ಯಾವವೂ ಇಲ್ಲ. ಯಾವುದನ್ನು ಹೇಳಬೇಕಾಗುತ್ತಿತ್ತೋ, ಅದನ್ನು ನೇರವಾಗಿ ಹಾಗೂ ಖಂಡಿತವಾಗಿ ಹೇಳಿದ್ದಾರೆ. ಅನಿಶ್ಚಿತ ಈ ಶಬ್ದಗಳಂತೂ ಅವರ ಕೋಶದಲ್ಲಿಯೇ ಇಲ್ಲ. ಏನಾದರೂ ಇದ್ದರೆ ಅವುಗಳ ಬಗೆಗೆ ಖಂಡಿತವಾಗಿ ಹೇಳಲಾಗುತ್ತಿತ್ತು. ಆದರಿಂದ ಅವು ವಾಚಕರ ಅಂತಃಕರಣವನ್ನು ಸರಳ ಮುಟ್ಟುವಂತಿವೆ. ನಯವಾದ ಇಲ್ಲವೆ ಕೋಮಲವಾದ ಸೌಂದರ್ಯವು ಸಮರ್ಥರ ವಾಣಿಯಲ್ಲಿ ಇಲ್ಲ. ಆದರೆ ಅದರಲ್ಲಿ ಓಜಸ್ಸು ಇದೆ, ಆವೇಶವಿದೆ, ಉತ್ಕಟತೆಯಿದೆ.

ಈ ವಿಷಯದಲ್ಲಿ ಸಮರ್ಥರ ತುಲನೆಯು ಜ್ಞಾನೇಶ್ವರ ಮತ್ತು ಏಕನಾಥರಿಗಿಂತ ತುಕಾರಾಮರ ಜತೆ ಹೆಚ್ಚಿಗೆ ಸರಿಹೊಂದುತ್ತದೆ. ತುಕಾರಾಮ ಅವರು ತತ್ತ್ವಜ್ಞಾನ ವಿಷಯದ ಬಗೆಗೆ ವಿವೇಚನೆಯ ಲೇಖನಗಳನ್ನು ಮಾತ್ರ ಬರೆದಿಲ್ಲ. ಯಾವ ವಿಷಯಗಳಿಗಾಗಿ ತುಕಾರಾಮ ಅವರ ನುಡಿಯಲ್ಲಿ ಆವೇಶ ಇಲ್ಲವೆ ಗಟ್ಟಿತನ ಬರುವುದೋ ಅವು ಸಮರ್ಥರಿಂದ ಬೇರೆಯಿವೆ ಎಂಬುದನ್ನು ಗಮನದಲ್ಲಿಡಬೇಕು. ಈ ವೈಶಿಷ್ಟ್ಯದ ಕಾರಣಗಳನ್ನು ಅವರ ಭಿನ್ನವಾದ ವ್ಯಕ್ತಿತ್ವದಲ್ಲಿ ಕಂಡುಹಿಡಿಯಬೇಕಾಗುತ್ತದೆ. ಅವರಿಬ್ಬರು ಬೇರೆ ಬೇರೆ ಸಾಮಾಜಿಕ ಸ್ತರಗಳಿಂದ ಮತ್ತು ವಾತಾವರಣದಿಂದ ಬಂದ ಬಗೆಗೆ ಗಮನಿಸಬೇಕಾಗುತ್ತದೆ. ತುಕಾರಾಮ ಅವರಲ್ಲಿ ದೊರೆಯುವ ಸಾಕ್ಷಾತ್ಕಾರಪರವಾದ ಮತ್ತು ಆತ್ಮಲೀನದಂಥ ಉದ್ಗಾರಗಳು ಸಮರ್ಥರ ರಚನೆಗಳಲ್ಲಿ ಬರುವುದಿಲ್ಲ. ಹೀಗೆ ಕೆಲ ಮಹತ್ತ್ವದ ಭೇದವಿದ್ದರೂ ಖಚಿತ ಹಾಗೂ ಖಂಡಿತ

ಉದ್ಗಾರಗಳ ಬಗೆಗೆ ಸಮರ್ಥ ಹಾಗೂ ತುಕಾರಾಮ ಈ ಇಬ್ಬರೂ ಸಮಕಾಲೀನ ಸಂತರಲ್ಲಿ ಒಂದಿಷ್ಟು ಸಾಮ್ಯವಿದ್ದುದು ಮಾತ್ರ ನಿಜ. ಮುಖ್ಯವಾಗಿ ಸಮರ್ಥರು ಉಪದೇಶಕರಾಗಿದ್ದಾರೆ, ಮಾರ್ಗದರ್ಶಕರಾಗಿದ್ದಾರೆ. ಅವರ ಎಲ್ಲ ಲೇಖನಗಳು ಶಿಷ್ಯರ ಸಲುವಾಗಿ ಮತ್ತು ಸಮಾಜಕ್ಕಾಗಿ ಇರುತ್ತವೆ. ಇದೇ ಅವರ ನಿಜವಾದ ಭೂಮಿಕೆ. ವಾಙ್ಮಯ ವಿಲಾಸದಲ್ಲಿ ಓಲಾಡುವ ರಸಿಕತೆಯ ಹವ್ಯಾಸ ಅವರ ಮನೋವೃತ್ತಿಯಲ್ಲಿಲ್ಲ. ಆದ್ದರಿಂದ ಸಾಹಿತ್ಯದಲ್ಲಿಯ ಸೌಂದರ್ಯದತ್ತ ಅವರ ಗಮನಹರಿದಿಲ್ಲ. ಸಮರ್ಥರ ಮನಸ್ಸು ಎಲ್ಲೆಡೆ ಆವಿಷ್ಕಾರಕ್ಕಿಂತ ಆಶಯದ ಗಮನವನ್ನು ಪಡೆದಿರುತ್ತದೆ.

# ಪ್ರಪಂಚ-ಪರಮಾರ್ಥ ವಿವೇಕ

ಸಮರ್ಥರ ಜನ್ಮಕಾಲಕ್ಕೆ ಮಹಾರಾಷ್ಟ್ರದಲ್ಲಿ ಸಂತ ಪರಂಪರೆ ಪ್ರಾರಂಭವಾಗಿ ಮುನ್ನೂರು ವರ್ಷಗಳು ಕಳೆದಿದ್ದವು. ಮೊದಲಿನ ಸಂತರು ಪರಿಪುಷ್ಟಗೊಳಿಸುತ್ತ ಬಂದ ವಿಚಾರಧಾರೆಯಲ್ಲಿ ಸಮರ್ಥರು ಹೆಚ್ಚಿಗೆ ಮಿಂಚಿರಬಹುದೆಂದು ಸಹಜವಾದ ಭಾವನೆ ಹುಟ್ಟುತ್ತದೆ. ಕೆಲ ಪ್ರಮಾಣದಲ್ಲಿ ಮತ್ತು ವಿಶೇಷವಾಗಿ ಆಧ್ಯಾತ್ಮಿಕ ಸಿದ್ಧಾಂತದ ವಿಷಯದಲ್ಲಿ ಹಾಗೆ ಜರುಗಿರಬೇಕೆಂದು ಹೇಳಲುಬರುತ್ತದೆ. ಆದರೆ ತಮ್ಮ ಜೀವಿತ ಕಾರ್ಯದ ಮುಖಾಂತರ ಮತ್ತು ಗ್ರಂಥರಚನೆಗಳ ಮಾಧ್ಯಮದಿಂದ ಸಮರ್ಥರು ಮಹಾರಾಷ್ಟ್ರದ ಎದುರು ಇಟ್ಟ ವಿಚಾರ ಸಂಪತ್ತು, ಆ ಮೇಲೆ ನಡೆಯುತ್ತ ಬಂದ ಎಲ್ಲ ವೈಚಾರಿಕ ಪರಂಪರೆಗಳನ್ನು ಒಳಗೊಂಡಿತ್ತು ಎಂದು ಹೇಳಲಾಗದು. ಸಮರ್ಥರು ತಮ್ಮ ಆಯುಷ್ಯದ ಉತ್ತರಾರ್ಧದಲ್ಲಿ ಯಾವುದೋ ಒಂದು ವಿಶೇಷ ದಾರಿಯನ್ನು ಹಿಡಿದರು. ಆದಕ್ಕಾಗಿ ಅವರು ಜೀವನದಲ್ಲಿ ಪ್ರಾಪ್ತವಾದ ಸ್ವರೂಪವು ಅವರಿಗಿಂತ ಮೊದಲು ಆಗಿಹೋದ ಪ್ರಮುಖ ಸಂತರ ಜೀವನಧಾರೆಗಿಂತ ಒಂದಿಷ್ಟು ವಿಶೇಷವಾಗಿತ್ತು. ಅದು ಹಾಗೆ ವಿಶೇಷವಾಗಿರಲು ಅವರ ವಿಶಿಷ್ಟ ವಿಚಾರ ಪ್ರಣಾಲಿ ಹಾಗೂ ಸ್ವತಂತ್ರ ಜೀವನ ದೃಷ್ಟಿಗಳೇ ಕಾರಣೀಭೂತವಾಗಿವೆ. ಸಮರ್ಥರ ಜೀವನದ ಸಮ್ಯಕ್ ಬೋಧೆಯಾಗಲು ಅವರ ವಿಚಾರಗಳಲ್ಲಿಯ ಈ ವಿಶೇಷತೆಯನ್ನು ಸರಿಯಾಗಿ ಅರಿತುಕೊಳ್ಳುವುದು ಅವಶ್ಯವಿದೆ.

ವಯಸ್ಸಿನ ಹನ್ನೆರಡನೆಯ ವರ್ಷಕ್ಕೆ ನಾರಾಯಣನು ಜಾಂಬದಲ್ಲಿಯ ತಮ್ಮ ಮನೆಯಿಂದ ಹೊರಟನು. ಅವನು ನಾಸಿಕ ಹತ್ತಿರವಿರುವ ಟಾಕಳಿಗೆ ಹೋಗಿ ಮುಟ್ಟಿದನು. ನಾರಾಯಣನ ತಂದೆ ಸೂರ್ಯಾಜಿಪಂತರು ತಮ್ಮ ಹಿರಿಯ ಮಗ ಗಂಗಾಧರನಿಗೆ ಅನುಗ್ರಹವನ್ನು ಕೊಟ್ಟಿದ್ದರು. ತನ್ನ ಅಣ್ಣನು ತನಗೂ ಹಾಗೆ ಅನುಗ್ರಹ ಕೊಡಬೇಕೆಂದು ನಾರಾಯಣನು ಹಟ ಹಿಡಿದನು. ಆದರೆ ಅವನು ವಯಸ್ಸಿನಲ್ಲಿ ಬಹಳ ಚಿಕ್ಕವನಿರುವುದರಿಂದ ಆತನ ಆ ಹಟವು ಪೂರೈಸಲಿಲ್ಲ. ಅದರಿಂದ ಆತ ಬಹಳ ನೊಂದನು. ಹೀಗೆ ಹಳೆಯ ಚರಿತ್ರೆ ಗ್ರಂಥಗಳಲ್ಲಿ ವರ್ಣನೆಯನ್ನು ಮಾಡಲಾಗಿದೆ. ಇದರಲ್ಲಿ ಯಾವ ವಿಚಾರಗಳನ್ನು ಎಷ್ಟು ವಿಶ್ವಸನೀಯವೆಂದು ತಿಳಿಯಬೇಕೆಂಬುದನ್ನು ಬದಿಗಿಟ್ಟರೆ, ಒಂದಿಷ್ಟು ಅರಿವು ಬಂದ ವಯಸ್ಸಿನಿಂದ ನಾರಾಯಣನ ಪ್ರವೃತ್ತಿಯು ಪರಮಾರ್ಥದತ್ತ ಹೊರಳಿತ್ತೆಂದು ಹೇಳಲು ಬರುತ್ತದೆ. ಬಾಲಕ ನಾರಾಯಣನನ್ನು ಏಕನಾಥರ ಪಾದದ ಮೇಲೆ ಹಾಕಲು ಆತನ ಮಾವನು ಪೈಠಣಕ್ಕೆ ಕರೆದುಕೊಂಡು ಹೋಗಿದ್ದನೆಂದು ಹನುಮಂತ ಸ್ವಾಮಿಯವರು ತಮ್ಮ ಬಖೈರಿನಲ್ಲಿ ಹೇಳಿದ್ದಾರೆ. ನಾರಾಯಣನ ಜನ್ಮಕ್ಕಿಂತ ಮೊದಲೇ ಏಕನಾಥರು ಸಮಾಧಿ ಹೊಂದಿದ್ದು, ಆತ

ನನ್ನು ಪೈಠಣಕ್ಕೆ ಕರೆದುಕೊಂಡು ಹೋಗಿದ್ದರೆ ಆ ನಾಥ ಅವರ ಸಮಾಧಿಯ ದರ್ಶನಕ್ಕೆ ಕರೆದೊಯ್ದಿರಬೇಕು ಇಲ್ಲವೆ ನಾಥ ಅವರ ಗಾದಿಯ ಮೇಲಿದ್ದ ಪುರುಷರ ಅಡಿಯಲ್ಲಿ ಹಾಕಲು ಆಗಿರಬೇಕು. ಹೀಗೆ ಸ್ಪಷ್ಟಪಡಿಸುವ ಪ್ರಯತ್ನವು ಮಾಡಲ್ಪಡುತ್ತದೆ. ಆದರೆ ಏಕನಾಥರ ಅಥವಾ ಅವರ ಸಮಾಧಿಯ ದರ್ಶನಕ್ಕಾಗಿ ಹೀಗೆ ನಾರಾಯಣನನ್ನು ಕರೆದುಕೊಂಡು ಹೋಗಿದ್ದರೆಂದು ತಿಳಿದರೂ, ಆತನ ಮನಸ್ಸಿನ ಮೇಲೆ ಅದರ ಯಾವ ಸಂಸ್ಕಾರವಾಗುವ ವಯಸ್ಸು ಆದಾಗಿರಲಿಲ್ಲ. ಮುಂದೆ ನಾರಾಯಣನು ರಾಮದಾಸನಾದ ನಂತರ ಅವರ ಮನಸ್ಸಿನ ಮೇಲೆ ಏಕನಾಥರ ತತ್ತ್ವಜ್ಞಾನದ ಯಾವುದೇ ಪರಿಣಾಮ ಆಗಿಲ್ಲವೆಂದು ಕಂಡುಬರುವುದಿಲ್ಲ.

ಏಕನಾಥರ ತತ್ತ್ವ ವಿಚಾರವು ಜ್ಞಾನೇಶ್ವರರ ಪರಂಪರೆಯನ್ನು ಪಡೆದು ನಿಂತಿದೆ. ಏಕನಾಥರನ್ನು ಭಾಗವತೋತ್ತಮ ಎಂದು ಕರೆದಿದ್ದಾರೆ. ಅದಕ್ಕೂ ಮೊದಲು ಹತ್ತಿರ ಹತ್ತಿರ ಮೂರು ಶತಕ ಬರೆಯಲ್ಪಟ್ಟ ಜ್ಞಾನೇಶ್ವರರ ಗೀತೆಯ ಟೀಕೆ ಮತ್ತು ಏಕನಾಥರ ಬೆನ್ನ ಹಿಂದೆಯೇ ಬಂದ ತುಕಾರಾಮರ ಅಭಂಗಗಾಥಾ ಇವುಗಳ ಜತೆಗೆ ಏಕನಾಥರ ಭಾಗವತಕ್ಕೆ ವಾರಕರಿ ಸಂಪ್ರದಾಯದಲ್ಲಿ ಮಾನ್ಯತೆ ಲಭಿಸಿತು. ಏಕಾದಶ ಸ್ಕಂಧದ ಮೇಲಿನ ಆ ಟೀಕೆಯಲ್ಲಿ ಜ್ಞಾನೇಶ್ವರರ ವಾಣಿಯ ಹೆಜ್ಜೆಗುರುತು ಅನೇಕ ಸ್ಥಳಗಳಲ್ಲಿ ಮೂಡಿದ್ದು ಕಂಡುಬರುತ್ತದೆ. ಭಾಗವತದ ಮೇಲಿನ ಈ ಟೀಕೆಯ ವ್ಯತಿರಿಕ್ತವಾಗಿ ಏಕನಾಥರ ಬಹಳಷ್ಟು ತತ್ತ್ವಜ್ಞಾನಪರ ರಚನೆಗಳಿವೆ. ಅವುಗಳಲ್ಲಿ ಶುಕಾಷ್ಟಕ ಇಲ್ಲವೆ ಶಂಕರಾಚಾರ್ಯರ ಹಸ್ತಾಮಲಕ ಇಂಥ ಕೆಲವು ಪ್ರಕರಣಗಳ ಮೇಲಿನ ಟೀಕೆಯ ಸಮಾವೇಶವಿದೆ. ಗುರುಪರಂಪರೆಯ ಮಾರ್ಗದಿಂದ ಏಕನಾಥರ ದತ್ತಪರಂಪರೆಯ ಜತೆಗೆ ಸಂಬಂಧವು ಬಂದಿತ್ತು. ಅವರ ಗುರು ಜನಾರ್ದನಸ್ವಾಮಿಯವರಿಗೆ ಮಲಂಗ ವೇಷದಲ್ಲಿ ದತ್ತರ ದರ್ಶನವಾದ ಪ್ರಸಂಗಕ್ಕೆ ಆದು ಸಾಕ್ಷಿಯಿದೆ. ಈ ಕಥೆಯನ್ನು ನಿಜವೆಂದು ನಂಬಿದರೂ ಕೂಡ ಆ ಕಾಲದಲ್ಲಿ ದೇವಗಿರಿಯ ಪರಿಸರದಲ್ಲಿದ್ದ ಸೂಫಿ ಪಂಥದಲ್ಲಿಯ ಸಾಧುಗಳಿಗೆ ಅವರ ಯಾವುದೋ ಸಂಪರ್ಕ ಬಂದು ಹೋಗಿರಬೇಕು ಎಂಬ ತರ್ಕಕ್ಕೆ ಕೆಲವು ಆಧಾರಗಳು ದೊರೆಯುತ್ತವೆ. ಆ ತರ್ಕವನ್ನು ವಿಶ್ವಸನೀಯವೆಂದು ಮನ್ನಿಸಬೇಕಾದರೆ ಈ ಸಂಪರ್ಕದ ಪರಿಣಾಮದ ಒಂದಿಷ್ಟು ನೆರಳನ್ನು ಏಕನಾಥರ ಸಾಹಿತ್ಯದಲ್ಲಿ ಎಲ್ಲಿಯಾದರೂ ಕಾಣಬೇಕಿತ್ತು, ಹಾಗದು ಕಂಡಿಲ್ಲ. ಅದು ಹೇಗೇ ಇರಲಿ, ಗುರುಪರಂಪರೆಯಿಂದ ದತ್ತ, ಭಾಗವತದಿಂದ ಶ್ರೀಕೃಷ್ಣ ಹಾಗೂ ವಾರಕರಿ ಸಂಪ್ರದಾಯದಿಂದ ವಿಠಲ ಇಂಥ ದೇವತೆಗಳ ಜತೆಯಾಗಿ ಶ್ರೀರಾಮಚಂದ್ರನಲ್ಲಿಯೂ ಉತ್ಕಟ ಪ್ರೇಮ ಏಕನಾಥರಲ್ಲಿ ಇತ್ತೆಂಬುದು ಅವರ ಭಾವಾರ್ಥ ರಾಮಾಯಣದಿಂದ ನಮಗೆ ಗೊತ್ತಾಗುತ್ತದೆ.

ಆದರೆ ಧಾರ್ಮಿಕ ಇಲ್ಲವೆ ಆಧ್ಯಾತ್ಮಿಕ ವಿಚಾರಗಳ ದೃಷ್ಟಿಯಿಂದ ಇಷ್ಟು ವ್ಯಾಪಕ ಅಧಿಷ್ಠಾನವಿದ್ದರೂ ಏಕನಾಥರು ಭಾಗವತ ಸಂಪ್ರದಾಯಿಗಳೆಂದು ಗುರುತಿಸಲ್ಪಟ್ಟರು ಮತ್ತು ವಾರಕರಿ ಸಂಪ್ರದಾಯದಲ್ಲಿ ಭಾಗವತಕ್ಕೆ ಆಧಾರ ಕೊಡುವವರೆಂದು ಮಾನ್ಯತೆ ಪಡೆದರು. ಏಕನಾಥರ ಹಿಂದೆಯೇ ತುಕಾರಾಮ ಬರುತ್ತಾರೆ. ಅವರ

ಪಾರಮಾರ್ಥಿಕ ವೃತ್ತಿ ನಿರ್ಮಾಣದಲ್ಲಿ ಜ್ಞಾನೇಶ್ವರ ಹಾಗೂ ಏಕನಾಥರ ಪಾಲು ಇದೆ. ನಾಮದೇವರದಂತೂ ಇದ್ದೇ ಇದೆ. ತುಕಾರಾಮ ಇವರು ಭಾಗವತ ಧರ್ಮದ ಕಲಶವೆಂದು ಮಾನ್ಯತೆ ಪಡೆದರು. ಈ ಕಲಶವು ತನ್ನ ಪರಿಪೂರ್ಣ ತೇಜಸ್ಸಿನಿಂದ ಹೊಳೆಯುತ್ತಿರುವಂತೆಯೇ ಸಮರ್ಥರು ಕೃಷ್ಣಾನದಿಯ ಕಣಿವೆಯಲ್ಲಿ ತಮ್ಮ ಉತ್ತರಾಯುಷ್ಯದ ಕಾರ್ಯಗಳನ್ನು ಪ್ರಾರಂಭಿಸಿದರು. ತುಕಾರಾಮ ಮತ್ತು ರಾಮದಾಸ ಇವರ ಪರಸ್ಪರ ಭೇಟಿಯ ಕಥೆಗಳು ಕೆಲವೆಡೆ ಹಳೆಯ ಗ್ರಂಥಗಳಲ್ಲಿ ವರ್ಣಿಸಲ್ಪಟ್ಟಿವೆ. ಅವೆಲ್ಲವುಗಳನ್ನು ನಿಜವೆಂದು ನಂಬಲಾಗುವುದಿಲ್ಲ. ಆ ವರ್ಣನೆಗಳಲ್ಲಿ ಅದ್ಭುತ ಚಮತ್ಕಾರಗಳ ಹಾಗೂ ಅವಾಸ್ತವ ವಿವರಣೆಗಳ ನೆರಳು ಬಿದ್ದಿರುತ್ತದೆ. ಭೇಟಿ ಮಾತ್ರ ಆಗಿದ್ದು ಸಾಧ್ಯವಿದೆ. ಆದರೆ ಆ ಸಮಯದಲ್ಲಿ ಇದು ಮಾತ್ರ ನಿಜ, ಜ್ಞಾನೇಶ್ವರ ತುಕಾರಾಮರಂಥ ಧುರಂಧರ ಪುರುಷರ ಉಜ್ವಲ ಕರ್ತೃತ್ವವು ಪ್ರಕಾಶಮಾನವಾಗಿ ಹೊರಟಿತು. ಮಹಾರಾಷ್ಟ್ರದಲ್ಲಿ ಎಲ್ಲೆಡೆ ದೂರದೂರದಲ್ಲಿ ಪಸರಿಸಿದ ವಾರಕರಿ ಸಂಪ್ರದಾಯಕ್ಕೆ ಸಮರ್ಥರ ಒಂದಿಷ್ಟು ನಿಕಟ ಸಂಬಂಧವು ಬಂದಿತ್ತೆಂಬುದು ಅವರ ಮುಂದಿನ ಆಯುಷ್ಯದಿಂದ ಕಂಡುಬರುವುದಿಲ್ಲ.

ಉತ್ತರಾಯುಷ್ಯದಲ್ಲಿ ಸಮರ್ಥರು ಅತಿಯಾಗಿ ಸಮಾಜದತ್ತ ಗಮನಹರಿಸಿದರು. ಹಾಗಿದ್ದರೂ ಆ ಕಾಲದಲ್ಲಿ ಜನಮನದಲ್ಲಿ ಅಷ್ಟು ಮಹತ್ವದ ಸ್ಥಾನ ಪಡೆದ ವಾರಕರಿ ಸಂಪ್ರದಾಯಕ್ಕೆ ಅವರ ಯಾವ ಸಂಬಂಧವೂ ಬಂದಂತೆ ಕಾಣುವುದಿಲ್ಲ. ಇದು ನಿಜವಾಗಿ ಅತೀವ ಅನಪೇಕ್ಷಿತವೆನಿಸುತ್ತದೆ. ಜ್ಞಾನೇಶ್ವರರು ಕೆಲ ಸಮಯದ ವರೆಗೆ ಈ ಜಗತ್ತಿನಲ್ಲಿ ವ್ಯವಹರಿಸುತ್ತಿದ್ದಂತೆ ಕಂಡರೂ ಮನಸ್ಸಿನಿಂದ ಹಾಗೂ ಪ್ರವೃತ್ತಿಯಿಂದ ಕೊನೆಗೆ ಅವರು ನಿವೃತ್ತರೇ. ಅವರು ಪಡೆದ ಸಂಜೀವನ ಸಮಾಧಿಯಿಂದಲೇ ಅದು ಸ್ಪಷ್ಟವಾಗುತ್ತದೆ. ಆದರೆ ಮೂಲದಲ್ಲಿ ನಾಥಪಂಥದ ಯೋಗಿಯಾಗಿದ್ದ ವಿರಕ್ತ ಜ್ಞಾನೇಶ್ವರರು ವಾರಕರಿ ಸಂಪ್ರದಾಯದ ಜತೆ ಜನಸಾಮಾನ್ಯರ ಮಾತೃಪ್ರೇಮದ ಸಂಬಂಧ ಜೋಡಿಸಲು ಸಾಧ್ಯವಾಯಿತು. ನಿವೃತ್ತಿಯಿಂದ ವಿಚಾರ ಪೂರ್ವಕವಾಗಿ ಹಿಂದಿರುಗಿ ತಮ್ಮ ಮೂವತ್ತಾರು ವರ್ಷಗಳ ಇಡೀ ಆಯುಷ್ಯದ ಉತ್ತರಾರ್ಧವನ್ನು, ಪ್ರವೃತ್ತಿಧರ್ಮವನ್ನನುಸರಿಸಿ ಸಮಾಜ ವ್ಯವಹಾರದಲ್ಲಿ ಗಮನ ಹರಿಸುವುದಕ್ಕೆ ಸಮರ್ಥರು ಕಳೆದರು. ಬಹುಸಂಖ್ಯೆ ಮರಾಠಿ ಸಮಾಜದ ಧಾರ್ಮಿಕ ವ್ಯಾಸಪೀಠವಾಗಿದ್ದ ಪಂಢರಪುರದ ಭಕ್ತಿ ಸಂಪ್ರದಾಯದಿಂದ ಯಾವುದೇ ಸಂಪರ್ಕವನ್ನು ಅವರು ಸಾಧಿಸಿದ್ದು ಕಂಡುಬರುವುದಿಲ್ಲ. ಇವು ಅವರಿಬ್ಬರಲ್ಲಿಯ ವಿರೋಧಾಭಾಸಗಳು ಕಣ್ಣು ತುಂಬುವಂತಿವೆ. ಜಾಂಬದಂಥ ಕುಗ್ರಾಮದಲ್ಲಿ ಕಳೆದ ಬಾಲ್ಯ, ನಾಸಿಕಪಂಚವಟಿಯಂಥ ಪ್ರಾಚೀನ ಪರಂಪರೆಯ ರಕ್ಷಕ ಕ್ಷೇತ್ರದ ಪರಿಸರದಲ್ಲಿ ತಪದ ವಾಸ್ತವ್ಯ ಮತ್ತು ಅನಂತರ ಹನ್ನೆರಡು ವರ್ಷಗಳಷ್ಟು ದೀರ್ಘಕಾಲದವರೆಗೆ ಈ ವಿಸ್ತಾರ ದೇಶದ ದೂರದೂರ ಭಾಗಗಳಲ್ಲಿ ಮಾಡಿದ ಪರಿಭ್ರಮಣ ಇವುಗಳ ಆಧಾರದಿಂದ ಈ ವಸ್ತುಸ್ಥಿತಿಯನ್ನು ಸ್ಪಷ್ಟಪಡಿಸುವುದು ಸಾಧ್ಯವಿದೆ.

ತಂದೆ ಸೂರ್ಯಾಜಿ ಪಂತರಿಗೆ ಪಂಢರಪುರದ ವಿಠ್ಠಲ ಸಂಪ್ರದಾಯದವರ ಜತೆ

ಯಾವುದೇ ಸಂಪರ್ಕ ಬಂದಿರಲಿಕ್ಕಿಲ್ಲ. ಕುಟುಂಬದಲ್ಲಿ ಪರಂಪರೆಯಿಂದ ನಡೆದು ಬಂದ ಉಪಾಸನೆಯು ಸೂರ್ಯನದಾಗಿತ್ತು. ಅದರ ಜತೆ ಸೂರ್ಯ ವಂಶದಲ್ಲಿ ಹುಟ್ಟಿದ ಶ್ರೀ ರಾಮಚಂದ್ರನ ಉಪಾಸನೆಯೂ ಇತ್ತು. ಅವನ ಶ್ರೇಷ್ಠ ಸೇವಕನಾದ ಹನುಮಾನ ಎರಡನೆಯ ದೇವತೆ. ಈ ಇಬ್ಬರು ದೇವತೆಗಳ ಹೊರತಾಗಿ ಬೇರೆ ಯಾವ ದೇವತೆಗಳತ್ತ ಹೊರಳುವ ವಿಚಾರವು ಸೂರ್ಯಾಜಿ ಪಂತರ ಮನಸ್ಸಿನಲ್ಲಿ ಬಂದಿರಲಿಕ್ಕಿಲ್ಲ. ಆದರೆ ಅದು ಅಸ್ವಾಭಾವಿಕವಲ್ಲ. ಹಿರಿಯ ಮಗ ಗಂಗಾಧರನಿಗೆ ವಾರಕರಿ ಸಂಪ್ರದಾಯದ ಯಾವ ಪರಿಚಯವು, ನಾರಾಯಣನು ಮನೆಯಿಂದ ಹೊರಬೀಳುವವರೆಗೂ ಆಗಿರುವುದಕ್ಕೆ ಸಾಧ್ಯವಿಲ್ಲ. ತಪಶ್ಚರ್ಯೆ ಹಾಗೂ ತೀರ್ಥಯಾತ್ರೆ ಈ ಮಧ್ಯೆ ಇಪ್ಪನ್ನಾಲ್ಕು ವರ್ಷಗಳ ಕಾಲ ಕಳೆದ ಬಳಿಕ ನಲವತ್ತರ ಕಡೆಗೆ ಹೊರಳುತ್ತಿರುವ ರಾಮದಾಸರು ಕೃಷ್ಣಾನದಿ ತೀರಕ್ಕೆ ಬಂದು ನೆಲೆ ನಿಂತರು. ಆ ಸಮಯ ಅವರ ವಿಚಾರಗಳ ಮೂಲ ಮತ್ತು ಮುಂದಿನ ಕಾರ್ಯಗಳ ದಿಸೆ ಅವರ ಮನಸ್ಸಿನಲ್ಲಿ ನಿಶ್ಚಿತವಾಗಿ ಖಂದು ಹೋಗಿದ್ದವು. ಈ ದಿಸೆಯು ಸಮಾಜದ ಮನಸ್ಸಿಗೆ ಒಂದಿಷ್ಟು ಬೇರೆ ದೃಷ್ಟಿಕೋನವನ್ನು ಕೊಡುವುದಿತ್ತು. ಇಂಥ ಹಿನ್ನೆಲೆಯಲ್ಲಿ ಕೇವಲ ನಾಮಸ್ಮರಣೆ ಮತ್ತು ಭಜನೆ ಪೂಜೆ ಇಷ್ಟೇ ಸಾಧನೆಗಳನ್ನು ಹೇಳಿಕೊಳ್ಳುವಂಥ ಮಹಾರಾಷ್ಟ್ರದಲ್ಲಿಯ ವಾರಕರಿ ಪಂಥದಂಥ ಈ ಭಕ್ತಿ ಸಂಪ್ರದಾಯದ ಆಕರ್ಷಣೆಯನ್ನು ಪಡೆಯಬೇಕೆಂಬ ಭಾವನೆ ಸಮರ್ಥರ ಮನಸ್ಸಿನಲ್ಲಿ ಬಂದಿರಲಿಲ್ಲ. ಸಮರ್ಥರ ತತ್ತ್ವಜ್ಞಾನ ವಿಚಾರಗಳ ಹಾಗೂ ಜೀವನದ ವಿಷಯಗಳ ಪೋಷಣೆಯು ಎಲ್ಲಿ ಮತ್ತು ಹೇಗೆ ಆಗಿರಬೇಕು, ಇದನ್ನು ವಿಚಾರಿಸುವುದರಲ್ಲಿ ಈ ಎಲ್ಲವು ಮನಸ್ಸಿನಲ್ಲಿ ಬಂದು-ಹೋಗುತ್ತವೆ.

ನಾರಾಯಣನು ಪರಮಾರ್ಥದ ಪ್ರೇರಣೆಯಿಂದ ಮನೆಯಿಂದ ಹೊರಬಿದ್ದನು. ಆದರೆ ಜಾಂಬದಿಂದ ಹತ್ತಿರವಿರುವ ಏಕನಾಥರ ಪೈಠಣಕ್ಕೆ ಹೋಗಲಿಲ್ಲ. ಅವನು ಪೈಠಣದ ಆಚೆಗಿರುವ ನಾಸಿಕವನ್ನು ತಲುಪಿದನು. ಭಗವಾನ ಶ್ರೀರಾಮಚಂದ್ರ ಹಾಗೂ ಜಾನಕಿ ಇವರ ವನವಾಸದ ಕಾಲವಲ್ಲಿಯ ವಾಸ್ತವ್ಯದಿಂದ ಪವಿತ್ರವಾದ ಕ್ಷೇತ್ರವೆಂದು ನಾಸಿಕ ಪಂಚವಟಿಯ ಪರಿಸರವು ಆತನ ಬಾಲಮನಸ್ಸಿನಲ್ಲಿ ತುಂಬಿಕೊಂಡಿರಬೇಕು. ನಾಸಿಕದ ಪರಿಸರದಲ್ಲಿ ನಾರಾಯಣನ ಆ ಹನ್ನೆರಡು ವರ್ಷಗಳ ಆಯುಷ್ಯವು ಸಂಪೂರ್ಣವಾಗಿ ಪರಮಾರ್ಥ ಸಾಧನೆಯಲ್ಲಿ ಮುಳುಗಿ ಹೋಗಿತ್ತು. ನಾರಾಯಣನು 'ರಾಮದಾಸ' ಅಲ್ಲಿಯೇ ಆಗಿರಬೇಕು. ಹೀಗೆ ಹಳೆಯ ದಾಸಬೋಧೆಯಲ್ಲಿಯ "ಉದಾರ ನಾಮವನಿತ್ತರು॥ ರಾಮದಾಸನೆಂದು॥" ಈ ಉದ್ಗಾರದಿಂದ ಕಂಡುಬರುತ್ತದೆ (9.1). ರಾಮದಾಸರ ತತ್ತ್ವಜ್ಞಾನ ವಿಷಯಗಳ ವಿಚಾರಗಳಿಗೆ ಇದೇ ಸಮಯದಲ್ಲಿ ಸ್ವರೂಪ ಮೂಡಿಬಂತು. ಟಾಕಳಿಯಲ್ಲಿಯ ಹನ್ನೆರಡು ವರ್ಷಗಳ ವಾಸ್ತವ್ಯದಲ್ಲಿ ಅವರು ಯಾವ ಕೆಲವು ಶ್ರವಣ ಪಠಣ ಮಾಡಿದರೋ ಅದರಲ್ಲಿ ಅವರ ಎಲ್ಲ ತತ್ತ್ವಜ್ಞಾನ ವಿಚಾರಗಳು ಸಿದ್ಧವಾದವು. ಅನಂತರ ಅದರಲ್ಲಿ ಕೆಲವು ಹೆಚ್ಚಾಗಿ ಸೇರಿರುವ ಸಾಧ್ಯತೆಯಿಲ್ಲ. ಸಮರ್ಥರ ವಿಚಾರಗಳಿಗೆ ಮುಂದಿನ ಕಾಲದಲ್ಲಿ ಒಂದು

ಸ್ವತಂತ್ರ ದಿಕ್ಕು ದೊರೆತಿದ್ದು, ತೀರ್ಥಯಾತ್ರೆ ಮಾಡುತ್ತಿರುವಾಗ ಒದಗಿದ ಸಮಾಜ ನಿರೀಕ್ಷಣೆಯಿಂದ ಪ್ರಾಪ್ತವಾಯಿತು.

ನಾಸಿಕ ಟಾಕಳಿ ಈ ಪರಿಸರವು ನಿವೃತ್ತಿ ಜ್ಞಾನದೇವರ ಜೀವನದಲ್ಲಿ ಒಂದು ಮಹತ್ತ್ವದ ಘಟನೆಯ ಸಾಕ್ಷಿಯಾದ ತ್ರ್ಯಂಬಕೇಶ್ವರದ ಹತ್ತಿರದಲ್ಲಿದೆ. ರಾಮದಾಸರು ಎಂದಾದರೂ ತ್ರ್ಯಂಬಕೇಶ್ವರಕ್ಕೆ ಹೋಗಿರಬಹುದೆ ? ಅಲ್ಲಿಯ ಆ ಭವ್ಯ ಪರ್ವತವನ್ನು ನೋಡಿದ ಬಳಿಕ ಅಲ್ಲಿಯ ಒಂದು ಗುಹೆಯಲ್ಲಿ ಗಹನಿನಾಥರು ನಿವೃತ್ತಿನಾಥರಿಗೆ ನೀಡಿದ ಉಪದೇಶದ ಆ ಕಥೆಯನ್ನು ಅವರು ಸ್ಮರಿಸಿಕೊಂಡಿರಬೇಕೆ ? ಅದು ಹಾಗೆ ನೆನಪಿಗಾಗಿ ಮಾತ್ರ ನಿವೃತ್ತಿ ಜ್ಞಾನದೇವರ ಲೋಕೋತ್ತರ ಜೀವನವು ಎಂದಾದರೂ ಅವರ ಕಿವಿಯಲ್ಲಿ ಬಿದ್ದಿರಬಹುದೆ ? ಹೀಗೆ ಅನೇಕ ಪ್ರಶ್ನೆಗಳು ಮನಸ್ಸಿನಲ್ಲಿ ಗೊಂದಲವನ್ನುಂಟು ಮಾಡುತ್ತದೆ. ಆದರೆ ರಾಮದಾಸರ ಕಿವಿಯಲ್ಲಿ ಹೀಗೆ ಏನಾದರೂ ಬೀಳುವಂಥ ಜ್ಞಾನೇಶ್ವರರ ಕಥೆಯು ಎಳೆ ತ್ರ್ಯಂಬಕೇಶ್ವರದಲ್ಲಿ ಉಳಿದಿರಬಹುದಾದ ಅಪೇಕ್ಷೆಯನ್ನು ಆ ಕಾಲದಲ್ಲಿಯ ನಮ್ಮ ಸಮಾಜದ ನಿಟ್ಟಿನ ಅವಸ್ಥೆಯನ್ನು ಗಮನದಲ್ಲಿ ತೆಗೆದುಕೊಂಡರೆ ಮಾಡಲು ಬರುವಂತಿಲ್ಲ. ಕೊನೆಗೆ ಹೀಗೆ ಹೇಳಬೇಕಾಗುತ್ತದೆ : ನಿವೃತ್ತಿ ಜ್ಞಾನೇಶ್ವರರ ನಾಥಪಂಥವು ಇಲ್ಲವೆ ಜ್ಞಾನೇಶ್ವರರ ಏಕನಾಥರು ಪರಿಪುಷ್ಟಗೊಳಿಸಿದ ವಾರಕರಿ ಸಂಪ್ರದಾಯವು, ಇವುಗಳ ಯಾವ ಪರಿಣಾಮವೂ ಸಮರ್ಥರ ಮೇಲೆ ಆದಂತೆ ಕಾಣುವದಿಲ್ಲ. ಅವರ ವಿಚಾರಗಳ ಪರಿಣಾಮವು ಒಂದಿಷ್ಟು ಬೇರೆ ಮಾರ್ಗದಲ್ಲಿ ಆಗಿರುತ್ತದೆ.

ಜ್ಞಾನೇಶ್ವರ ಏಕನಾಥರಿಗಿಂತ 'ಒಂದಿಷ್ಟು ಬೇರೆ ಮಾರ್ಗದಲ್ಲಿ' ಎಂದು ಹೇಳಿದೆ, ಸಂಪೂರ್ಣ ಬೇರೆ ಮಾರ್ಗದಲ್ಲಿ ಎಂದು ಹೇಳಿಲ್ಲ. ಇದರ ಕಾರಣವಿಷ್ಟೆ, ಈ ವೈಚಾರಿಕ ನಿರ್ಮಾಣ ಎಷ್ಟೇ ಬೇರೆ ಮಾರ್ಗದಲ್ಲಿ ಆಗಿದ್ದರೂ ಕೂಡ ಸಿದ್ಧಾಂತ ದೃಷ್ಟಿಯಲ್ಲಿ ಅದ್ವೈತ ಹಾಗೂ ಸಾಧನೆಯ ದೃಷ್ಟಿಯಲ್ಲಿ ಭಕ್ತಿಯ ಸುಲಭ ಮಾರ್ಗದ ಸೂತ್ರಗಳು, ವಾರಕರಿ ಸಂಪ್ರದಾಯದಂತೆ ಸಮರ್ಥರ ವಿಚಾರಗಳಲ್ಲಿಯೂ ಅಷ್ಟೇ ಪ್ರಮುಖವಾಗಿ ಬಂದಿರುತ್ತವೆ. ಆದರೂ ಕೂಡ ಸಮರ್ಥರ ಎಲ್ಲ ತತ್ತ್ವಜ್ಞಾನ ವಿಚಾರಗಳು ಈ ಎರಡು ಪ್ರಮುಖ ಸಿದ್ಧಾಂತಗಳ ಸುತ್ತಮುತ್ತ ಹೆಣೆದುಕೊಂಡು ಹೋಗಿರುತ್ತವೆ. ವಾರಕರಿ ಪಂಥದ ದೇವತೆ ವಿಠ್ಠಲ ಆದರೆ ಸಮರ್ಥರ ಉಪಾಸ್ಯ ದೇವತೆ ಶ್ರೀರಾಮಚಂದ್ರ, ಇಷ್ಟೇ ಅಂತರ. ಈ ದೇವತೆಗಳಿಂದ ಅವರಿಗೆ, ತಮ್ಮ ಕುಲದ ಪರಂಪರೆಯಲ್ಲಿ ನಡೆದು ಬಂದಿದ್ದಕ್ಕಾಗಿ ಲಾಭವಾಗಿದೆ. ತಮ್ಮ ಈ ದೇವತೆಯ ಬಗೆಗೆ ಸಮರ್ಥರ ಭಕ್ತಿ ಒಂದು ದೃಷ್ಟಿಯಲ್ಲಿ ಬಹಳಷ್ಟು ಪ್ರಖರವಾಗಿದೆ. ಪಂಢರಪುರಕ್ಕೆ ಹೋದಾಗ ಅಲ್ಲಿಯೇ ಅವರಿಗೆ ವಿಠ್ಠಲನ ಸ್ಥಾನದಲ್ಲಿ ಶ್ರೀರಾಮನೇ ಕಂಡನು. ಅವರು ಆ ವಿಠ್ಠಲನಿಗೆ "ಇಲ್ಲೇಕೆ ನಿಂತಿರುವಿ ಶ್ರೀರಾಮ !" ಎಂದು ಪ್ರಶ್ನೆ ಕೇಳಿದರು. ಇಷ್ಟೇ ಅಲ್ಲದೆ "ಧನುಷ್ಯ ಎಲ್ಲ ಹೋಯಿತು ?" ಮತ್ತು ಹೀಗೆ "ಟೊಂಕದ ಮೇಲೆ ಎರಡೂ ಕೈಯೂರಿ ಏಕೆ ನಿಂತಿರುವೆ ?" ಎಂದು ಪ್ರಶ್ನೆ ಕೇಳಿದರೆಂದು ಕಥೆ ಹೇಳಲ್ಪಡುತ್ತದೆ. ಧನುಷ್ಯದ ವಿಚಾರವನ್ನು ಸಮರ್ಥರು ಅಗತ್ಯ ಮಾಡುವುದು ಮತ್ತು ಟೊಂಕದ

ಮೇಲೆ ಕೈಯಿಟ್ಟು ಸ್ವಸ್ಥವಾಗಿ ನಿಂತ ಬಗೆಗೆ ವಿವರಣೆಯ ಉಲ್ಲೇಖವನ್ನು ಅವರು ಸೂಚಿಸುವುದು, ಈ ಪ್ರಸಂಗಗಳ ಸಂಬಂಧವನ್ನು ಸಮರ್ಥರ ಆಗಿನ ವೈಚಾರಿಕ ಹಿನ್ನೆಲೆಯ ಜತೆ ಜೋಡಿಸಲು ಸಾಧ್ಯವಿದೆ.

ಅದು ಒಂದಿಷ್ಟು ಬೇರೆ ವಿಷಯವಾಗಬಹುದು. ಈಗ ನೋಡಬೇಕಾಗಿದ್ದು ಇದು, ಉಪಾಸ್ಯ ದೇವತೆಯೆಂದು ರಾಮಚಂದ್ರನಿಗಾಗಿ ಇಷ್ಟು ಆತ್ಮೀಯತೆ ಇದ್ದರೂ ಕೂಡ ಉಪಾಸನೆಗಾಗಿ ಯಾವ ಯಾವ ದೇವತೆಗಳನ್ನು ಸ್ವೀಕರಿಸಬೇಕು ಈ ವಿಷಯವಾಗಿ ಸಮರ್ಥರ ಯಾವ ಬಗೆಯ ಆಗ್ರಹವೂ ಇರಲಿಲ್ಲ. ಮೋಕ್ಷ ಸಾಧನೆಯನ್ನು ಯಾರು ಮಾಡಬೇಕಾಗಿದೆಯೋ, ಅವರು ಸಂಕೇತವೆಂದು ಯಾವ ಸ್ವರೂಪವನ್ನಾದರೂ ಸ್ವೀಕರಿಸಲು ಅಡ್ಡಿಯಿಲ್ಲ. ಇಷ್ಟೇ ಅಲ್ಲ, ಆದರೆ ಕೊನೆಗೆ ಶ್ರೀರಾಮಚಂದ್ರನೇ ಆ ನಿರ್ಗುಣ ಪರಬ್ರಹ್ಮನ ಕೇವಲ ಒಂದು ಸಂಕೇತವಾಗಿದ್ದಾನೆಂದು ನಿಸ್ಸಂದೇಹವಾಗಿ ಅವರು ಒಪ್ಪಿದ್ದಾರೆ. ಈ ದೇವತೆಗಳ ವಿಷಯದ ದೃಷ್ಟಿಕೋನದಲ್ಲಿಯ ಸಂಕೇತಗಳ ಬಗೆಗೆ ಯಾವ ಒಂದು ಉದಾರತೆ ಇದೆಯೋ ಹಾಗೆಯೇ ವಿಚಾರದ ಇಲ್ಲವೆ ಮನೋ ಧಾರಣೆಯ ಅಂಗದಲ್ಲಿ ಬುದ್ಧಿವಾದದ ಖಚಿತ ಆಧಾರವಿದೆ. ದೇವಾಲಯದಲ್ಲಿ ಮೂರ್ತಿ ಗಳನ್ನು ತೆಗೆದು ವಿಶ್ವನಿರ್ಮಾಣ ಮಾಡುತ್ತಿಲ್ಲವೆಂದು ಅವರು ಹೇಳುತ್ತಿರುವಂತೆ ಮತ್ತು ಕೊನೆಗೆ ನಿರ್ಗುಣ ಬ್ರಹ್ಮನ ಸ್ಥಾನದಲ್ಲಿ ಈ ನಾನಾರೂಪ ವಿಶ್ವ ಹಾಗೂ ಅದರಲ್ಲಿನ ಸಮಸ್ತ ಭೂತ ಜಾತಿಗಳಲ್ಲಿ ಯಾವವೂ ಇರುವುದಿಲ್ಲ, ಇಷ್ಟೇ ಅಲ್ಲ, ಅಲ್ಲಿ ಸೃಷ್ಟಿ ನಿರ್ಮಾಣ ಮಾಡುವ ಮತ್ತು ಅದನ್ನು ನಡೆಯಿಸುವ ಈಶ್ವರನೇ ಉಳಿಯುವ ದಿಲ್ಲವೆಂದು ಹೇಳುತ್ತಾರೆ. ಆಗ ಹೆಚ್ಚಾಗಿ ಈ ಬುದ್ಧಿವಾದದ ಆಧಾರವು ಕಂಡು ಬರುತ್ತದೆ. ಕಲ್ಲಿನ ಸ್ಥಾನದಲ್ಲಿ ದೈವತ್ವವಿದೆಯೆಂದು ನಂಬುವುದು ಇದು ಭ್ರಾಂತಿ ಯೆಂದು ಹೇಳುವಾಗ, ಇಲ್ಲವೆ ಗಂಡಕಿ ನದಿಯ ಪಾತ್ರದಲ್ಲಿ ಅಸಂಖ್ಯಾತ ದೇವತೆಗಳು ಬಿದ್ದಿರುತ್ತವೆ ಅವುಗಳನ್ನು ಯಾರು ಗಣನೆಗೆ ತೆಗೆದುಕೊಳ್ಳುತ್ತಾರೆ ಎಂದು ಸಾಲಗ್ರಾಮ ಶಿಲೆಯ ಸಂದರ್ಭದಲ್ಲಿ ಉದ್ಗಾರವನ್ನು ತೆಗೆಯುವಾಗ ಅವರ ಶ್ರದ್ಧಾ-ಪೂರ್ವಕ ಮನಸ್ಸಿನಲ್ಲಿ ಯಾವ ಬಗೆಯ ಸಂಕೋಚವೂ ಉಂಟಾಗುವುದಿಲ್ಲ. ಪರಮಾರ್ಥದ ಸಂದರ್ಭದಲ್ಲಿ ಅಜ್ಞಾನ ಇಲ್ಲವೆ ಮೂಢನಂಬಿಕೆಗಳಿಗೆ ಆಶ್ರಯ ಕೊಡು ವುದಕ್ಕೆ ಸಮರ್ಥರು ಒಪ್ಪುವುದಿಲ್ಲ. ಮುಖ್ಯ ದೇವರು ಯಾರು ಅದನ್ನು ಗುರುತಿಸ ಬೇಕು ಎಂದು ಅವರು ಅನೇಕ ಕಡೆಗಳಲ್ಲಿ ಇದಕ್ಕಾಗಿಯೇ ಹೇಳಿದ್ದಾರೆ. ಸಾಧಕರಿಗೆ ಸ್ಪಷ್ಟವಾದ ಜ್ಞಾನವು ಆಗಲೇಬೇಕೆಂದು ಅವರ ಸತತ ಆಗ್ರಹವಾಗಿದೆ. ವಿವೇಕನಿಷ್ಠ ಬದ್ಧವಾದ ಹಾಗೂ ಪ್ರತ್ಯಕ್ಷ ಅನುಭವಕ್ಕೆ ಬಂದ ವಾಸ್ತವ ಈ ಎರಡೂ ದಡಗಳನ್ನು ಸೇರಿಸಿಕೊಂಡು ಸಮರ್ಥರ ವಿವೇಚನೆಯ ಧಾರೆ ಹರಿದಂತಿದೆ. ತತ್ತ್ವಜ್ಞಾನದ ಯಾವುದೇ ವಿಚಾರವನ್ನು ಸ್ಪಷ್ಟಪಡಿಸುತ್ತಿರುವಾಗ ಸಮರ್ಥರ ಬುದ್ಧಿ ನಿತ್ಯ ಜಾಗೃತ ವಾಗಿತ್ತು. ಯಾವುದೇ ಸಾಧಕನ ಬುದ್ಧಿ ಕೂಡ ಹಾಗೇ ಇರಬೇಕೆಂಬುದು ಅವರ ದೃಷ್ಟಿಯಾಗಿತ್ತು.

ತತ್ತ್ವಜ್ಞಾನದಲ್ಲಿಯ ಒಟ್ಟಿನ ಎಲ್ಲ ಪ್ರಶ್ನೆಗಳ ವಿಚಾರವನ್ನು ಸಮರ್ಥರು

ಮಾಡಿದ್ದಾರೆಂದೇನಿಲ್ಲ. ಜ್ಞಾನೋತ್ತರ ಕರ್ಮಾಚರಣೆ ಇಲ್ಲವೆ ಕರ್ಮಸನ್ಯಾಸ, ಜೀವ ಸ್ವರೂಪ, ಕ್ಷೇತ್ರ ಕ್ಷೇತ್ರಜ್ಞ ವಿಚಾರ, ಪಾತಂಜಲ ಯೋಗದಲ್ಲಿಯ ಸಾಧನೆ, ಸಾಕ್ಷಾತ್ಕಾರ ಸ್ವರೂಪ ಇಂಥ ಕೆಲವು ವಿಷಯಗಳ ಪರಾಮರ್ಶೆಗಳು ಅವರ ಗ್ರಂಥಗಳಲ್ಲಿ ಬಂದಿಲ್ಲ. ಅದ್ವೈತ, ವಿಜ್ಞಾನ, ಮಾಯಾವಾದ, ನಿರ್ಗುಣ ಬ್ರಹ್ಮ ಮತ್ತು ಆತ್ಮನಿವೇದನ ಭಕ್ತಿ ಈ ಐದು ಸಿದ್ಧಾಂತಗಳ ಆಧಾರದಿಂದ ಅವರು ಮುಖ್ಯವಾಗಿ ತಮ್ಮ ತತ್ತ್ವಜ್ಞಾನ ವಿಷಯದ ವಿಚಾರಗಳನ್ನು ಹೇಳಿದ್ದಾರೆ. ಆದರೆ ಈ ವಿಷಯವಾಗಿ ಕೇವಲ ತಮ್ಮ ವಿಚಾರಗಳನ್ನೇ ಆಯಾ ಸ್ಥಳಗಳಲ್ಲಿ ಅವರು ಹೇಳಿದ್ದಾರೆ. ತರ್ಕ ದೃಷ್ಟಿಗಳ ಮತ್ತು ಸಿದ್ಧಾಂತ ದೃಷ್ಟಿಗಳ ಆ ಎಲ್ಲವುಗಳ ಒಂದು ಸುಸಂಗತ, ಕ್ರಮಬದ್ಧ ಹಾಗೂ ಪರಸ್ಪರ ಸಂಬಂಧವಾದ ರೀತಿಯನ್ನು ಮಾಡಿಸುವುದಕ್ಕೆ ಅವರು ಪ್ರಯತ್ನ ಮಾಡಿಲ್ಲ. ದಾಸಬೋಧೆಯ ಕೆಲವು ಸ್ಥಳಗಳಲ್ಲಿ ಪೂರ್ವಪಕ್ಷ ಹಾಗೂ ಉತ್ತರಪಕ್ಷ ಮಾಡಿದಂತೆ ಕಂಡರೂ ಇಲ್ಲವೆ ಗುರುಶಿಷ್ಯರ ಪ್ರಶ್ನೋತ್ತರ ರೂಪ ಸಂವಾದದಲ್ಲಿ ಕ್ವಚಿತ್ತಾಗಿ ಎಲ್ಲಿಯಾದರೂ ಸಮರ್ಥರು ಸಂದೇಹಪಡಿಸಿದ್ದರೂ ಕೂಡ ಖಂಡನೆ ಮಂಡನೆಗಳಲ್ಲಿ ಸೇರುವುದು ಸಮರ್ಥರ ವೃತ್ತಿಯಲ್ಲ. ಸಮರ್ಥರಿಗೆ ಪರಮಾರ್ಥದ ವಿಷಯದ ಬಗೆಗೆ ಯಾವ ಮಹತ್ತ್ವದ ವಿಚಾರವನ್ನು ಹೇಳಬೇಕೆಂದೆನಿಸಿತೊ, ಅಷ್ಟನ್ನು ಅವರು ಆಯಾ ಸ್ಥಳಗಳಲ್ಲಿ ಹೇಳಿದ್ದಾರೆ. ಇದನ್ನು ಹೇಳುವುದರಲ್ಲಿ ಯಾವವು, ಎಷ್ಟು ವಿಷಯಗಳು ಬರಬೇಕು, ಅಷ್ಟು ಬಂದಿವೆ. ಸಮರ್ಥರು ಉಳಿದ ವಿಚಾರಗಳ ಸಮಾಚಾರವನ್ನು ಮನಸ್ಸಿನಲ್ಲಿ ತೆಗೆದುಕೊಂಡಿಲ್ಲ.

ಸಮರ್ಥರು ವಿವೇಚನೆ ಮಾಡುತ್ತಿದ್ದ ವಿಷಯಗಳಿಗಾಗಿ, ಅನೇಕ ಪ್ರಕಾರದ ವಿವರಣೆಗಳನ್ನು ಕೊಟ್ಟಿದ್ದಾರೆ. ಅವರು ಕೊಟ್ಟ ಎಲ್ಲ ವಿಷಯಗಳ ಸಂಪೂರ್ಣ ವಿವರಣೆ ನೋಡಿ ಓದುವವನ ಮನಸ್ಸು ಸ್ತಿಮಿತವಾಗುತ್ತದೆ. ಆದರೆ ಈ ಎಲ್ಲ ವಿವರಣೆಗಳಲ್ಲಿ ನಿಶ್ಚಿತವಾದ ಯಾವುದೇ ಪರಸ್ಪರ ಸಂಬಂಧವನ್ನು ಅವರು ಪ್ರಸ್ಥಾಪಿಸಿಲ್ಲ. ಈ ರೀತಿಯ ಯಾವುದೇ ಪ್ರಶ್ನೆಯೂ ಅವರ ಮನಸ್ಸಿನಲ್ಲಿ ಎಂದಿಗೂ ಹುಟ್ಟಿರಲಿಕ್ಕಿಲ್ಲ. ಪ್ರತಿಯೊಂದು ಸ್ಥಳದಲ್ಲಿ ಇಂಥ ವಿವರಣೆಗಳನ್ನಷ್ಟೇ ಕೊಡುವ ಈ ಪದ್ಧತಿಯಿಂದ ಎಷ್ಟೋ ಸ್ಥಳಗಳಲ್ಲಿ ಅವುಗಳ ವಿವೇಚನೆಯಲ್ಲಿ ಒಂದಿಷ್ಟು ಕೋಷ್ಟಕದ ಇಲ್ಲವೆ ಬಿಡಿ ವಿಚಾರಗಳ ಸ್ವರೂಪಗಳು ಬರುತ್ತವೆ. ಈ ಬೇರೆ ಬೇರೆ ವಿಚಾರಗಳು ಬೇರೆ ಹಾಗೂ ಬಿಡಿಬಿಡಿಯಾಗಿದ್ದಂತೆ ಭಾಸವಾಗುತ್ತವೆ. ಇದರಿಂದ ಅವರ ಪ್ರತಿಪಾದನೆಯಲ್ಲಿ ಮಾತ್ರ ವಿಶೇಷ ಬಾಧೆ ಬರುವುದಿಲ್ಲ. ಕಾರಣ, ಆಧ್ಯಾತ್ಮ ವಿಷಯಗಳ ಎಲ್ಲ ಪ್ರಶ್ನೆಗಳ ವಿವರವಾದ ವಿಶ್ಲೇಷಣೆಯನ್ನು ಮಾಡುವುದಕ್ಕೆ ತಾವು ಬರೆಯುತ್ತಿರುವಾಗ ಅವರು ಹಟವನ್ನು ಹಿಡಿದಿರಲಿಲ್ಲ. ತಮಗೆ ಮಹತ್ತ್ವದ್ದಾಗಿ ಕಂಡುಬಂದ ಆ ವಿಚಾರಗಳನ್ನು ಅವರು ತಮ್ಮ ಜಿಜ್ಞಾಸು ಶಿಷ್ಯರಿಗೆ ಹೇಳಿದ್ದಾರೆ, ಇಷ್ಟೇ ಅವರ ಪಾತ್ರ. ಅದ್ವೈತದ ಖಚಿತ-ಪುರಸ್ಕಾರ, ವಿಜ್ಞಾನದ ಸ್ವತಂತ್ರ ಅರ್ಥ, ಆತ್ಮನಿವೇದನ ಭಕ್ತಿಯ ವಿಶೇಷ ಸ್ಪಷ್ಟೀಕರಣ ಹಾಗೂ ಆ ಭಕ್ತಿಯ ಒಂದೆಡೆ ಜ್ಞಾನ ಮತ್ತು ಎರಡನೆಯಕಡೆ ಆ ಜ್ಞಾನದ ಪ್ರತ್ಯಕ್ಷ ಅನುಭವ, ಅಂದರೆ ಆತ್ಮಾನುಭವದಿಂದಲೂ ಅವರು ಹಾಕಿದ

ಮೇಳ, ಇವು ಅವರ ತತ್ತ್ವಜ್ಞಾನ ವಿಚಾರಗಳ ವೈಶಿಷ್ಟ್ಯಗಳಾಗಿವೆ. ಜಗಜ್ಯೋತಿ, ಅಂತರಾತ್ಮ, ಚಂಚಲಬ್ರಹ್ಮ ಇಲ್ಲವೆ ನಿಶ್ಚಲಬ್ರಹ್ಮ ಇಂಥ ಕೆಲವು ಪಾರಿಭಾಷಿಕ ಸಂಕೇತಗಳ ಹೆಚ್ಚುಕಡಿಮೆ ವಿಶೇಷ ಅರ್ಥದಲ್ಲಿ ಅವರು ಮಾಡಿದ ಪ್ರಯೋಗವೇ ಸಮರ್ಥರ ವಿವೇಚನೆಯಲ್ಲಿಯ ಒಂದು ವಿಶೇಷವೆಂದು ಹೇಳಬೇಕಾಗುತ್ತದೆ.

ಸ್ವತಂತ್ರ ಬುದ್ಧಿಯ ಕೊಡುಗೆ ಒಂದಿಷ್ಟು ಸಮರ್ಥರಿಗೆ ಲಭಿಸಿತ್ತು. ಹನ್ನೆರಡು ವರ್ಷಗಳ ಟಾಕಳಿಯಲ್ಲಿನ ತಪಸ್ಸಿನ ಕಾಲದಲ್ಲಿ ಅವರು ಸಂಸ್ಕೃತದಲ್ಲಿಯ ಅನೇಕ ಆಧ್ಯಾತ್ಮ ವಿಷಯಗಳ ಗ್ರಂಥಗಳನ್ನು ಅಧ್ಯಯನ ಮಾಡಿದರು. ಹಾಗೆ ಅವರು ಅಭ್ಯಾಸವನ್ನು ಮಾಡಿರದಿದ್ದರೆ ತತ್ತ್ವಜ್ಞಾನ ವಿಷಯವಾಗಿ ಅನೇಕ ಬಿಡಿ ಪ್ರಕರಣಗಳನ್ನು ಬರೆಯುವುದಾಗುತ್ತಿರಲಿಲ್ಲ. ಪರಂಪರಾಗತ ತತ್ತ್ವಜ್ಞಾನದ ರಚನೆಗಳಲ್ಲಿ ಎಲ್ಲ ಭಾಗಗಳು ಅವರಿಗೆ ಪೂರ್ಣ ಪರಿಚಿತವಾಗಿದ್ದವು. ಆಧ್ಯಾತ್ಮದಲ್ಲಿಯ ಮಹತ್ತ್ವದ ಮೂಲಭೂತ ಸಿದ್ಧಾಂತದ ಮೇಲೆ ಅವರ ಹಿಡಿತವಿದೆ. ಅವುಗಳ ಬಗೆಗೆ ಅವರು ಮಾಡಿದ ವಿವರಣೆ ಸರಿ ಹಾಗೂ ಸುಬೋಧವಾಗಿವೆ. ಆದರೆ ಹೀಗಿದ್ದರೂ, ಯಾವನೋ ಒಬ್ಬ ಗ್ರಂಥಕಾರನ ಇಲ್ಲವೆ ಸಂಪ್ರದಾಯದ ಅನುಕರಣೆಯನ್ನು ಇದ್ದಂತೆ ಇದ್ದಹಾಗೆ ಅವರು ಮಾಡಿದಂತೆ ಕಾಣುವುದಿಲ್ಲ. ಅನೇಕ ಗ್ರಂಥಗಳನ್ನು ನೋಡಿದರೂ ಕೂಡ ಅವರ ವಿವೇಚನೆಯ ಸರಣಿಯು ಸ್ವತಂತ್ರವಾಗಿರುತ್ತದೆ. ಇದರ ಮೂಲವನ್ನು ಅವರು ಕಳೆದ ಜೀವನದಲ್ಲಿ ಹಾಗೂ ತಮ್ಮ ಜೀವನದ ಉತ್ತರಾರ್ಧದಲ್ಲಿ ಅವರು ಪಡೆದ ವಿಶಿಷ್ಟ ಹಿನ್ನೆಲೆಯಲ್ಲಿ ಶೋಧಿಸಬೇಕಾಗುತ್ತದೆ. ಸ್ವತಃ ಗ್ರಂಥಗಳನ್ನು ಅವಲೋಕಿಸುವುದು, ಪ್ರಸಂಗವಶಾತ್ ಏನಾದರೂ ಕೇಳುವುದು ಮತ್ತು ಯಾವುದಾದರೂ ಓದಿದ್ದು ಕೇಳಿದ್ದು ಇದ್ದರೆ, ಅದನ್ನು ಮನನ ಮಾಡುವುದು ಇದು ಅವರ ಅಧ್ಯಯನದ ಮಾರ್ಗವಾಗಿತ್ತು. ಆದ್ದರಿಂದ ಅವರ ವಿಚಾರವು ಯಾವುದೇ ವಿಶಿಷ್ಟ ಪ್ರಣಾಲಿಗೆ ಇಲ್ಲವೆ ಪರಂಪರೆಗೆ ಒಳಗಾಗಲಿಲ್ಲ. ಒಂದು ರೀತಿಯಲ್ಲಿ ಇದು ಮುಕ್ತವಾಗಿದೆ, ಸ್ವಾಗತಶೀಲವಾಗಿದೆ. ಜೀವನದಲ್ಲಿ ಪ್ರತಿಗಳಿಗೆ ಕಾಣುವ ವಾಸ್ತವತೆಯನ್ನು ಮತ್ತು ಬರುವ ಅನುಭವಗಳನ್ನು ಅದು ಎದುರಿಸುವುದು ಸಾಧ್ಯವಾಯಿತು.

ಸಮರ್ಥರು ಮಾಡಿದ ತತ್ತ್ವಜ್ಞಾನದ ವಿವರಣೆಗಳು ಪಂಡಿತರ ಪರಂಪರೆಯಲ್ಲಿಯ ಸ್ಪಷ್ಟೀಕರಣದ ಸರಣಿಯಲ್ಲಿ ಬಂದಿವೆ. ಆದರೆ ಅದೇ ವೇಳೆಯಲ್ಲಿ ಚಿಕಿತ್ಸೆಯ ವಿಶೇಷ ಜಂಜಾಟದಲ್ಲಿ ಸೇರದೆ ಸರ್ವಸಾಮಾನ್ಯ ಜಿಜ್ಞಾಸು ವ್ಯಕ್ತಿ ಕೂಡ ತಿಳಿಯುವಂತೆ ಇರುತ್ತವೆ. ವಿವೇಚನೆಯ ವಿಷಯದಲ್ಲಿ ಅವು ಕೇವಲ ಪಾಂಡಿತ್ಯದಲ್ಲಿ ಸುತ್ತಲ್ಪಟ್ಟಿಲ್ಲ. ಅದೇ ರೀತಿ ಭಕ್ತಿಯ ಇಲ್ಲವೆ ಅದ್ವೈತಾನುಭವದ ಸಂದರ್ಭದಲ್ಲಿ ಅವು ಕೇವಲ ಆತ್ಮಮಗ್ನ ಇಲ್ಲವೆ ಆತ್ಮಲೀನವಾಗಿಲ್ಲ. ಜ್ಞಾನೇಶ್ವರನ ಆಳವಾದ ಅದ್ವೈತಾನುಭವದ ಸಂಬಂಧದಿಂದ ಹೇಳುವ ಉದ್ಗಾರವು ಸಮರ್ಥರ ಲೇಖನಗಳ ಒಂದಿಷ್ಟು ಸ್ಥಳದಲ್ಲಿ ಮಾದರಿಯಾಗಿ ಕಂಡುಬರುತ್ತದೆ. ಆದರೆ ಅವರು ಅಲ್ಲಿಯೇ ವಿರಮಿಸುತ್ತಾರೆಂದು ಇಲ್ಲವೆ ಆ ಅನುಭವಗಳನ್ನು ವಿಸ್ತರಿಸುತ್ತಾರೆಂದು ಆಗುವುದಿಲ್ಲ. ಕೊನೆಗೆ ಸಮರ್ಥರು ಲೋಕ ಶಿಕ್ಷಕ ಮತ್ತು ಉಪದೇಶಕರಾಗಿದ್ದಾರೆ. ಆದಕ್ಕಾಗಿ ಆವಶ್ಯಕ

ವಾದ ಬಹಿರ್ಮುಖತೆ ಮತ್ತು ಸಮಾಜಸನ್ಮುಖತೆ ಅವರ ಹತ್ತಿರ ಯೋಗ್ಯ ಪ್ರಮಾಣದಲ್ಲಿವೆ. ಸುತ್ತಲಿನ ಜನತೆಯ ಕಡೆಗೆ ಅವರ ಲಕ್ಷ್ಯವಿದೆ. ಸಾಮಾನ್ಯ ಮನುಷ್ಯನ ಬುದ್ಧಿಗೆ ನಿಲುಕುವಂತೆ ಹೇಳಬೇಕೆನ್ನುವ ದೃಷ್ಟಿ ಆವರಿಸಿದೆ. ಅವರ ಈ ದೃಷ್ಟಿಯು ಉತ್ತರೋತ್ತರವಾಗಿ ಹೆಚ್ಚಿಗೆ ದೃಢವಾಗುತ್ತ ಹೋಯಿತು. ತೀರ್ಥಯಾತ್ರೆಯ ಕಾಲದಲ್ಲಿ ಅವರು ಭಾರತದ ತುಂಬ ಪಸರಿಸಿದ ನಮ್ಮ ಸಮಾಜದ ಕೆಲವು ದೃಶ್ಯಗಳನ್ನು ನೋಡಿದರು. ಅದರಿಂದ ಅವರ ದೃಷ್ಟಿ, ಕೇವಲ ಪಾರಮಾರ್ಥಿಕ ಜಿಜ್ಞಾಸೆಯನ್ನು ಧಾರಣ ಮಾಡುವಂಥ ಮುಮುಕ್ಷುಗಳಿಗೆ ಮೀಸಲಾಗಿದ್ದ ಸಮೂಹವನ್ನು ದಾಟಿ, ಐಹಿಕ ಜೀವನದಲ್ಲಿ ಅನೇಕ ದುಃಖಗಳನ್ನು ಅನುಭೋಗಿಸುವ ಮತ್ತು ಆಪತ್ತನ್ನನುಭವಿಸುವ ವಿಶಾಲವಾದ ಸಮಾಜದತ್ತ ಹೋಯಿತು. ಐಹಿಕದ ಸ್ವಲ್ಪ ಅರಿವು ಮೂಡಿದ ಬಳಿಕ, ಅನಂತರದ ಕಾಲದಲ್ಲಿ ಅವರ ಮೊದಲಿನ ನಿವೃತ್ತಿಶೀಲ ಹಾಗೂ ಪರಮಾರ್ಥಪರವಾದ ವಿಚಾರಗಳಲ್ಲಿ, ಒಂದು ವಿಶೇಷವಾದ ಟಿಸಿಲೊಡೆಯಿತು.

ನಮ್ಮ ಕಡೆಯ ಎಲ್ಲ ಸಾಧು ಸಂತರು ತೀರ್ಥಯಾತ್ರೆಯನ್ನು ಮಾಡಿದ್ದಾರೆ. ಈ ತೀರ್ಥಯಾತ್ರೆಯು ಪಾರಮಾರ್ಥಿಕ ಸಾಧನೆಯ ಒಂದು ಅಂಗವೆಂದು ತಿಳಿಯಲ್ಪಡುತ್ತದೆ. ಆದ್ದರಿಂದ ಬೇರೆ ಬೇರೆ ತೀರ್ಥಯಾತ್ರೆಗಳ ಬರೆಯಲ್ಪಟ್ಟ ವೃತ್ತಾಂತಗಳಲ್ಲಿ ಧಾರ್ಮಿಕ ದೃಷ್ಟಿಯಿಂದ ಮಹತ್ತ್ವವಾದ ಸಂಗತಿಗಳ ಉಲ್ಲೇಖ ಮಾತ್ರ ಬಂದಿವೆ. ತೀರ್ಥಯಾತ್ರೆಯ ನಿಮಿತ್ತದಿಂದ ಪ್ರವಾಸವಾಗುತ್ತದೆ. ಭಾರತವಂತೂ ಮಹಾ ದೇಶವಾಗಿದೆ. ಅದರ ನಾಲ್ಕು ದಿಕ್ಕುಗಳಿಗೆ ಹೋದರೆ, ಅನೇಕ ಪ್ರದೇಶಗಳನ್ನು ಹಾಗೂ ಅನೇಕ ಬಗೆಯ ಜನರನ್ನು ನೋಡುವ ಅವಕಾಶ ದೊರೆಯುತ್ತದೆ. ಇದರಿಂದ ಸಮಾಜ ಸ್ಥಿತಿಯನ್ನು ಸಹಜವಾಗಿ ನಿರೀಕ್ಷಿಸಲು ಸಾಧ್ಯವಿದೆ. ಆದರೆ ನಿರೀಕ್ಷಣೆಯಲ್ಲಿ ಗಮನಕ್ಕೆ ಬರುವ ಪ್ರಶ್ನೆಗಳ ಬಗೆಗೆ ವಿಚಾರಿಸುವ ಮತ್ತು ಅವುಗಳನ್ನು ಪರಿಹರಿಸುವ ಯಾವುದೇ ಮಾರ್ಗವನ್ನು ಶೋಧಿಸುವಂಥ ಸ್ವರೂಪದ ಐಹಿಕ ಜೀವನಕ್ಕೆ ಸಂಬಂಧಿಸಿದ ಯಾವುದೇ ಉದ್ದೇಶ ತೀರ್ಥಯಾತ್ರೆ ಮಾಡುತ್ತಿರುವಾಗ ಸಾಧುಸಂತರ ಮನಸ್ಸಿನಲ್ಲಿ ಇರುತ್ತಿದ್ದಿಲ್ಲ. ಸಮರ್ಥರು ತೀರ್ಥಯಾತ್ರೆ ಮಾಡುವ ಉದ್ದೇಶದಿಂದ ಹೊರಬಿದ್ದರು. ಆಗ ಅವರ ಮನಸ್ಸಿನಲ್ಲಿ ಇವುಗಳ ಬಗೆಗೆ ವಿಶೇಷವೇನೂ ಇರಲಿಕ್ಕಿಲ್ಲ. ಪ್ರತ್ಯಕ್ಷದಲ್ಲಿ ಸಂಭವಿಸಿದ್ದು ಮಾತ್ರ ಬೇರೆ.

ತೀರ್ಥಯಾತ್ರೆಗಾಗಿ ಸಂಚಾರವನ್ನು ಆರಂಭಿಸಿದ ಮೇಲೆ ಸಮರ್ಥರಿಗೆ ಹೀಗೆ ತಿಳಿಯಿತು. ಪವಿತ್ರವೆಂದು ಭಾವಿಸುವ ನಮ್ಮ ಅನೇಕ ತೀರ್ಥಸ್ಥಾನಗಳು ಭ್ರಷ್ಟವಾಗಿವೆ, ದೇವಾಲಯಗಳು ನಾಶವಾಗಿವೆ. ಮಥುರಾ ಇಲ್ಲವೆ ಅಯೋಧ್ಯೆಗಳಂಥ ಮಹತ್ತ್ವ ಕ್ಷೇತ್ರಗಳು ಕೂಡ ಇದರಿಂದ ಬಿಡುಗಡೆಯಾಗಿಲ್ಲ. ಅಲ್ಲಿಯ ವಿಧ್ವಂಸಕ ಕಾರ್ಯ ಹೆಚ್ಚಿನ ಪ್ರಮಾಣದಲ್ಲಿದೆ. ಇದರ ಜತೆಗೆ ನಮ್ಮ ಸಮಾಜದ ಅವಸ್ಥೆಯೂ ಅತೀ ಶೋಚನೀಯವಾಗಿದೆ. ಇದೆಲ್ಲ ಅವರಿಗೆ ಕಂಡುಬಂದಿತು. ಸಮಾಜದ ಈ ದುರವಸ್ಥೆಯ ಚಿತ್ರಗಳು ಸಮರ್ಥರ ಅನೇಕ ಬಿಡಿ ಪ್ರಕರಣಗಳಲ್ಲಿ ಮೂಡಿಬಂದಿವೆ. ಕ್ಷಾಮ ಮತ್ತು ಯುದ್ಧ ಇಂಥ ಆಪತ್ತುಗಳು ಆ ಕಾಲದಲ್ಲಿ ನಿತ್ಯವಾಗಿ ಬರುತ್ತಲಿದ್ದವು.

ಅವುಗಳಲ್ಲಿ ಸಾಮಾನ್ಯ ಜನತೆ ಹುರಪಳಿಸಿ ಹೋಗುತ್ತಿತ್ತು. ಮಹಿಳೆಯ ಮೇಲೆ ಅತ್ಯಾಚಾರವಾಗುವುದು ಮತ್ತು ಅವರನ್ನು ಓಡಿಸಿಕೊಂಡು ಹೋಗುವುದು ಇವೆಲ್ಲ ನಡೆದಿದ್ದವು. ಅನೇಕ ಉತ್ತಮ ಸ್ತ್ರೀಯರು ಮಾನಹಾನಿಗೆ ಒಳಗಾದರು. ಅನೇಕರು ಇತರ ದೇಶಗಳಿಗೆ ಒಯ್ದು ಮಾರಲ್ಪಟ್ಟರು. ಅದೆಷ್ಟೋ ಜನ ಹೆಣ್ಣುಮಕ್ಕಳು ಕಷ್ಟಕ್ಕೆ ಒಳಗಾಗಿ ಮೃತ್ಯುಮುಖದಲ್ಲಿ ಬಿದ್ದರು. ಇಂಥ ಉಲ್ಲೇಖಗಳನ್ನು ಸಮರ್ಥರು ಮಾಡಿದ್ದಾರೆ. ಸ್ತ್ರೀಯರ ಮೇಲಾಗುವ ಅಪಮಾನದಿಂದ ಅಂತಃಕರಣಕ್ಕೆ ವೇದನೆ ಯಾಗದೆ ಈ ಉಲ್ಲೇಖಗಳು ಬರುವುದಿಲ್ಲ. ಸಾಮಾನ್ಯ ಪ್ರಾಪಂಚಿಕ ಮನುಷ್ಯನ ಸಂಸಾರದ ದುರ್ದೆಶೆ ಹೇಗಾಗುತ್ತದೆ ಇದರ ವರ್ಣನೆಯನ್ನು ದಾಸಬೋಧೆಯಲ್ಲಿ ಮಾಡುತ್ತಿರುವಾಗ "ಪರಚಕ್ರ ಬಂತು!" "ಹೆಂಡಂದಿರನ್ನು ಬಂಧಿಸಿದರು" ಮತ್ತು ಅವರ ಮುಂದೆ "ನಿಮ್ಮ ಹೆಂಡಂದಿರನ್ನು ಭ್ರಷ್ಟಗೊಳಿಸಿದರು" ಹೀಗೆ ಇವುಗಳ ಬಗೆಗೆ ವಿವರಣೆಯನ್ನು ಸಮರ್ಥರು ಕೊಟ್ಟಿದ್ದಾರೆ (ದಾಸಬೋಧೆ 3.5.27 ರಿಂದ 30).

ಹೇಮಗಾವ ಹಾಗೂ ಇಂದೂರಬೋಧನದ ಮಠದಲ್ಲಿ ಸಮರ್ಥ ಸಾಹಿತ್ಯದ ಸಂಶೋಧಕರಾದ ಶ್ರೀ ಶಂಕರರಾವ್ ದೇವ ಇವರಿಗೆ ಮೂರು ಬಿಡಿ ಪ್ರಕರಣಗಳು ದೊರೆತಿವೆ. ಸಮರ್ಥರಾಗಲಿ ಇಲ್ಲವೆ ಆ ಪ್ರಕರಣಗಳನ್ನು ಪ್ರತಿಲೇಖನ ಮಾಡಿದ ಲೇಖಕರಾಗಲಿ ಆ ಪ್ರಕರಣಗಳಿಗೆ 'ಪರಚಕ್ರ ನಿರೂಪಣೆ' ಮತ್ತು 'ದೇವರಿಂದ ಮತ್ತು ರಾಜರಿಂದ ಒದಗಿದ ಸಂಕಟ!' ಈ ಹೆಸರುಗಳನ್ನು ಕೊಟ್ಟಿದ್ದು ತಿಳಿಯುತ್ತದೆ. ಈ ಪ್ರಕರಣಗಳನ್ನು ಸಮರ್ಥರು ಯಾವಾಗ ಬರೆದರು ಎಂದು ತಿಳಿಯಲು ಯಾವ ಸಾಧನವೂ ಇಲ್ಲ. ನಾಸಿಕವು ಒಂದು ಕ್ಷೇತ್ರವಿದ್ದು, ಅಲ್ಲಿ ದೇಶದ ಮತ್ತು ಮಹಾರಾಷ್ಟ್ರದ ಅನೇಕ ಭಾಗಗಳಿಂದ ಯಾತ್ರೆಗಾಗಿ ಜನ ಬರುತ್ತಲಿದ್ದರು. ಅವರಿಂದ ಸಮರ್ಥರಿಗೆ ದೇಶದಲ್ಲಿ ಜರುಗುತ್ತಲಿರುವ ಅಪರಾಧಗಳ ಸಮಾಚಾರವು ತಿಳಿಸುತ್ತಿತ್ತು. ಅದನ್ನು ಕೇಳಿದ ಬಳಿಕ ಸಮರ್ಥರು ಈ ರಚನೆಗಳನ್ನು ಮಾಡಿರಬೇಕು, ಎಂಬ ಒಂದು ತರ್ಕವನ್ನು ಮಾಡುತ್ತಾರೆ. ಆದರೆ ಇದರ ಸಾಧ್ಯತೆ ಕಡಿಮೆಯಿರಬೇಕು. ಟಾಕಳಿಯಿಂದ ತೀರ್ಥಯಾತ್ರೆಗಾಗಿ ಹೊರಬೀಳುವ ಸಮಯ ಸಮರ್ಥರ ವಯಸ್ಸು ಇಪ್ಪತ್ನಾಲ್ಕು ವರ್ಷ. ಇಂಥ ತರುಣ ವಯಸ್ಸಿನಲ್ಲಿ ಈ ವಿರಕ್ತ ಪುರುಷನಿಗೆ ದೇಶದಲ್ಲಿಯ ಅಪರಾಧಗಳ ಸಮಾಚಾರವನ್ನು ಬೇರೆಯವರು ಹೇಳುವ ಸಾಧ್ಯತೆ ಬಹಳ ಕಡಿಮೆಯಿದೆ. ಕೇವಲ ಕಿವಿಯಲ್ಲಿ ಯಾವುದೇ ಸತ್ಯಸಂಗತಿ ಬಿದ್ದಿದೆಯೆಂದು, ಅದರ ಬಗೆಗೆ ಸ್ವತಂತ್ರ ರಚನೆಗಳನ್ನು ಮಾಡುವಂಥ ಪ್ರೇರಣೆ ದೊರೆಯಲಾರದು. ಈ ಮೂರು ಪ್ರಕರಣಗಳನ್ನು ಮತ್ತು ಇದೇ ರೀತಿಯ ಇತರೆಡೆ ಬರುವ ಬಿಡಿಯಾದ ಪ್ರಕರಣಗಳನ್ನು ಓದುತ್ತಿರುವಾಗ, ಸಮರ್ಥರೇ ಈ ಎಲ್ಲ ಪರಿಸ್ಥಿತಿಗಳನ್ನು ಕಣ್ಣಾರೆ ಕಂಡಿರಬೇಕೆಂದು ಮನಸ್ಸಿನಲ್ಲಿ ಮೂಡುತ್ತದೆ. ಅವುಗಳಲ್ಲಿಯ ವರ್ಣನೆಗಳು ಹೀಗೆ ಹೃದಯಕ್ಕೆ ಸ್ಪರ್ಶಿಸುವ ಹಾಗೂ ಅಂತಃಕರಣವನ್ನು ಭೇದಿಸುವಂತಿವೆ. ಆಗ ತೀರ್ಥ ಯಾತ್ರೆಯಲ್ಲಿ ದೇಶದಲ್ಲಿ ಜರುಗಿದ ಪರಿಸ್ಥಿತಿಯ ಅವಲೋಕನದಲ್ಲಿಯೇ ಇಂಥ ಉದ್ಗಾರಗಳು ಬಾಯಿಂದ ಹೊರಡುತ್ತಿದ್ದುವೆಂದು ನಂಬಲು ಮನಸ್ಸಾಗುತ್ತದೆ.

ಈ ವರ್ಣನೆಗಳಲ್ಲಿ ಸಂಸಾರದಲ್ಲಿ ಬರುವ ಎಷ್ಟೋ ಸೂಕ್ಷ್ಮವಾದ ಆಪತ್ತುಗಳ ಉಲ್ಲೇಖವನ್ನು ಸಮರ್ಥರು ಮಾಡಿದ್ದಾರೆ. ಇವುಗಳನ್ನು ನೋಡಿದರೆ ಅವರ ನಿರೀಕ್ಷಣಾ ಶಕ್ತಿಯ ಬಗೆಗೆ ಹಾಗೂ ಅವುಗಳಲ್ಲಿಯ ಅವರ ಸಂವೇದನಾಶೀಲತೆಯ ಬಗೆಗೆ ಅಪಾರ ಸೋಜಿಗವೆನಿಸುತ್ತದೆ. ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರ ಸ್ಮರಣೆ ಅನಿವಾರ್ಯವಾಗಿ ಆಗುತ್ತದೆ. ವಿವೇಕಾನಂದರು ಮನಸ್ಸಿನಿಂದ ಪೂರ್ಣ ನಿವೃತ್ತಿಯಾದವರು. ಪ್ರಪಂಚದತ್ತ ಹಾಗೂ ಸಮಾಜದತ್ತ ನೋಡಲು ಅವರಿಗೆ ಯಾವ ಕಾರಣವೂ ಇಲ್ಲ. ನಿರ್ವಿಕಲ್ಪ ಸಮಾಧಿ ಪ್ರಾಪ್ತವಾಗಿತ್ತು. ಅಂತರಂಗದೊಳಗೆ ಹಿಮಾಲಯಕ್ಕೆ ಹೋಗಿ ಏಕಾಂತವಾಸದಲ್ಲಿ ಆತ್ಮಚಿಂತನೆ ಮಾಡುವ ಆಕರ್ಷಣೆ ಯಿತ್ತು. ಆದರೆ ವಿವೇಕಾನಂದರು ಸಮಾಜದ ತೀರ ಕೆಳಮಟ್ಟದ ಮನುಷ್ಯರು ಅನ್ನಾನ್ನಗತಿಕರಾಗಿರುವುದನ್ನು ಕಂಡರು. ಅವರ ಕಣ್ಣಲ್ಲಿ ದಳದಳ ನೀರು ಹನಿದವು. ಸಮರ್ಥರ ಉದಾಹರಣೆಯೂ ನಿಶ್ಚಿತವಾಗಿ ಇದೇ ರೀತಿಯದಾಗಿದೆ. ಸರ್ವಸಾಮಾನ್ಯ ಮನುಷ್ಯನು ಸಂಸಾರ ಮಾಡುತ್ತಿರಲು, ಅನುಭವಿಸಬೇಕಾದ ಆಪತ್ತುಗಳನ್ನು ಅವರು ತಿಳಿದವರಾಗಿದ್ದರು.

ಪರದಾಳಿಯ ನಿರೂಪಣೆ ಇಲ್ಲವೆ ದೇವರಿಂದ ರಾಜರಿಂದ ಒದಗಿದ ಸಂಕಟ ಇಂಥ ರಚನೆಗಳಲ್ಲಿ ಸಮರ್ಥರು ಮಾಡಿದ ವರ್ಣನೆಗಳು ಆ ದೃಷ್ಟಿಯಿಂದ ನೋಡುವಂತಿವೆ. ಒಳ್ಳೆಯವರಾಗಿ ಕಾಣುವ ಜನರು ಹಾದರಕ್ಕೆ ಕಳುವು ಮಾಡುತ್ತಾರೆ. ಬಟ್ಟೆಬರೆ ಕಸಿದುಕೊಂಡು ಓಡುತ್ತಾರೆ. ಕಾಳುಕಡ್ಡಿ ಅತೀ ತುಟ್ಟಿಯಾದವು ಮತ್ತು ಆ ತುಟ್ಟಿ ಧಾನ್ಯವೇ ದೊರೆಯುವುದಿಲ್ಲ. ಇಂಥ ದುರ್ದೆಶೆಗಳ ಅನೇಕ ವಿವರಗಳನ್ನು ಸಮರ್ಥರು ಕೊಟ್ಟಿದ್ದಾರೆ. ಪರದಾಳಿ ನಿರೂಪಣೆ ಈ ಪ್ರಕರಣದಲ್ಲಿ ಪ್ರಾರಂಭದ ಇಪ್ಪತ್ತೈದು, ಇಪ್ಪತ್ತಾರು ಓವಿಗಳಿದ್ದ ಪುಟಗಳು ನಾಶವಾಗಿವೆ. ಅನಂತರ ಬರುವ ಓವಿಗಳಲ್ಲಿ "ಪದಾರ್ಥ ಮಾತ್ರ ನಾಶವಾಗಿ ಹೋಯಿತು! ಕೇವಲ ದೇಶವೇ ಉಳಿ ಯಿತು!" ಹೀಗೆ ಸಮರ್ಥರು ತೆಗೆದ ಉದ್ಗಾರವು ಅತ್ಯಂತ ಭೇದಕ ಹಾಗೂ ಹೃದಯ ಸ್ಪರ್ಶಿಯಾಗಿವೆ. ಪ್ರಪಂಚದಲ್ಲಿ ಜನರು ಸಂಗ್ರಹಿಸಿದ ಎಷ್ಟೋ ವಸ್ತುಗಳು ಕಳೆದು ಹೋದವು. ಆದರೆ ಕೇವಲ ಭೂಮಿ ಉಳಿಯಿತು ಎಂಬ ಸಾಮಾನ್ಯ ಹೇಳಿಕೆಯಿದೆ. ಯಾವ ಯಾವ ವಸ್ತುಗಳನ್ನು ಅಪಹರಿಸಲು ಸಾಧ್ಯವೋ, ಅವುಗಳನ್ನೆಲ್ಲ ಆಕ್ರಮಣ ಕಾರರು ಲೂಟಿ ಮಾಡಿ ಒಯ್ದರು. ಭೂಮಿಯನ್ನು ಕಿತ್ತುಕೊಂಡು ಹೋಗಲಾಗುವು ದಿಲ್ಲವೆಂದು ಅದು ಅಷ್ಟೇ ಉಳಿಯಿತೆಂದು ಅವರು ಹೇಳುತ್ತಿದ್ದಾರೆ. ದುಸ್ಥಿತಿಯಲ್ಲಿಯ ಉನ್ನತವರ್ಗವನ್ನು ಕಲ್ಪಿಸಲಾಗುವುದಿಲ್ಲ. ಜನರಿಗೆ ತಿನ್ನಲು ಅನ್ನವಿಲ್ಲ. ಶರೀರದ ಮೇಲೆ ಹೊದ್ದುಕೊಳ್ಳಲು ಬಟ್ಟೆಗಳಿಲ್ಲ, ಹಾಸಲೂ ಹೊದೆಯಲೂ ಇಲ್ಲ. ನಿವಾಸಕ್ಕಾಗಿ ಸಾಮಾನ್ಯ ಗುಡಿಸಲೂ ಇಲ್ಲ, ಇಷ್ಟೇ ಅಲ್ಲ, ಗುಡಿಸಲನ್ನು ನಿರ್ಮಿಸಬೇಕೆಂದರೆ ಅದಕ್ಕೆ ಬೇಕಾಗುವ ಸಾಮಗ್ರಿಯಿಲ್ಲ. ಹೀಗೆ ಎಲ್ಲವೂ ತೊಂದರೆದಾಯಕವಾಗಿದೆ. ಟಾಕಳಿಯ ವಾಸ್ತವ್ಯದಲ್ಲಿರಬೇಕು ಇಲ್ಲವೆ ಅನಂತರದಲ್ಲಿ ತೀರ್ಥಯಾತ್ರೆ ಮಾಡುತ್ತಿರು ವಾಗ ಇರಬೇಕು, ಸರ್ವಸಾಮಾನ್ಯ ಪ್ರಾಪಂಚಿಕ ವ್ಯಕ್ತಿಗಳ ದೈನಂದಿನ ಜೀವನ

ದಲ್ಲಿಯ ದೈನ್ಯ ಮತ್ತು ದುಃಖಗಳು ಸಮರ್ಥರ ಅಂತಃಕರಣವನ್ನು ತಟ್ಟಿವೆ. ಹಾಗೆ ಮುಟ್ಟಿದ್ದರಿಂದಲೇ ಅವರಿಗೆ ಅವುಗಳನ್ನು ಶಬ್ದಗಳಲ್ಲಿ ರೂಪಿಸಬೇಕೆಂದು ತಿಳಿದಿದ್ದು ಸ್ಪಷ್ಟವಿದೆ.

ಸಂತರು ಸಾಮಾನ್ಯ ಮನುಷ್ಯನ ದುಃಖವನ್ನು ಅರಿತಿದ್ದಾರೆಂಬುದು ಅವರ ಇಡೀ ಸಾಹಿತ್ಯದಲ್ಲಿ ಎಲ್ಲೆಡೆ ದೊರೆಯುತ್ತದೆ. ಆದರೆ ಸಂತರು ಅರಿತ ಈ ದುಃಖವು ಐಹಿಕ ದಲ್ಲಿಲ್ಲ. ಅದು ಪಾರಮಾರ್ಥಿಕ ಮಟ್ಟದಲ್ಲಿ ತಿಳಿಯಬೇಕಾದ ದುಃಖವಾಗಿದೆ. ಮನುಷ್ಯನು ತಾತ್ಕಾಲಿಕ ಮೋಹದಲ್ಲಿ ಸಿಲುಕುತ್ತಾನೆ. ಶಾಶ್ವತ ಸುಖ ಯಾವುದು ಎಂಬುದರ ಪರಿವೆ ಆತನಲ್ಲಿರುವುದಿಲ್ಲ. ಅದರಿಂದ ಜನ್ಮಮರಣದ ಚಕ್ರದಲ್ಲಿ ಸಿಲುಕಿ ಬೀಳುತ್ತಾನೆ, ಹೀಗೆ ಈ ಸಂತರು ಅರಿತುಕೊಂಡ ಸಾಮಾನ್ಯ ಅಜ್ಞಾನಿ ಮನುಷ್ಯರ ದುಃಖವು ತಮ್ಮ ಪ್ರಿಯ ವ್ಯಕ್ತಿಯ ಹುಟ್ಟುಹಬ್ಬವನ್ನು ಉತ್ಸಾಹದಿಂದ ಆಚರಿಸು ತ್ತಾರೆ. ಆತನ ಸಾವು ಒಂದು ವರ್ಷ ಹತ್ತಿರವಾಯಿತೆಂಬುದರ ಅರಿವೇ ಇರುವುದಿಲ್ಲ. ಕ್ಷಣಭಂಗುರ ಸಂಸಾರದಲ್ಲಿ ಅಷ್ಟೇ ಕ್ಷಣಭಂಗುರವಾಗಿರುವ ಇಂದ್ರಿಯಸುಖವು ಮುಳ್ಳಿನ ಹಾಸಿಗೆಯ ಮೇಲಿನ ನಿದ್ರೆಯಿದೆ ಎಂಬುದು ಪ್ರಪಂಚದ ಮೋಹದಲ್ಲಿ ಸಿಲುಕಿಕೊಂಡ ಮನುಷ್ಯನಿಗೆ ಪರಿವೆಯಿಲ್ಲ. ಅದಕ್ಕಾಗಿ ಸಂತರಿಗೆ ದುಃಖವಾಗಿದೆ. ಸಂತರ ಸಾಹಿತ್ಯದಲ್ಲಿ ಎಲ್ಲೆಡೆ ಬರುವ ದುಃಖದ ವರ್ಣನೆಗಳು ಈ ದೃಷ್ಟಿಕೋನದಿಂದ ಮಾಡಲ್ಪಟ್ಟಿವೆ. ಈ ದುಃಖವನ್ನು ಅರಿಯುವ ದೃಷ್ಟಿಯಲ್ಲಿ ಆ ಸಂತರು ಮತ್ತು ಸಾಮಾನ್ಯ ಅಜ್ಞಾನಿ ಮನುಷ್ಯರು ಒಂದೇ ಪಾತಳಿಯಲ್ಲಿ ಎಂದಿಗೂ ಬರಲು ಸಾಧ್ಯ ವಿಲ್ಲ. ಪ್ರಪಂಚದಲ್ಲಿಯ ಯಾವ ದುಃಖಗಳನ್ನು ಸಂತರು ತಿಳಿದಿರುವರೋ ಅವುಗಳನ್ನು ಅರಗಿಸಿಕೊಳ್ಳುವ ಬುದ್ಧಿಯ ಉತ್ತರ ಸಾಮಾನ್ಯ ಮನುಷ್ಯನಿಗೆ ಲಭಿಸಿಲ್ಲ. ಸಂಸಾರ ಮಾಡುತ್ತಿರುವ ಮನುಷ್ಯನಿಗೆ ಅದರ ನೋವನ್ನು ಅನುಭವಿಸಬೇಕಾಗುತ್ತದೆ. ಆ ದುಃಖವು ಸಂತರ ಲೇಖನದ ಅಸ್ತಿತ್ವದಲ್ಲಿ ಇರದಿದ್ದು ಅದರ ನಿರಾಕರಣೆಯ ಯಾವುದೇ ಮಾರ್ಗವನ್ನು ಶೋಧಿಸಬೇಕೆಂದು ಅವರು ಭಾವಿಸುವುದಿಲ್ಲ. ಇಂಥ ಈ ಸ್ಥಿತಿಯು ನಮ್ಮ ದೇಶದಲ್ಲಿ ಕೆಲವೊಂದು ಶತಮಾನಗಳಿಂದ ನಡೆಯುತ್ತ ಬಂದಿದೆ.

ಸಮರ್ಥರು ಇದಕ್ಕೆ ಅಪವಾದವಾದರು. ಆಧ್ಯಾತ್ಮದ ಮಟ್ಟದಿಂದ ವಿಚಾರ ಮಾಡುತ್ತ ಪ್ರಪಂಚವು ಮಿಥ್ಯೆಯಾಗಿದ್ದರೂ, ಆ ಪ್ರಪಂಚವನ್ನು ಮಾಡುವ ಸಂಸಾರಿ ಪುರುಷರಿಗಾಗುವ ದುಃಖವು ಮಿಥ್ಯೆಯಾಗಿರುವುದಿಲ್ಲ, ಇದನ್ನು ಸಮರ್ಥರು ಅರಿತರು. ಅರಿತರಷ್ಟೇ ಅಲ್ಲ ಆ ದುಃಖದ ಪರಿಹಾರವಾಗಬೇಕೆಂದು ಅವರು ಭಾವಿಸಿ ದರು. ಆ ದುಃಖವನ್ನು ಅನುಭವಿಸುವ ಸಾಮಾನ್ಯ ಮನುಷ್ಯನಿಗೆ ಪ್ರಪಂಚದ ಮಿಥ್ಯತ್ವದ ತತ್ತ್ವಜ್ಞಾನವನ್ನು ಹೇಳಲು ಪ್ರಯತ್ನ ಮಾಡುವುದು ವ್ಯರ್ಥವೆಂದು ಅವರು ಗುರುತಿಸಿದರು. ಕ್ಷಣಭಂಗುರ ಸುಖದ ಹವ್ಯಾಸ ಹತ್ತುವುದರಿಂದ ಇಲ್ಲವೆ ನಿತ್ಯಾನಿತ್ಯ ವಿವೇಕದ ಅಭಾವದಿಂದ ಪ್ರಾಪ್ತವಾಗುವ ದುಃಖದ ಉಲ್ಲೇಖವನ್ನು ಸಮರ್ಥರೂ ಮಾಡಿದ್ದಾರೆ. ಆದರೆ ಅದರ ಜತೆ ಐಹಿಕ ಜೀವನದಲ್ಲಿ ಸಂಸಾರಿ ಪುರುಷನು ಯಾವ ದುಃಖವನ್ನು ಅನುಭವಿಸಬೇಕಾಗುವುದೋ ಅದನ್ನೇ ಅವರು

ಗುರುತಿಸಿದ್ದಾರೆ. ಅದನ್ನು ಕೇವಲ ಗುರುತಿಸಿರಲಿಲ್ಲ, ಆದರೆ ಆ ದುಃಖದತ್ತ ಅವರು ಒಂದು ಆರ್ತ ಸಹಾನುಭೂತಿಯಿಂದ ನೋಡಿದ್ದಾರೆ. ಅನ್ನ ಮತ್ತು ಬಟ್ಟೆ ಇವುಗಳ ಅಭಾವದಿಂದ ಅನುಭವಿಸಬೇಕಾಗುವ ದೈನ್ಯ ಹಾಗೂ ದಾರಿದ್ರ್ಯ ಇವುಗಳಿಂದ ಹುಟ್ಟುವ ಇಲ್ಲವೆ ಸ್ವರಾಜ್ಯದ ಲೋಪ ಮತ್ತು ಪರಕೀಯರ ಅನ್ಯಾಯ ಇವುಗಳ ಮೂಲಕ ಅವರವರ ಪಾಲಿಗೆ ಒದಗುವ ದುಃಖಗಳನ್ನು ಸಮರ್ಥರು ಅರಿತಿದ್ದಾರೆ. ಆ ದುಃಖಗಳ ದರ್ಶನದಿಂದ ಅವರ ಮನಸ್ಸು ಕರಗಿದೆ. ಅದರಿಂದ "ಒಳಿತಾಗುವುದು ಆಗುವುದೆಂಬ ಆಸೆ! ಒಳಿತಾಗದು ಆಗದೆಂಬ ನಿರಾಸೆ!" ಇಂಥ ಶಬ್ದಗಳಲ್ಲಿ ಸಾಮಾನ್ಯ ಮನುಷ್ಯನಿಗಾಗುವ ನಿರಾಸೆಯನ್ನು ಅವರು ಒಂದು ಬಿಡಿ ಪ್ರಕರಣದಲ್ಲಿ ವರ್ಣಿಸಿ ದ್ದಾರೆ. ಈ ರೀತಿಯ ಅನೇಕ ಉದ್ಗಾರಗಳನ್ನು ಸಮರ್ಥರು ತಮ್ಮ ಬಿಡಿ ಪ್ರಕರಣ ಗಳಲ್ಲಿ ತೆಗೆದಿದ್ದಾರೆ. ಈ ದುಃಖವನ್ನು ಅವರು ಉಪೇಕ್ಷಣೀಯವೆಂದು ತಿಳಿದಿರಲಿಲ್ಲ. ಇಲ್ಲವೆ "ಇದು ನಿನ್ನ ಪ್ರಾರಬ್ಧ, ನೀನು ಮಾಡಿದ ಕರ್ಮಫಲವೇ ಇದು" ಎಂದು ಹೀಗೆ ಹೇಳಿ ಅವರು ಅದನ್ನು ಬದಿಗೆ ಸರಿಸಿರಲಿಲ್ಲ. ಆದರೆ ಈ ದುಃಖವು ಕಡಿಮೆ ಯಾಗಬೇಕೆಂದು ಅವರು ಮನಃಪೂರ್ವಕವಾಗಿ ಬಗೆದಿದ್ದಾರೆ. ಸಮರ್ಥರ ಈ ಕರುಣೆ ಪಾರಮಾರ್ಥಿಕ ಮಟ್ಟದಲ್ಲಿಯದಲ್ಲ, ಶುದ್ಧ ಐಹಿಕಮಟ್ಟದಲ್ಲಿಯದು. ಈ ಐಹಿಕ ಹಿನ್ನೆಲೆ ಸಮರ್ಥರ ವೈಶಿಷ್ಟ್ಯವಾಗಿದೆ.

ಈ ದುಃಖದ ಪರಿಹಾರ ಮಾರ್ಗವನ್ನು ಸಮರ್ಥರು ಆಧ್ಯಾತ್ಮದ ಹಿನ್ನೆಲೆಯಲ್ಲಿ ಹೇಳಿಲ್ಲ. ಈ ಎಲ್ಲ ಮೃತ್ಯುಲೋಕವು ಅಶಾಶ್ವತ, ಈ ವಿನಾಶಕಾರಕ ಜೀವನದಲ್ಲಿ ಪ್ರಾಪ್ತವಾಗುವ ದುಃಖದ ವಿಚಾರವನ್ನು ಮಾಡುವ ಕಾರಣವಿಲ್ಲ. ಆದರೂ ಹಾಗೆ ವಿಚಾರಮಾಡುವುದು ಇದು ನಿಮ್ಮ ಅಂತಿಮ ಹಿತದ್ದಲ್ಲ, ಆಗ ಆ ದುಃಖದ ವಿಚಾರ ಮಾಡುತ್ತ ಕೂಡದೆ ಈಶ್ವರನ ಧ್ಯಾನ ಮಾಡಿರಿ ಮತ್ತು ಕೇವಲ ಈ ತಾತ್ಪೂರ್ತಿಕ ದುಃಖದಲ್ಲಿಯೇ ಅಲ್ಲದಿದ್ದರೂ ಮಾನವನ ಹಣೆಯಲ್ಲಿ ಆತನ ಜನ್ಮದಿಂದ ಬರೆಯಲ್ಪಟ್ಟ ಕ್ಷಣಭಂಗುರತೆಯ ಶಾಪದಿಂದ ಮುಕ್ತರಾಗಿರಿ, ಹೀಗೆ ಅವರು ಉಪದೇಶವನ್ನೂ ಮಾಡಿಲ್ಲ. ಹಾಗೆ ಉಪದೇಶಿಸುವುದು ಒಂದು ವೇಳೆ ಪಾರಮಾರ್ಥಿಕ ದೃಷ್ಟಿಯಿಂದ ಸುಸಂಗತವಾಗಿರಬಹುದು. ಆಧ್ಯಾತ್ಮಿಕ ದೃಷ್ಟಿಯಿಂದ ಅದು ಮಹತ್ತ್ವದ್ದಾಗಿರ ಬಹುದು, ಯಾವುದೇ ನಿಮಿತ್ತದಿಂದಾದರೂ ಇರಲಿ, ಆದರೆ ಮನುಷ್ಯನು ಪ್ರಪಂಚ ದಿಂದ ವಿಮುಖನಾದರೆ ಮತ್ತು ಮೋಕ್ಷ ಸಾಧನೆಯತ್ತ ಹೊರಳಿದರೆ ಆ ಪ್ರಸಂಗವು ಆತನ ಶಾಶ್ವತ ಕಲ್ಯಾಣಕ್ಕೆ ಇರುವುದೆಂದು ಸಮರ್ಥರು ತಿಳಿದಿರಲಿಲ್ಲ. ಆದ್ದರಿಂದ ಈ ಐಹಿಕದಲ್ಲಿಯ ದುಃಖವನ್ನು ನಾಶಮಾಡಲು, ಐಹಿಕವನ್ನು ತ್ಯಜಿಸಿ ಪಾರಲೌಕಿಕ ಕಲ್ಯಾಣದ ಆಧ್ಯಾತ್ಮಿಕ ಮಾರ್ಗವನ್ನು ಹಿಡಿಯುವ ಉಪಾಯವನ್ನು ಅವರು ಹೇಳಿಲ್ಲ. ಮಾನವ ಜೀವನದಲ್ಲಿಯ ದುಃಖವನ್ನೂ ಅವರು ಐಹಿಕ ಮಟ್ಟದಲ್ಲಿ ಅರಿತು ಕೊಂಡರು. ಆ ಸಮಯದಲ್ಲಿ ಆ ದುಃಖವನ್ನು ಕಳೆಯಲು ಯಾವ ಉಪಾಯವನ್ನು ಅವರು ಹೇಳಿದರೋ, ಅದನ್ನೇ ಐಹಿಕ ಪಾತಳಿಯಲ್ಲಿ ಹೇಳಿದರು.

ಈ ಉಪಾಯವನ್ನು ಹೇಳುತ್ತಿರುವಾಗ ಸಮರ್ಥರು ಅದರಲ್ಲಿ ಪಾರಮಾರ್ಥಿಕ

ವಿಚಾರಗಳ ಮಿಶ್ರಣವಾಗಲು ಬಿಡಲಿಲ್ಲ. ಇದು ಅವರ ವೈಶಿಷ್ಟ್ಯವೆಂದು ಹೇಳಬೇಕು. ಬುದ್ಧಿ ಹಾಗೂ ತರ್ಕ ಇವುಗಳ ಆಶ್ರಯವನ್ನು ಎಂದಿಗೂ ಬಿಡಲಾರದ ಅವರ ಪ್ರವೃತ್ತಿಯಿಂದ ಮತ್ತು ವಾಸ್ತವತೆಯ ಸ್ಪಷ್ಟ ಪ್ರಜ್ಞೆಯನ್ನು ಸತತ ಕಾಯ್ದುಕೊಳ್ಳುವ ಅವರ ನಿಷ್ಠಾಪೂರ್ವಕ ಕಾರ್ಯಗಳಿಂದ ಇದು ಸಾಧ್ಯವಾಯಿತು. ಆದ್ದರಿಂದ ಈಶ್ವರ ಅವತಾರವಾಗುವುದು, ಅದು ನಿಮ್ಮ ದುಃಖವನ್ನು ನಿವಾರಿಸುವುದು ಎಂದವರು ಯಾವಾಗಲೂ ಹೇಳಿಲ್ಲ. ಅವರ ಎಲ್ಲ ಭಾರವು ಮಾನವಿ ಪ್ರಯತ್ನದ ಮೇಲಿದೆ. ಅವರು ಸಾಮರ್ಥ್ಯದ ಉಪಾಸನೆಯತ್ತ ಗಮನ ಹರಿಸಿದ್ದಾರೆ. ಸ್ವಧರ್ಮ ರಕ್ಷಣೆಗಾಗಿ ಸ್ವಧರ್ಮಿ ಪುರುಷರ "ದೇವರ ಕೈವಾರಿ" ಪಡೆಯುವ ಅರಸರ ರಾಜ್ಯವಿರಬೇಕಾಗುವುದೆಂದು ಅವರು ಗಮನ ಹರಿಸಿದ್ದಾರೆ. ಇಂಥ ರಾಜ್ಯಗಳು ಕೇವಲ ಪರಮೇಶ್ವರನ ಪ್ರಾರ್ಥನೆಯಿಂದ ನಿರ್ಮಾಣವಾಗುತ್ತವೆಂದು ಅವರು ತಿಳಿಯಲಿಲ್ಲ ಮತ್ತು ಹಾಗೆ ಹೇಳಿಯೂ ಇಲ್ಲ. "ನೀ ಬಯಸಿದ ರಾಜನನು ನೀ ಬೆಳೆಸು ! ಶೀಘ್ರ ನಮ್ಮತ್ತ ದೃಷ್ಟಿಸು !" ಹೀಗೆ ಅವರು ತುಳಜಾಭವಾನಿಯ ಪ್ರಾರ್ಥನೆ ಮಾಡಿದ್ದು ಸತ್ಯ. ಆದರೆ ಪ್ರಾರ್ಥನೆಯು ತಮ್ಮ ಸ್ವಂತದ ಹಾಗೂ ಸಮಾಜದ ಆತ್ಮವಿಶ್ವಾಸವನ್ನು ಬೆಳೆಸಲು ಮತ್ತು ತಮ್ಮ ಪ್ರಯತ್ನಕ್ಕೆ ಭಗವಂತನ ಅಧಿಷ್ಠಾನ ನಿರ್ಮಾಣ ಮಾಡಲು ಸೀಮಿತವಾಗಿದೆ. ಆ ಪ್ರಾರ್ಥನೆಯ ಮೇಲೆಯೇ ಅವರು ಎಂದಿಗೂ ಅವಲಂಬಿತರಾಗಿರಲಿಲ್ಲ. "ರಾಜ್ಯಗಳು ದೊರೆಯುವವು ಶಕ್ತಿಯಿಂದ। ಯತ್ನವಾಗುವುದು ಯುಕ್ತಿಯಿಂದ !" ಈ ಮಂತ್ರವನ್ನು ಅವರು ಹೇಳಿದ್ದಾರೆ. ಇವುಗಳನ್ನು ಆಚರಣೆಯಲ್ಲಿ ತಂದರೆ "ಎಲ್ಲಿ ಶಕ್ತಿ ಯುಕ್ತಿ ಇರುವವೋ ಅಲ್ಲಿ ಶ್ರೀಯಸ್ಸು ಉಳಿಯುತ್ತದೆ ||" ಹೀಗೆ ಅದರ ಫಲಶ್ರುತಿಯನ್ನು ಹೇಳಿದ್ದಾರೆ.

ಸಮಾಜದಲ್ಲಿ ಜಾಗೃತಿಯಾಗಬೇಕೆಂದಿರಲಿ ಮತ್ತು ಅದರ ಸ್ಥಳದಲ್ಲಿ ಸಾಮರ್ಥ್ಯದ ಅನುಭವ ಹುಟ್ಟುವುದಿರಲಿ, ಯಾವ ಕಾರಣದಿಂದಾದರೂ ಸಮಾಜದಲ್ಲಿ ಜನರು ಒಟ್ಟಿಗೆ ಸೇರಬೇಕಾಗುತ್ತದೆ. ಅವರು ಹಾಗೆ ಒಟ್ಟಿಗೆ ಸೇರದಿದ್ದರೆ, ಅವರನ್ನು ಒಟ್ಟಿಗೆ ತರುವುದಕ್ಕೆ ಕೆಲವು ನಿಮಿತ್ತಗಳನ್ನು ಹುಟ್ಟಿಸಬೇಕಾಗುತ್ತದೆ. ಹಾಗೆ ಒಂದೇ ಸ್ಥಳದಲ್ಲಿ ಬಂದ ವ್ಯಕ್ತಿಗಳಲ್ಲಿ ಸಮಾನ ಗುರಿಗಳ ಯಾವುದೋ ಸ್ಫೂರ್ತಿಯನ್ನು ಹುಟ್ಟಿಸಬೇಕಾಗುತ್ತದೆ. ಸಮರ್ಥರು ಹಾಕಿಕೊಟ್ಟ ಮಾರುತಿಯ ಉಪಾಸನೆ ಮತ್ತು ಪ್ರಾರಂಭ ಮಾಡಿದ ರಾಮಜನ್ಮೋತ್ಸವ ಇದಕ್ಕಾಗಿ ಇದ್ದವು. ಶ್ರೀರಾಮ ಮತ್ತು ಹನುಮಾನ ಇವರ ಭಕ್ತಿ ಸಮರ್ಥರ ಮನೆಯಲ್ಲಿ ಪರಂಪರೆಯಿಂದ ನಡೆದುಬಂದಿತ್ತು. ಇದು ಕೇವಲ ಒಂದು ಯೋಗಾಯೋಗವಾಗಿತ್ತು. ಶ್ರೀರಾಮನ ಉಪಾಸನೆಯನ್ನು ಅವರು ಮಾಡಿದರು. ಟಾಕಳಿಯವಾಸ್ತವ್ಯದಲ್ಲಿ ಅಖಂಡವಾಗಿ ಒಂದು ತಪ ಉಪಾಸನೆ ಮಾಡಿದರು. ತಮಗೆ ಈಶ್ವರ ದರ್ಶನವಾಗಲಿ ಮತ್ತು ಜನ್ಮ ಸಫಲವಾಗಲಿ ಎಂಬ ಉದ್ದೇಶದಿಂದ ಅದನ್ನು ನಡೆಯಿಸಿದರು. ಶ್ರೀರಾಮ ಚಂದ್ರ ಪ್ರಭು ತಮ್ಮನ್ನು ಹನುಮಂತನಿಗೆ ಒಪ್ಪಿಸಿದ್ದಾನೆಂಬ ಭಾವನೆಯಿಂದ ಆ ಕಾಲದಲ್ಲಿ "ನಿನಗೆ ಒಪ್ಪಿಸಿದ್ದಾರೆ ನನ್ನನು ಅದರ ಸ್ಮರಣೆ ಮಾಡಬೇಕು

ನಾನು !" ಎಂದು ಸಮರ್ಥರು ಅವನ ಕರುಣೆಯನ್ನೇ ಬೇಡಿದ್ದಾರೆ. ಈ ಅವರ ಪ್ರಾರ್ಥನೆಯಲ್ಲಿ ಐಹಿಕದ ಯಾವ ಸಂದರ್ಭವೂ ಇಲ್ಲ. ಹಾಗೇ ಸಮಾಜಕ್ಕೂ ಯಾವ ಸಂಬಂಧವಿಲ್ಲ. ರಾಮದಾಸರು ವೈಯಕ್ತಿಕ ಮಟ್ಟದಲ್ಲಿ ಮೋಕ್ಷ ಪಡೆಯುವುದಕ್ಕೆ ಮಾಡಿದ ತಮ್ಮ ಉಪಾಸ್ಯ ದೇವತೆಯ ಪ್ರಾರ್ಥನೆ ಅದಾಗಿತ್ತು. ಇದೇ ಪಾರಮಾರ್ಥಿಕ ಉಪಾಸನೆಯಲ್ಲಿ ರಾಮದಾಸರು ಉತ್ತರ ಕಾಲದಲ್ಲಿ ಒಂದು ಬೇರೆ ದಿಸೆಯನ್ನು ಕೊಟ್ಟರು. ಅವರು ಈ ಉಪಾಸನೆಯನ್ನು ವ್ಯಕ್ತಿಗಳ ಮಟ್ಟದಿಂದ ಸಮಾಜದ ಮಟ್ಟಕ್ಕೆ ಒಯ್ದರು. ಆದರಿಂದ ಆ ಉಪಾಸನೆಗೆ ಒಂದು ವ್ಯಾಪಕವಾದ ಪರಿಣಾಮ ಲಭಿಸಿತು. ಅದರಲ್ಲಿ ಒಂದು ವಿಶೇಷ ಆಶಯವು ತುಂಬಿತು. ಸಮರ್ಥರ ಈ ರಾಮನು ಕೋದಂಡಧಾರಿಯಾಗಿದ್ದಾನೆ. ದೇವರ ವಿಮೋಚಕನಾಗಿದ್ದಾನೆ. ಆದರೆ ಹನುಮಾನ ಈತನು ಬಲೋಪಾಸನೆಯ ದೇವತೆಯಿದ್ದು, ಅವೇ ವೇಳೆಯಲ್ಲಿ ಏಕನಿಷ್ಠ ಸೇವಕಧರ್ಮದ ಒಬ್ಬ ಆದರ್ಶ ವ್ಯಕ್ತಿಯಾಗಿದ್ದಾನೆ. ಭಗವಾನ್ ಶ್ರೀರಾಮಚಂದ್ರ ಹಾಗೂ ಮಹಾರುದ್ರ ಹನುಮಾನ ಈ ಇಬ್ಬರು ದೇವತೆಗಳ ಸ್ವರೂಪದಲ್ಲಿಯ ಅಂಶದ ಮೇಲೆ ಸಮರ್ಥರು ಅನಂತರದ ಕಾಲದಲ್ಲಿ ಒತ್ತು ಕೊಟ್ಟಿದ್ದಾರೆ.

"ಮುಖ್ಯವದು ಹರಿಕಥಾ ನಿರೂಪಣ!" ಈ ಸೂತ್ರವನ್ನು ಸಮರ್ಥರು ಮುಂದೆ ಶಾಶ್ವತವಾಗಿಟ್ಟರು. ಆದರೆ ಅವರ ದೃಷ್ಟಿಯಲ್ಲಿ ಮಾನವಿ ಜೀವನದ ಅದೇ ಅಂತಿಮ ಉದ್ದೇಶವಿತ್ತು. ಅದನ್ನು ತ್ಯಜಿಸುವುದು ಅವರಿಂದಾಗುತ್ತಿರಲಿಲ್ಲ. ಆದರೆ ಅವರು ಪಾರಲೌಕಿಕ ಸಾಧನಕ್ಕಾಗಿ ಪ್ರಥಮದಲ್ಲಿ ಐಹಿಕ ಪಾಠ ಬೇಕೆಂಬುದನ್ನು ಅರಿತ ಕೂಡಲೇ, ಅನಂತರ ಅವರು "ಎರಡನೆಯದೇ ರಾಜಕಾರಣ!" ಎಂದು ಹೇಳಿದರು. ಮತ್ತೆ "ಮೂರನೆಯದೇ ಎಚ್ಚರವು! ಎಲ್ಲ ವಿಷಯಗಳಲಿ!!" ಇಂಥ ಮೇಳವನ್ನು ಆ ಎರಡರಲ್ಲಿ ಕೊಟ್ಟರು (ದಾಸಬೋಧೆ 11.5.4). ದೈನಂದಿನ ರಾಜಕಾರಣದಲ್ಲಿ ಸಮರ್ಥರು ಲಕ್ಷ್ಯವನ್ನು ಹಾಕುತ್ತಲಿದ್ದರು ಎಂದು ಇದರರ್ಥವಲ್ಲ. ಆದರೆ ಸಮಾಜದ ಯೋಗಕ್ಷೇಮದ ದೃಷ್ಟಿಯಲ್ಲಿರುವ ರಾಜಕಾರಣದ ಮಹತ್ತ್ವವನ್ನು ಅವರು ಅರಿತುಕೊಂಡಿದ್ದರು. ಸಮಾಜ ಕಲ್ಯಾಣಕ್ಕೆ ಎಲ್ಲ ಸಂಗತಿಗಳು ಇರಬೇಕಾಗುತ್ತವೆ. ಹರಿಕಥೆ ನಿರೂಪಣೆಯ ಜತೆಯಲ್ಲಿ ರಾಜಕಾರಣ ಇರಬೇಕು. ಶಕ್ತಿಯ ಜತೆಗೆ ಯುಕ್ತಿ ಬೇಕು. ಅದರ ಜತೆಯಲ್ಲಿ ಎಲ್ಲ ವಿಷಯಗಳ ಬಗೆಗೆ ಜಾಗೃತೆಯಿರಬೇಕು. ನಿಷ್ಠೆಯಿಂದ ಕಾರ್ಯವನ್ನೂ ಮಾಡುತ್ತಿರಬೇಕು.

ಪರಮಾರ್ಥದಂತೆ ಐಹಿಕ ವಿಷಯದಲ್ಲಿಯೂ ಸಮರ್ಥರು ಬುದ್ಧಿವಾದದ ಮಾರ್ಗದಲ್ಲಿ ವಿಚಾರ ಮಾಡುವಂಥವರಿದ್ದರು. ಈ ಜಗತ್ತಿನ ಜಂಜಡದಲ್ಲಿ ಪ್ರಜ್ಞಾವಂತನು ಹೇಗೆ ನಡೆಯಬೇಕು ಮತ್ತು ಯಾವ ರೀತಿ ಸಿದ್ಧತೆ ಮಾಡಬೇಕು ಇದನ್ನವರು ತಿಳಿದಿದ್ದರು. ಸದ್ಗುಣಗಳ ಏಕಾಂತಿಕ ಆಚರಣೆಯ ಸಾಧ್ಯತೆಯನ್ನು ಪರೀಕ್ಷಿಸಿ ನೋಡುತ್ತಿರುವಾಗ, ದುಷ್ಟಜನರು ತುಂಬಿದ ಈ ಜಗತ್ತಿನಲ್ಲಿ ವ್ಯವಹಾರವು ತುಂಬಾ ಕಠಿಣ ಎಂಬ ಉದ್ಗಾರವನ್ನು ಲೋಕಮಾನ್ಯ ಟಿಳಕರು ಗೀತಾರಹಸ್ಯದಲ್ಲಿ

ತಿಗೆದಿದ್ದಾರೆ. ವಾಸ್ತವತೆಯತ್ತ ಗಮನವನ್ನೀಯಬೇಕಾದರೆ ದುಷ್ಟಜನರ ಅಸ್ತಿತ್ವ ಹಾಗೂ ಅವರು ನಡೆಯುವ ಮಾರ್ಗಗಳನ್ನು ಮರೆಯಬಾರದು. ಶ್ರೀಕೃಷ್ಣನಂಥ ಈಶ್ವರೀ ಅವತಾರದಲ್ಲಿಯೂ "ಪರಿತ್ರಾಣಾಯ ಸಾಧೂನಾಂ" ಎಂದು ಹೇಳಿದ ಬಳಿಕ ಕೂಡಲೇ "ವಿನಾಶಾಯಚ ದುಷ್ಕೃತಾಮ್" ಎಂದು ಹೇಳಬೇಕಾಗುತ್ತದೆ. ನಿಮ್ಮ ಅವತಾರ ಕಾರ್ಯದ ಪ್ರಯೋಜನವು ದ್ವಿಮುಖವಾಗಿದೆ ಎಂದು ಹೇಳಬೇಕಾಗುತ್ತದೆ.

"ದೇಶಕಾಲ ವರ್ತಮಾನ! ಸರ್ವವೂ ಅಸಮಾನ! ಯಾವ ವಿಧಿವಿಧಾನ! ಸಾವಧಾನ ಸಾವಧಾನ!!" ಎಂದು ಒಂದು ಸಮರ್ಥರ ಉದ್ಗಾರವಿದೆ. ನಿಯಮಿತ ಶಬ್ದಯೋಜನೆ ಮತ್ತು ಸಹಜವಾಗಿ ಸಾಧಿಸಿದ ಅನುಪ್ರಾಸ ಈ ದೃಷ್ಟಿಯಿಂದ ಈ ಓವಿಯು ಕಿವಿಗೆ, ಮನಸ್ಸಿಗೆ ಹಿಡಿಯುವಂತಿದೆ. ಆದರೆ ಇದರಲ್ಲಿಯೇ ಅದು ಒಟ್ಟನ ಸಮಾಜಕ್ಕೆ ಸ್ವಂತದ ಸುರಕ್ಷಿತತೆಯ ವಿಷಯದಲ್ಲಿ ಜಾಗ್ರತೆಯಿಂದಿರಲು ಮೌಲಿಕ ಸಂಕೇತ ಕೊಡುವಂತಿದೆ. ಇಂಥ ಜಾಗೃತಿಯ ಸಂಕೇತವನ್ನು ಕೊಡುವುದು ಆ ಕಾಲದಲ್ಲಿ ಮತ್ತೆ ಯಾವ ಕವಿಗೆ ತಿಳಿದಿತ್ತು, ಎಂಬುದು ಶೋಧ ಮಾಡಿ ನೋಡುವಂತಿದೆ. ಅದರ ಹೊರತು ಸಮರ್ಥರ ಅನನ್ಯ ಸಾಮಾನ್ಯತ್ವವು ಲಕ್ಷ್ಯಕ್ಕೆ ಬರುವುದಿಲ್ಲ. ಪರಕೀಯರ ಆಕ್ರಮಣವು ನಮ್ಮ ಮೇಲೆ ಏಕೆ ಆಗುತ್ತಿದೆ, ಇದರ ಸರಿಯಾದ ಮೂಲಕಾರಣವು ಈ ಪದ್ಯದಲ್ಲಿದೆ. ಅದರಲ್ಲಿಯ ಮೂಲಭೂತ ಉಪಾಯವನ್ನೇ ಹೇಳಲಾಗಿದೆ. ಆಕ್ರಮಣಕಾರರ ಅನ್ಯಾಯದಿಂದ ಹಾಗೂ ಕ್ರೂರ ಅತ್ಯಾಚಾರದಿಂದ ಜನರು ಹತಾಶರಾಗುತ್ತಾರೆ. ಧೈರ್ಯ ಬಿಡುತ್ತಾರೆ ಮತ್ತು ಧೈರ್ಯ ಹೋದ ಬಳಿಕ ಇನ್ನೂ ಹತಾಶರಾಗುತ್ತಾರೆ. "ಧೈರ್ಯ ತಾಳಿರಿ ಧೈರ್ಯ ತಾಳಿರಿ! ಉತ್ಸಾಹ ಪಡೆಯಿರಿ! ಅಂಜದಿರಿ ಅಳುಕದಿರಿ!!" ಎಂದು ಸಮರ್ಥರು ಜನರನ್ನು ಉದ್ದೇಶಿಸಿ ಹೇಳಿದ್ದಾರೆ. ಸಮರ್ಥರು ಜನ್ಮತಾಳಿದ ಆ ಕಾಲದಲ್ಲಿ ಯಾರಾದರೂ ಸಮಾಜಕ್ಕೆ ಹೀಗೆ ಧೈರ್ಯ ಕೊಡುವವರು ಅವಶ್ಯವಾಗಿದ್ದರು.

ಏನೆಲ್ಲವೂ ಮನುಷ್ಯ ಮಾಡುವುದರಿಂದ ಆಗುತ್ತದೆ. ಪ್ರಯತ್ನದ ಹೊರತು ಏನೂ ಆಗದು. ಇದನ್ನು ಸಮರ್ಥರು ಪೂರ್ತಿಯಾಗಿ ತಿಳಿದಿದ್ದರು. ಮನುಷ್ಯನು ಮಾಡಬೇಕಾದ ಪ್ರಯತ್ನವನ್ನು ಮತ್ತು ಕರ್ತೃತ್ವದ ಮಹಿಮೆಯನ್ನು ಅವರು ಉಜ್ವಲ ಭಾಷೆಯಲ್ಲಿ ವರ್ಣನೆ ಮಾಡಿದ್ದಾರೆ. ರೂಪ ಇಲ್ಲವೆ ಲಾವಣ್ಯದಂಥ ಸಂಗತಿಗಳು ಈಶ್ವರನತ್ತ ಇಲ್ಲವೆ ನಿಸರ್ಗದತ್ತ ಇರುತ್ತವೆ. ಆ ಕೊಡುಗೆ ಎಲ್ಲರಿಗೆ ಲಭಿಸದು. ಎಷ್ಟು ಅಭ್ಯಾಸ ಮಾಡಿದರೂ ಸುಂದರರೂಪ ಯಾರಿಗೂ ಪ್ರಾಪ್ತವಾಗುವುದಿಲ್ಲ. ಇದಕ್ಕಾಗಿಯೇ ಕಾರ್ಯಮಾಡಬೇಕಾಗಿದ್ದರೆ "ಆಗಂತುಕ ಗುಣಗಳ ಸಹಾಯ ಪಡೆದು ನೋಡಬೇಕು!!" ಎಂದು ಸಮರ್ಥರು ಹೇಳಿದ್ದಾರೆ. ಆಗಂತುಕ ಎಂದರೆ ನೈಸರ್ಗಿಕವಾಗಿ ಪ್ರಾಪ್ತವಾಗದ, ಆದರೆ ಮನುಷ್ಯನು ಪ್ರಯತ್ನ ಮಾಡಿದರೆ ಅದನ್ನು ಪಡೆದುಕೊಳ್ಳುವಂಥದ್ದು. ಯಾವನೇ ಸಾಮಾನ್ಯ ಮನುಷ್ಯನಿಗೆ ಅವನ ಆಯುಷ್ಯದ ಪ್ರತಿಗಳಿಗೆ ಉಪಯೋಗ ಬೀಳುವಂತೆ ಈ ಸಲಹೆ ಇರುತ್ತದೆ. ಅರ್ಥಾತ್ ಇದಕ್ಕಾಗಿ ಪ್ರಯತ್ನವನ್ನು ಮಾಡಬೇಕು. "ಪ್ರಯತ್ನವೇ ಪರಮೇಶ್ವರ!" ಎಂದು ಸಮರ್ಥರು

ಸಂದೇಶ ಕೊಟ್ಟಿದ್ದಾರೆ. ಜನರು ಒಗ್ಗೂಡಬೇಕು. ಅಂದರೆ ಕಾರ್ಯ ಮಾಡಲು ಬರುತ್ತದೆ ಎಂಬುದರ ಬಗೆಗೆ ಅವರು ಗಮನ ಕೊಟ್ಟಿದ್ದಾರೆ. "ಒಲಿಸಿಕೊಳಬೇಕು ಬಹಳ ಜನರ ಮನ! ಅನಂತರ ದೈವದಾಗಮನ!!" ಎಂಬುದು ಅವರ ಹೇಳಿಕೆಯಿದೆ. ಈ ಜನರ ಮನಸ್ಸನ್ನು ಹೇಗೆ ಒಲಿಸಿಕೊಳ್ಳಬೇಕು ? ಹೇಗೆ ಹೊಂದಿಸಬೇಕು ? ಇದನ್ನೂ ಸಹ ಸಮರ್ಥರು ಹೇಳುತ್ತಾರೆ. "ಒಳ್ಳೆಯದನು ಹೇಳಿದರೆ ಒಳ್ಳೆಯದೇ ತೋರುವುದು! ಇದು ಅನುಭವದಲಿ ಬರುವುದು!" ಎಂದು. ಅನುಭವದ ಆಧಾರ ಪಡೆದು, ಆದರೆ ಕೆಟ್ಟದ್ದನ್ನು ಏಕೆ ಮಾಡಬೇಕು, ಎಂದವರು ಪ್ರಶ್ನಿಸುತ್ತಾರೆ. ಲೋಕ ಸಂಗ್ರಾಹಕ ಪುರುಷರಿಗೆ ಮೃದುಭಾಷಣ, ಮೃದು ಉತ್ತರ ಬಹಳ ಅವಶ್ಯಕ. ಯಾರಿಗಾದರೂ ಯಾವ ದುಃಖಗಳಾದರೂ ಇದ್ದೇ ಇರುತ್ತವೆ. ಪ್ರತಿಯೊಬ್ಬನಿಗೆ ತಮ್ಮ ದುಃಖವನ್ನು ಯಾರಾದರೂ ಬೇರೆಯವರು ಸಹಾನುಭೂತಿಯಿಂದ ಕೇಳಲಿ ಎಂಬ ಆಸೆ ಇರುತ್ತದೆ. ಇಂಥ ಜನರ ಮನಶ್ಶಾಸ್ತ್ರವನ್ನು ಸಮರ್ಥರು ಅರಿತಿದ್ದಾರೆ. "ದುಃಖ ಕೇಳಿದಾಗ ನೆಮ್ಮದಿ!" ಎಂದವರು ಹೇಳುವರು. ಆ ಪುರುಷನ ದುಃಖವು ಹೇಳಿ ಮುಗಿದ ಬಳಿಕ ತಮಗೆ ಯಾವ ವಿಷಯವನ್ನು ಅವನಿಗೆ ತಿಳಿಸುವಂತಿದ್ದರೆ, ಅದನ್ನು ತಿಳಿಸುವ ಸಂಧಿ ಸಿಗುವುದು. ಕಾರಣ, ಆತ ತನ್ನ ಮನದ ಮಾತು ಹೇಳಿ ಮುಗಿಸಿದಾಗ ಮತ್ತು ತಾವು ಅದನ್ನು ಕೇಳಿ ತಿಳಿದಾಗ, ಬೇರೆಯವರ ಹೇಳಿಕೆಯನ್ನು ತಿಳಿಯಲು ಆತ ಮಾನಸಿಕವಾಗಿ ಸಿದ್ಧನಾಗಿರುತ್ತಾನೆ. ಅನಂತರ ಆತನಿಗೆ ಉಪಾಸನೆಯ ಬಗೆಗೆ, ಈಶ್ವರನ ಭಜನೆ ಹೆಚ್ಚಿಸುವುದಕ್ಕೆ ಹೇಳಬೇಕೆಂದು ಸಮರ್ಥರು ತಿಳಿಸುತ್ತಾರೆ.

ಕೇವಲ ಈಶ್ವರನ ಭಜನೆ ಮಾಡಲು ಹೇಳುವುದಕ್ಕಷ್ಟೆ ಸಮರ್ಥರು ಇಷ್ಟು ಸುತ್ತು ಹಾಕಲು ಸೂಚಿಸುತ್ತಾರೆಂದು ನಾವು ತಿಳಿದರೆ ಅದು ನಮ್ಮ ಮೂರ್ಖತನ. ಪರಮಾರ್ಥದ ಈ ಉಪದೇಶವನ್ನು ಮಾಡುವುದಕ್ಕೆ ಇಷ್ಟು ದೂರದ ಮಾರ್ಗವನ್ನು ಹಿಡಿಯಬೇಕಾಗಿಲ್ಲ ಮತ್ತು ಆ ಮಾರ್ಗದಲ್ಲಿ ಬಹಳ ಅಂತರವನ್ನು ಇಡುವ ಸಂಬಂಧವೇ ಇರುವುದಿಲ್ಲ. ತೀಕ್ಷ್ಣಬುದ್ಧಿಯ ಹಾಗೂ ಗಹನ ಸ್ವಭಾವದ ಆಪ್ತಸಂಬಂಧಿಕರ ಹುಡುಗನನ್ನು ಶೋಧಿಸಬೇಕೆಂದು ಸಮರ್ಥರು ಹೇಳುತ್ತಾರೆ. ಆಪ್ತಸಂಬಂಧಿ ಇದರರ್ಥವು ತಮ್ಮ ಪರಿಚಯದಲ್ಲಿ ಎಂದಿದೆ. ಇಂಥ ಹುಡುಗರನ್ನು ಕಂಡು ಅವರಿಗೆ ನಿಧಾನವಾಗಿ ಕಲಿಸಬೇಕು, ಅವರ ಮೇಲೆ ಸಂಸ್ಕಾರವನ್ನು ಉಂಟುಮಾಡಬೇಕು ಎಂದು ಸಮರ್ಥರು ತಮ್ಮ ಶಿಷ್ಯರಿಗೆ ಹೇಳಿದ್ದಾರೆ. ಸಂಸ್ಕಾರಕ್ಕೆ ತಕ್ಕ ವಯಸ್ಸಿನಲ್ಲಿ ಬುದ್ಧಿವಂತ ಹುಡುಗರನ್ನು ಆಯ್ಕೆಮಾಡಿ ಅವರಿಗೆ ಕಲಿಸುತ್ತಿದ್ದರೆ, ಮುಂದೆ ಅವರಲ್ಲಿ ಕಾರ್ಯಕರ್ತರ ಸಮೂಹ ನಿರ್ಮಾಣವಾಗುತ್ತದೆ. ಅವರ ಸಹಾಯದಿಂದ ಗುಂಪನ್ನು ನಿರ್ಮಿಸಲು ಬರುತ್ತದೆ. ಹೀಗೆ ಸಮರ್ಥರ ಲೋಕ ಸಂಗ್ರಹದ ದೂರ ದೃಷ್ಟಿಯಿದೆ. ಸರ್ವಸಂಗ ಪರಿತ್ಯಾಗ ಮಾಡಿದ ಸಂನ್ಯಾಸಿಗಳು ಕೂಡ ಲೋಕ ಸಂಗ್ರಹವನ್ನು ಮಾಡಬೇಕೆಂದು ಅವರ ಹೇಳಿಕೆಯಿದೆ.

ಯಾರಿಗೆ ಕೇವಲ ಈಶ್ವರದರ್ಶನದ ಮಾರ್ಗವನ್ನು ಜನರಿಗೆ ತೋರಿಸ ಬೇಕಾಗಿದೆಯೊ, ಅವರ ಉಪದೇಶದ ಏಕಮಾತ್ರ ವಿಷಯವು ಪರಮಾರ್ಥ ಸಾಧನವೇ

ಆಗಿರುವುದು. ಇಂಥ ಸಂತ ಶಿಷ್ಯರು ದೊರೆಯುವರು. ಆದರೆ ಅವರಿಗೆ ಕೇವಲ ಆಧ್ಯಾತ್ಮವನ್ನಷ್ಟೇ ಹೇಳದೆ ಅವರಲ್ಲಿ ಯುಕ್ತಿ ಬುದ್ಧಿಯನ್ನು ಏಕೆ ತುಂಬಬೇಕು ? ಅನಂತರ ಅವರನ್ನು ಅನೇಕ ಸ್ಥಳಗಳಿಗೆ ಏಕೆ ಕಳಿಸಬೇಕು ? ಸಮರ್ಥರು ಕೇವಲ ಪರಮಾರ್ಥ ಸಾಧನೆಮಾಡುವಂಥ ಶಿಷ್ಯರನ್ನು ಹತ್ತಿರ ಇಟ್ಟುಕೊಳ್ಳುತ್ತಿರಲಿಲ್ಲ. ಆದರೆ ಪರಮಾರ್ಥದ ಜತೆಯಲ್ಲಿ ಸಮಾಜದ ಐಹಿಕ ಹಿತದ ಚಿಂತೆ ಮಾಡುವ ಮಹಂತರನ್ನು ತಯಾರಿಸುತ್ತಿದ್ದರು. ಹಾಗೆ ಶಿಷ್ಯರನ್ನು ತಮ್ಮ ಆಯುಷ್ಯದ ಉತ್ತರಾರ್ಧದಲ್ಲಿ ಅವರು ಸೇರಿಸಿದರು. ಇಂಥ ಪುರಾಷಾರ್ಥಿ ಶಿಷ್ಯರನ್ನು ಬಹಳಷ್ಟು ದೂರವಿಟ್ಟು ಲೋಕಸಂಗ್ರಹ ಮಾಡುವ ರಹಸ್ಯವನ್ನು ಅವರಿಗೆ ತಿಳಿಸಿ ಹೇಳುತ್ತಿದ್ದರು. ದಾಸಬೋಧೆಯ ಉತ್ತರಾರ್ಧದಲ್ಲಿ ಆಧ್ಯಾತ್ಮ ವಿವೇಚನೆಯ ಜತೆಯಲ್ಲಿ ಚಾತುರ್ಯ ಲಕ್ಷಣ, ಮಹಂತ ಲಕ್ಷಣ, ನಿಸ್ಪೃಹ ಲಕ್ಷಣ, ಉತ್ತಮ ಪುರುಷ ಲಕ್ಷಣ ಇಂಥ ವಿಷಯಗಳ ಮೇಲಿನ ಸಮಾಸಗಳು ಬರುವುದಕ್ಕೆ ಇದೇ ಕಾರಣ. ಆದರೆ ಇದು ದಾಸಬೋಧೆಯ ಮುಂದಿನ ಭಾಗದಲ್ಲಿಯೇ ಇದೆ ಎಂದಲ್ಲ. ಲೋಕ ಸಂಗ್ರಹವನ್ನು ಸಾಧಿಸುವುದಕ್ಕಾಗಿ ಮತ್ತು ಐಹಿಕ ಜೀವನದಲ್ಲಿ ಯಶವನ್ನು ಗಳಿಸುವುದಕ್ಕಾಗಿ ಅವಲಂಬಿಸಬೇಕಾದ ವಿವಿಧ ಉಪಾಯಗಳ ಎಷ್ಟೋ ಸೂಕ್ಷ್ಮ ವಿವರಣೆಗಳು ಸಮರ್ಥರ ಬಿಡಿ ಪ್ರಕರಣಗಳಲ್ಲಿ ಬಂದಿವೆ.

ತಮ್ಮ ಸಮಾಜ ಬಾಂಧವರ ಐಹಿಕದಲ್ಲಿನ ದುಃಖವು ದೃಷ್ಟಿಗೆ ಬಿದ್ದಾಗ ಅದನ್ನು ನಿವಾರಿಸಲು ಸಮರ್ಥರು ಹೇಳಿದ ಉಪಾಯಗಳು ಇಂಥ ಐಹಿಕ ಪಾತಳಿಯಲ್ಲಿಯೇ ಇರುತ್ತವೆ. ಅವು ಬುದ್ಧಿಯ ಆಶ್ರಯವನ್ನು ಮತ್ತು ವಾಸ್ತವತೆಯ ಸಂಬಂಧವನ್ನು ಪಡೆಯುವಂತಿವೆ. ತತ್ತ್ವಜ್ಞಾನ ವಿಚಾರಗಳನ್ನು ಮಂಡಿಸುವಾಗ ಸಮರ್ಥರು ಎಂದೂ ಶಬ್ದಪ್ರಾಮಾಣ್ಯದ ಆಧಾರವನ್ನು ಪಡೆದಿಲ್ಲ. ಇಂಥ ಒಂದು ಗ್ರಂಥದಲ್ಲಿ ಹೇಳಲಾಗಿದೆ ಎಂದು ಅವರು ಮಾನ್ಯಮಾಡುವಂತೆ ಹೇಳಿಲ್ಲ. ಅದೇ ರೀತಿ ಸಮಾಜದ ಏಳಿಗೆಯ ಚಿಂತೆ ಮಾಡುತ್ತಿರುವಾಗ ಅವರು ಎಲ್ಲಿಯೂ ದೇವರ ಅವತಾರದ ಸಾಕ್ಷಿಯನ್ನು ಕೊಟ್ಟಿಲ್ಲ. ನಮ್ಮ ಸಮಾಜದ ಅವನತಿಯ ಮೂಲವನ್ನು ಶೋಧಿಸುವಾಗ ಪ್ರಾರಬ್ಧ ಇಲ್ಲವೆ ಕರ್ಮ ಸಿದ್ಧಾಂತ ಇವುಗಳ ಮೇಲೆ ಅವರು ಅವಲಂಬಿತರಾಗಿಲ್ಲ. ಅಲ್ಲದೆ ಇದೆಲ್ಲ ಕಲಿಯುಗದ ಮಹಿಮೆ ಎಂದು ಹೇಳುವುದಿಲ್ಲ. ಆದರೆ ನಮ್ಮ ಸಮಾಜವು ಎಂದೂ ಜಾಗೃತವಿಲ್ಲ. ಇದನ್ನು ಅವರು ಬೆರಳೆತ್ತಿ ತೋರಿದ್ದಾರೆ. ಭಾರತದಲ್ಲಿ ಹಿಂದೂ ಸಮಾಜದ ಮೇಲೆ ಒಂಬತ್ತನೆಯ ಹತ್ತನೆಯ ಶತಮಾನದಿಂದ ಶಬ್ದ ಪ್ರಾಮಾಣ್ಯ, ಕರ್ಮ ಸಿದ್ಧಾಂತ, ಪ್ರಾರಬ್ಧವಾದ, ಕಲಿಯುಗದ ಕಲ್ಪನೆ, ನಿವೃತ್ತಿಪರ ವಿಚಾರಗಳ ಅತಿರೇಕತೆ, ಐಹಿಕದತ್ತ ದುರ್ಲಕ್ಷ್ಯ, ಪ್ರಯತ್ನವಾದದ ಲೋಪ ಇಂಥ ವಿಷಯಗಳ ಪ್ರಭಾವವು ಸತತ ಬೆಳೆಯುತ್ತ ಬಂದಿದೆ. ಇದನ್ನು ಗಮನಿಸಿದರೆ ಸಮರ್ಥರ ವಿಚಾರಗಳ ವಿಶೇಷತೆಗಳು ಮನಸ್ಸಿನಲ್ಲಿ ತುಂಬುವವು.

ಇಂಥ ಬುದ್ಧಿ ನಿಷ್ಠೆ ಇಲ್ಲವೆ ವಿವೇಕ ನಿಷ್ಠೆಯ ದೃಷ್ಟಿಕೋನಗಳು ಪರಮಾರ್ಥಿಯಾದ ಸಮರ್ಥರ ಅಸಾಧಾರಣ ವೈಶಿಷ್ಟ್ಯಗಳು. ಐಹಿಕತೆಗಳ ಹಾಗೂ ಬುದ್ಧಿ

ನಿಷ್ಕೃತಿಗಳ ಈ ಪ್ರಜ್ಞೆಯು ಸಮರ್ಥರಲ್ಲಿ ತೀರ ತರುಣ ವಯಸ್ಸಿನಿಂದಲೂ ಇತ್ತೆಂದು ತಿಳಿಯುವುದು. ಸ್ವಂತ ಮನಸ್ಸಿನ ವಿಫಲತೆಯನ್ನು ಪ್ರಕಟಿಸುವಾಗ ಮತ್ತು ತಮ್ಮಲ್ಲಿಯ ಕೊರತೆಯನ್ನು ಹೇಳುವಾಗ "ಪ್ರಸಂಗ ವೇಳೆಯ ತರ್ಕ ತಿಳಿಯದು ದೀರ್ಘ ಸೂಚನೆ ಅರಿಯದು ! ಸ್ನೇಹವಸಿಡಲಿಕ್ಕಾದರು ಬುದ್ಧಿ ದಯಪಾಲಿಸು ರಘುನಾಯಕಾ !" ಎಂದವರು ಆರಂಭ ಕಾಲದಲ್ಲಿ ಬರೆದ ಕರುಣಾಸ್ತೋತ್ರದಲ್ಲಿ ಹೇಳಿದ್ದಾರೆ. ಪ್ರಸಂಗ ಯಾವುದೆಂದು ತಿಳಿಯಬೇಕು. ಭವಿಷ್ಯದಲ್ಲಿ ದೃಷ್ಟಿ ದೂರ ಮುಟ್ಟಬೇಕು. ಈಗ ಈ ಕ್ಷಣದಲ್ಲಿ ಮಾಡಬೇಕಾಗಿದ್ದು ಹೊಳೆಯಬೇಕು. ಇತರರ ಜತೆ ಮಿತ್ರತ್ವದ ಸಂಬಂಧವನ್ನು ಇಟ್ಟುಕೊಂಡು ಬರಬೇಕು. ಇವೆಲ್ಲವುಗಳನ್ನು ಸಾಧಿಸಲು ನಮಗೆ ಬುದ್ಧಿ ಕೊಡು ಎಂದು ರಘುನಾಯಕನ ಪ್ರಾರ್ಥನೆಯನ್ನು, ಪರಮಾರ್ಥ ಪಡೆಯಲು ಮನೆಬಿಟ್ಟು ಹೊರಟ ಸಮಯದಲ್ಲಿ ಅವರು ಮಾಡಿದ್ದಾರೆ. ತಮ್ಮ ಮೇಲೆ ಕೃಪೆ ಮಾಡಬೇಕೆಂಬ ಶಬ್ದಗಳನ್ನು ಸಮರ್ಥರು ಉಪಯೋಗಿಸುವುದಿಲ್ಲ. ಆದರೆ 'ಬುದ್ಧಿ ದಯಪಾಲಿಸು ರಘುನಾಯಕಾ !" ಎಂದು ಹೇಳುತ್ತಾರೆ. ಇದರಲ್ಲಿಯ ವಿಶೇಷತೆಯು ಗಮನದಲ್ಲಿ ತೆಗೆದುಕೊಳ್ಳುವಂತಿದೆ.

ಐಹಿಕ ಜೀವನವು ತ್ಯಾಜ್ಯವಾದುದು ಮತ್ತು ಉಪೇಕ್ಷಣೀಯವಾದುದು ಎಂದು ಒಪ್ಪಿಕೊಳ್ಳುವ ಆಧ್ಯಾತ್ಮಿಕ ಪ್ರವೃತ್ತಿಗೆ ವಿಶ್ವದ ಮಿಥ್ಯಾತ್ವ ವಿಷಯದ ಸಿದ್ಧಾಂತಗಳು ನೀರುಗೊಬ್ಬರ ಹಾಕಿದವು. ಕರ್ಮ ಸಿದ್ಧಾಂತದಿಂದ ಈ ಐಹಿಕ ವಿಷಯದ ವಿಮುಖತೆ ಅಧಿಕ ದೃಢವಾಯಿತು. ಸಮಾಜದ ಐಹಿಕ ಜೀವನವು ಪರಿಶುದ್ಧ ಹಾಗೂ ಸಮೃದ್ಧವಾಗುವುದಕ್ಕೆ ಮಾರ್ಗದರ್ಶನವನ್ನು ಮಾಡಲು ಯಾವುದೇ ಪ್ರಯತ್ನ ನಡೆಯಲಿಲ್ಲ. ಬದುಕಿನಲ್ಲಿ ಏಳುವ ಪ್ರಶ್ನೆಗಳನ್ನು ಈ ಜಗತ್ತಿನಲ್ಲಿ ಮನುಷ್ಯರು ಬಿಡಿಸಬೇಕಾಗುತ್ತದೆ. ಇಂಥ ಪ್ರೇರಣೆಗಳು ಜನಸಾಮಾನ್ಯರನ್ನು ಮುಟ್ಟಲಿಲ್ಲ. ಸರ್ವಸಾಮಾನ್ಯ ಸಮಾಜ ಜೀವನವು ಐಹಿಕದ ಮಣ್ಣಿನಲ್ಲಿಯೇ ಸಂಗ್ರಹಿತವಾಗಿದೆ. ಆ ಮಣ್ಣಿನಿಂದ ಆ ಜೀವನವು ಪಲ್ಲವಿಸುತ್ತದೆ. ಆ ವಿಷಯದತ್ತ ಅಲಕ್ಷ್ಯವಾದ ಕಾರಣ ಈ ಸಮಾಜದ ಅಧಃಪತನವಾಯಿತು. ಹೀಗೆ ಇತಿಹಾಸ ಸಾಕ್ಷಿಯಿದೆ. ಸನ್ 1347ರಲ್ಲಿ ಬಹಮನಿ ರಾಜ್ಯದ ಸ್ಥಾಪನೆಯಾಯಿತು. ಅದಕ್ಕೂ ಮೊದಲು ಮೂವತ್ತು ವರ್ಷಗಳ ಹಿಂದೆ ಯಾದವರ ಸ್ವಧರ್ಮ ಆಡಳಿತವು ಮಹಾರಾಷ್ಟ್ರದಲ್ಲಿ ಲೋಪವಾಗಿತ್ತು. ಸಮರ್ಥರು ತಮ್ಮ ಕೆಲವು ಬಿಡಿ ಪ್ರಕರಣಗಳಲ್ಲಿ ಆ ಭಯಂಕರ ಅತ್ಯಾಚಾರಗಳನ್ನು ಉಲ್ಲೇಖಿಸಿದ್ದು ಆ ವಿಷಯವಾಗಿ ಮುನ್ನೂರು ವರ್ಷಗಳ ಕಾಲದಲ್ಲಿ ಮರಾಠಿ ಸಾಹಿತ್ಯದಲ್ಲಿ ಎಲ್ಲಿಯೂ ಒಂದು ಶಬ್ದ ಕೂಡ ಬಳಸಲಾಗಿಲ್ಲ. ಸಮರ್ಥರು ತೀರ್ಥಯಾತ್ರೆಯಲ್ಲಿ ದೇಶದ ಪರಿಸ್ಥಿತಿಯನ್ನು ಅವಲೋಕಿಸಿದರು. ಅನಂತರ ಅವರು ಪ್ರಥಮವಾಗಿ ಈ ಅತ್ಯಾಚಾರಗಳ ಸ್ಪಷ್ಟವಾದಂಥ ಉಲ್ಲೇಖವನ್ನು ಮಾಡಿದರು.

ಸಮರ್ಥರು ಸಮಾಜದ ಐಹಿಕ ಜೀವನದ ಬಗೆಗೆ ವಿಚಾರಿಸಿದರು. ತಮ್ಮ ಸಮಾಜವು ಅಧೋಗತಿಗೆ ಇಳಿಯುವುದನ್ನು ಹಾಗೂ ಪರಾಭೂತವಾಗುತ್ತಿರುವುದನ್ನು ಗುರುತಿಸಿದರು. ಈ ಅನರ್ಥ ಪರಂಪರೆಯಿಂದ ಬಿಡುಗಡೆ ಮಾಡಲು ಅವರು

ಪಾರಮಾರ್ಥದ ವಿವೇಕವನ್ನು ಮೊದಲು ಹೇಳಿದಂತೆ ಸಾಮರ್ಥ್ಯದ, ಸಂಘಟನೆಯ, ಪ್ರಯತ್ನವಾದದ ಮತ್ತು ಸ್ವಧರ್ಮ ರಾಜ್ಯವು ಇರಬೇಕಾದ ಆವಶ್ಯಕತೆಯ ಸಂದೇಶವನ್ನು ತಿಳಿಸಿದರು. ಈಗ ಪ್ರಪಂಚ ಮತ್ತು ಪರಮಾರ್ಥದ ಈ ಎರಡರ ವಿವೇಕವನ್ನು ಹೇಳಿದರು. ಅದರಲ್ಲಿ ಸಮರ್ಥರ ವಿಶೇಷ ಹೇಳಿಕೆಯಂಥ ನಿಃಶ್ರೇಯಸ್ಸಿನ ಜತೆಗೆ ಅಭ್ಯುದಯದ ಅವಧಾನವನ್ನಿಡುವ ಮತ್ತು ಪರಲೋಕದ ಕಲ್ಯಾಣದಂತೆ ಇಹ ಲೋಕದ ಉನ್ನತಿಯ ಚಿಂತೆ ಮಾಡುವಂಥ ವಿಚಾರಗಳು ಉತ್ತರ ಕಾಲದಲ್ಲಿ ನಿರ್ಮಾಣವಾಗಿರುತ್ತವೆ.

ಚಾಫಳಕ್ಕೆ ಬಂದು ಮುಟ್ಟಿದ ಬಳಿಕ ಜಪತಪ ಇಲ್ಲವೆ ಅನುಷ್ಠಾನ ಇವುಗಳಲ್ಲಿಯೇ ಸಮರ್ಥರು ಎಲ್ಲ ಸಮಯದಲ್ಲಿ ಕಳೆಯದೆ ಲೋಕಸಂಪರ್ಕದ ಮಾರ್ಗವನ್ನು ಹುಡುಕಿದರು. ಮಾರುತಿಯ ಮಂದಿರವನ್ನು ನಿರ್ಮಿಸುವುದು ಮತ್ತು ರಾಮಜನ್ಮೋತ್ಸವಗಳನ್ನು ಆಚರಿಸುವುದು ಇಂಥ ಉಪಕ್ರಮಗಳನ್ನು ಅವರು ಅದಕ್ಕಾಗಿ ಕೈಗೊಂಡರು. ಶಿಷ್ಯರನ್ನು ಒಟ್ಟುಗೂಡಿಸತೊಡಗಿದರು. ಸಂಸಾರಿಕರನ್ನು ಉದ್ದೇಶಿಸಿ ಶಾಶ್ವತ ಕಲ್ಯಾಣದ ಮಾರ್ಗವನ್ನು ಹೇಳುವ ಎಷ್ಟೋ ರಚನೆಗಳನ್ನು ಸಮರ್ಥರು ಆನಂತರದ ಆಯುಷ್ಯದಲ್ಲಿ ಮಾಡಿದ್ದರು. ಆದರೆ ಚಾಫಳಕ್ಕೆ ಬಂದ ಬಳಿಕ ಸಮರ್ಥರು ಮಾಡಿದ ಉಪದೇಶಗಳು ಬೇರೆಯಾಗಿವೆ. ಅವು ಪರಮಾರ್ಥದ ಏಕಾಂಗಿ ವಿವೇಕಗಳಲ್ಲ. "ಮೊದಲು ಸಂಸಾರ ಸರಿಯಾಗಿ ಮಾಡಿರಿ ! ಅನಂತರ ಪರಮಾರ್ಥ ವಿವೇಕ ಪಡೆಯಿರಿ !" ಎಂದು ಹೇಳುವವರಾಗಿದ್ದಾರೆ (ದಾಸಬೋಧೆ 12.1.1.) ವಿಚಾರಗಳಲ್ಲಿಯ ಪರಿವರ್ತನೆ ಒಮ್ಮೆಲೆ ಆಗುವುದೆ ? ಅದು ಕ್ರಮವಾಗಿ ಆಗಿರಬೇಕು. ಸಮರ್ಥರು ಮನೋಬೋಧೆಯನ್ನು ಈ ವೈಚಾರಿಕತೆಯ ಪರಿವರ್ತನೆಯ ಸಮಯಕ್ಕೆ ಬರೆದಿರಬೇಕು. ಒಂದು ಕಾರಣವೆಂದರೆ ಅದು ಕೇವಲ ಆಧ್ಯಾತ್ಮಿಕ ಸಿದ್ಧಾಂತವನ್ನು ಹೇಳುವ ರಚನೆಯಲ್ಲ. ಅವರ ಮನಸ್ಸಿನಲ್ಲಿಯ ಕೆಲವು ಪರಮಾರ್ಥದ ಹಾಗೂ ಕೆಲವು ವ್ಯವಹಾರದಲ್ಲಿಯ ಆಚರಣೆಗಳ ಉಪದೇಶಗಳನ್ನು ಮಾಡುವಂತಿದೆ. ಅದೇ ಸಮಯಕ್ಕೆ ಅವರ ಉಪದೇಶಗಳು ಸಮಾಜಕ್ಕೆ ವ್ಯಾಪಕವಾಗಿ ಮುಟ್ಟುವಂತಿವೆ, ಎಂಬ ತರ್ಕವನ್ನು ಖಚಿತವಾಗಿ ಹೇಳಲು ಬರುವುದಿಲ್ಲ. ಚಾಫಳಕ್ಕೆ ಬಂದ ಬಳಿಕ, ಅನಂತರದಲ್ಲಿ ಸಮರ್ಥರು ಮಾಡುತ್ತಿರುವ ಉಪದೇಶಗಳ ಸ್ವರೂಪವು ಪರಿವರ್ತಿಸಲು ಆರಂಭಿಸಿದ್ದು ಮಾತ್ರ ನಿಜ.

ಪ್ರಪಂಚದಿಂದ ಸಮಾಧಾನವು ದೊರೆಯುವಂತಿದ್ದರೂ, ನಾವು ಪ್ರಪಂಚವನ್ನೇ ಮಾಡಲಿಲ್ಲ ಏಕೆ, ಎಂದು ಪ್ರಶ್ನೆಗಳನ್ನು ಕೇಳುವ ಸಮರ್ಥರು ಉತ್ತರ ಕಾಲದಲ್ಲಿ ಪ್ರಪಂಚ ಬಿಟ್ಟು ಪರಮಾರ್ಥ ಮಾಡುವ ಪುರುಷರಿಗೆ ತಿನ್ನಲು ಅನ್ನವೇ ದೊರೆಯುವುದಿಲ್ಲ ಮತ್ತು ಇಂಥವರು ದುರ್ದೈವಿಗಳು ಎಂದು ಹೇಳತೊಡಗಿದರು. "ಅನುದಿನ ಅನುತಾಪಗಳಿಂದ ತಪ್ತನಾದೆ ರಾಮರಾಯಾ!" ಇಲ್ಲವೆ "ಸ್ವಜನ–ಜನಧನವ ವ್ಯರ್ಥ ಅಪೇಕ್ಷಿಸಿದೆ!" ಎಂದು ಹೇಳಿ ತಾವೇ ಹಳಹಳಿಸುವ, ಇಂದ್ರಿಯ ವಿಷಯ ವಾಸನೆಯಿಂದ ತಮ್ಮ ಮನಸ್ಸು ಹೊರಬರದೆಂದು ದುಃಖವನ್ನನುಭವಿಸಿ ದೇವರ ಕರುಣೆ

ಯಾಚಿಸುವ ಮತ್ತು ನಿಮಗೆ ಸನ್ನ ಮರೆವು ಆಯಿತೆ ಎಂದು ರಾಮಚಂದ್ರನನ್ನು ವಿಚಾರಿಸುವ ಸಾಧಕಾವಸ್ಥೆಯಲ್ಲಿಯ ರಾಮದಾಸರು, ಮುಂದೆ ಸಿದ್ಧ ಅವಸ್ಥೆಯನ್ನು ಮುಟ್ಟಿದ ಕಾಲದಲ್ಲಿ ನಮ್ಮ ಸಮಾಜದ ಮೇಲೆ ಅನ್ಯಾಯ, ಆಕ್ರಮಣ ಮಾಡುವ ಶತ್ರುಗಳ ವಿಷಯದಲ್ಲಿ ಸಂತಾಪಗೊಂಡು ತುಳಜಾ ಭವಾನಿಯನ್ನು ಪ್ರಾರ್ಥಿಸುವಾಗ "ಕೇಳಿದೆ ಹಿಂದಾದ ದೈತ್ಯಸಂಹಾರವನು! ಪ್ರತ್ಯಕ್ಷ ತೋರು ಯಾವುದೇ ಮೂಲ ಸಾಮರ್ಥ್ಯವನು!" ಎಂದು ಖಂಡತುಂಡ ಶಬ್ದಗಳಲ್ಲಿ ಕೇಳಿದ್ದಾರೆ. ಸಮರ್ಥರ ದೃಷ್ಟಿಗೆ ಬಿದ್ದ ಈ ಅಂತರ ತೀರ ಸ್ಪಷ್ಟವಾಗಿದೆ. ಈ ಬದಲಾವಣೆಯು ಕೇವಲ ತಾತ್ಪೂರ್ತಿಕ ಇಲ್ಲವೆ ತೋರಿಕೆಯದೆಂದು ತಿಳಿದು ಅದನ್ನು ಬದಿಗೆ ಸರಿಸಲು ಬರುವುದಿಲ್ಲ. ಮೃತ್ಯು ಹಯಪತಿಯನ್ನು ನೋಡುವುದಿಲ್ಲ, ಗಜಪತಿಯನ್ನು ನೋಡುವುದಿಲ್ಲ, ನರಪತಿಯನ್ನು ನೋಡುವುದಿಲ್ಲ, ಎಲ್ಲರ ಮೇಲೆ ಆ ಆರೆಯುವ ಕಲ್ಲು ಸಮಾನವಾಗಿ ತಿರುಗುತ್ತದೆ. ಆಗ "ಮರಣದ ಸ್ಮರಣವಿರಲಿ!" ಮತ್ತು ದೇಹ ಸಾರ್ಥಕವಾಗಲಿ, ಇದಕ್ಕಾಗಿ ಈಶ್ವರನ ಭಜನೆ ಮಾಡಿರಿ ಎಂದು ಹೇಳುವ ಸಮರ್ಥರು ಮುಂದೆ ಇಂಥ ಎಚ್ಚರಿಕೆ ಕೊಟ್ಟು ಹೋಗಿದ್ದಾರೆ."ದೇವರನ್ನು ತಲೆಯಲ್ಲಿರಿಸಿರಿ! ಘೋಷಣೆ ಮಾಡಿರಿ! ದಂಡೆತ್ತಿ ಹೋಗಿ ಸಂಹರಿಸಿರಿ! ಧರ್ಮಸ್ಥಾಪನೆಗಾಗಿ!!" (ಕ್ಷಾತ್ರಧರ್ಮ 18).

ಧರ್ಮಕ್ಕಾಗಿ ಸಾಯಬೇಕು. ಹೀಗೆ ಸಾಯುತ್ತಿರುವಾಗ ಶತ್ರುಗಳನ್ನು ಕೊಲ್ಲಿರಿ ಮತ್ತು ಹೀಗೆ ಕೊಲ್ಲುತ್ತ ಕೊಲ್ಲುತ್ತ ನಿಮ್ಮ ರಾಜ್ಯ ಪಡೆಯಿರಿ–ಇಲ್ಲಿಯವರೆಗೆ ಸಮರ್ಥರ ಉಪದೇಶಗಳು ಒಂದು ಮುಟ್ಟುತ್ತವೆ. ಕೇವಲ ಆಧ್ಯಾತ್ಮಿಕ ದೃಷ್ಟಿಯಿಂದ ವಿಚಾರ ಮಾಡಿದರೆ ಹೀಗೆ ಯಾರಾದರೂ ಪ್ರಾಣವನ್ನು ತೆಗೆಯಬೇಕೆಂದು ಉಪದೇಶ ಮಾಡುವುದು ಈ ಸಂತರೆಂದು ಹೇಳಿಕೊಳ್ಳುವ ಜನರಿಗೆ ಶೋಭಿಸಲಾರದು ಎಂದು ಯಾರ ಮನಸ್ಸಿನಲ್ಲಿಯಾದರೂ ಬರುವ ಸಾಧ್ಯತೆಯಿದೆ. ಯಾರಾದರೂ ಕೊಲೆ ಮಾಡಿ ರಾಜ್ಯವನ್ನು ಪಡೆಯುವುದರಿಂದ ಯಾರೂ ಮೋಕ್ಷಕ್ಕೆ ಹೋಗುವುದಿಲ್ಲ ಇಲ್ಲವೆ ಕರ್ಮದ ಪಾಶದಿಂದ ಮತ್ತು ಜನ್ಮಮರಣಗಳ ಚಕ್ರದಿಂದ ಬಿಡುಗಡೆಯಾಗುವುದಿಲ್ಲ ಎಂಬುದು ಸಮರ್ಥರಿಗೆ ಗೊತ್ತಿರಲಿಲ್ಲವೆ ? ಅವರು ಆ ಸಿದ್ಧಾಂತಗಳನ್ನು ಮರೆತಿದ್ದರೆಂದು ಹೇಳಬೇಕೆ ? ಹಾಗೆ ಹೇಳಲು ಬರುವುದಿಲ್ಲ. ಕಾರಣ ಸ್ವಂತ ಬದುಕಿಗಾಗಿ ಪಡೆದ ಸಂನ್ಯಸ್ತ ಜೀವನದ ದಾರಿಯನ್ನು ಅವರು ಕೊನೆಯವರೆಗೆ ಬಿಟ್ಟಿರಲಿಲ್ಲ. ಎಲ್ಲ ಸಮಾಜಕ್ಕೆ ಪರಾಕ್ರಮದ ಮತ್ತು ಪ್ರವೃತ್ತಿಪರವಾಗಿ ಉಪದೇಶವನ್ನು ಮಾಡುತ್ತಿರುವಾಗಲೂ ಬಿಟ್ಟಿರಲಿಲ್ಲ. ಅನಧಿಕಾರಿ ಮನುಷ್ಯರಿಗೆ ನಿವೃತ್ತಿಯ ಮತ್ತು ಪರಮಾರ್ಥದ ಉಪದೇಶವನ್ನು ಮಾಡುತ್ತಲಿದ್ದರೆ ಕರ್ತೃತ್ವಶೂನ್ಯತೆಗಾಗಿ ಅವರ ಐಹಿಕವು ಮೊದಲೇ ಮುಳುಗುತ್ತಿತ್ತು. ಮನದಲ್ಲಿ ಅಂಥ ಇಚ್ಛೆ ಇಲ್ಲದ್ದರಿಂದ ಪರಮಾರ್ಥ ಸಹ ಅವರ ಕೈಗೆ ಹತ್ತಲಾರದೆಂಬ ವಾಸ್ತವವನ್ನು ಸಮರ್ಥರು ತಿಳಿದಿದ್ದರು. ಪ್ರಪಂಚದತ್ತ ಬೆನ್ನು ತಿರುಗಿಸಿದ ಸಮರ್ಥರ ಲಕ್ಷ್ಯದಲ್ಲಿ ಇದು ಬಂದಿದ್ದು ವಿಶೇಷ. ಭಾರತದಲ್ಲಿ ಪರಮಾರ್ಥಿ ಪುರುಷರ ನೂರಾರು ವರ್ಷಗಳಿಂದ ನಡೆದು ಬಂದಿರುವ ನಿವೃತ್ತಿಶೀಲತೆಯ ಏಕಾಂಗಿ ಪರಂಪರೆಯನ್ನು ಗಮನಕ್ಕೆ ತಂದುಕೊಂಡರೆ ಇದು ಇನ್ನೊಂದು ವಿಶೇಷ. ಆದರೆ

ಅದರಲ್ಲಿಯೇ ಒಂದು ವೈಶಿಷ್ಟ್ಯವೆಂದರೆ ಸಮಾಜದ ದಯನೀಯ ಸ್ಥಿತಿಯು ಗಮನಕ್ಕೆ ಬಂದಾಗ ತಮ್ಮ ಜೀವನದ ಮತ್ತು ಉಪದೇಶದ ಮುದ್ರೆಯನ್ನೇ ಸಮರ್ಥರು ಪರಿವರ್ತಿಸಿದರು. ಚಾಫಳಕ್ಕೆ ಬಂದ ಬಳಿಕ ಆ ಮೇಲಿನ ಮೂವತ್ತಾರು ವರ್ಷಗಳ ಕಾಲದಲ್ಲಿಯ ಅವರ ಜೀವನವೇ ಇದಕ್ಕೆ ಸಾಕ್ಷಿಯಾಗಿದೆ.

ಪರಮಾರ್ಥದಲ್ಲಿ ನಡೆಯನ್ನು ಮುಂದುವರಿಸುವ ದೃಷ್ಟಿಯಿಂದ ವಿಚಾರ ಮಾಡಿದರೆ ಹೀಗೆ ಉಪದೇಶ ಮಾಡುವುದು ವಿರುದ್ಧ ಮಾರ್ಗವಾಗುತ್ತದೆ. ಅಧ್ಯಾತ್ಮದ ಮಾರ್ಗದಿಂದ ತಮ್ಮ ಹೆಜ್ಜೆಯನ್ನು ಹಿಂದೆ ತೆಗೆದುಕೊಳ್ಳುವುದಾಗಿದೆ. ಸಮರ್ಥರಂಥ ತೀಕ್ಷ್ಣ ಬುದ್ಧಿಯ ವಿಚಕ್ಷಣ ಪುರುಷರು ಇದನ್ನು ಅರಿತಿರಲಾರರೆಂದು ಹೇಳಲು ಬರುವುದಿಲ್ಲ. ಕರ್ಮದ ಪಾಶಗಳನ್ನು ಬಿಡಿಸಬೇಕು, ಎಲ್ಲ ಕರ್ಮಗಳು ಸುಟ್ಟು ಹೋಗಬೇಕೆಂದರೆ ಆತ್ಮಜ್ಞಾನದ ಅಗ್ನಿಯನ್ನು ಹೊತ್ತಿಸಬೇಕಾಗಿದೆ. ಆದರೆ ಆ ಅಗ್ನಿಯು ಪೂರ್ತಿ ಹೊತ್ತಿಕೊಂಡ ಮೇಲೆ, ಅಂದರೆ ಪೂರ್ಣ ಆತ್ಮಜ್ಞಾನವು ಪ್ರಾಪ್ತವಾದ ಬಳಿಕ ಸಮರ್ಥರು ಸಮಾಜಕ್ಕೆ ಕರ್ಮದ ಉಪದೇಶ ಮಾಡತೊಡಗಿದ್ದಾರೆ. "ಅಗ್ನಿಯನು ಪ್ರಜ್ವಲಗೊಳಿಸಿರಿ ಪ್ರಜ್ವಲಗೊಳಿಸಿದನ್ನು ಪ್ರಜ್ವಲಿಸುತ್ತದೆ!" ಇಂಥ ಉದ್ಗಾರದಲ್ಲಿಯ ಯಾವ ಅಗ್ನಿಯನ್ನು ಪ್ರಜ್ವಲಗೊಳಿಸುವ ಪ್ರೇರಣೆಯನ್ನು ಕೊಟ್ಟಿರುವರೋ ಅದು ಬೇರೆ ಪ್ರಕಾರದ್ದಾಗಿದೆ. ಜ್ಞಾನ ಮತ್ತು ಕರ್ಮ ಈ ಎರಡರಲ್ಲಿ ಹಿಂದಿನ ಕಾಲದಿಂದ ನಡೆದು ಬಂದ ವಿರೋಧವನ್ನು ಸಮರ್ಥರು ಇಲ್ಲಿ ಸರಳವಾಗಿ ಬದಿಗೆ ಸರಿಸಿದ್ದಾರೆ. ಮಾಡಿದ ಕಾರ್ಯಗಳ ಫಲವನ್ನು ಅನುಭವಿಸ ಬೇಕಾಗುತ್ತದೆ. ಎಲ್ಲ ಕರ್ಮಗಳನ್ನು ಭೋಗಿಸಿ ಅವುಗಳನ್ನು ಕಳೆದುಕೊಂಡರೆ ಮೋಕ್ಷವು ಪ್ರಾಪ್ತವಾಗುವುದಿಲ್ಲ ಎಂದು ಪ್ರಾಚೀನ ಕಾಲದಿಂದಲೂ ತತ್ತ್ವಜ್ಞಾನಿಗಳು ಹೇಳುತ್ತ ಬಂದಿದ್ದಾರೆಂಬುದು ಸಮರ್ಥರ ಗಮನದಲ್ಲಿರಲಿಲ್ಲ ಎಂದಲ್ಲ. ಆದರೆ ಅದು ಪ್ರಾಪ್ತ ಕಾಲದ ಕರೆ ಎಂದು ಅವರು ತಿಳಿದರು. ಆ ಕರೆಗೆ ಅವರು ಓಗೊಟ್ಟರು. ಅವರು ಸ್ಪಷ್ಟವಾಗಿ ಐಹಿಕದಲ್ಲಿಯ ಪ್ರಶ್ನೆಗಳ ಬಗೆಗೆ ವಿಚಾರ ಮಾಡಿ ಆ ಸಂದರ್ಭದಲ್ಲಿಯ ತಮ್ಮ ಕರ್ತವ್ಯವನ್ನು ಪ್ರತಿಯೊಬ್ಬರು ನಿರ್ವಹಿಸುವಂತೆ ಉಪದೇಶ ಕೊಟ್ಟರು. ಆ ಕರ್ತವ್ಯವು ಎಷ್ಟೇ ಉಗ್ರವಾಗಿರಲಿ ಇಲ್ಲವೆ ಹಿಂಸೆಯ ಸಂಸರ್ಗದಿಂದ ದೂಷಿತವಾಗಿರಲಿ ವಿಜಿಗೀಷು ವೃತ್ತಿಯನ್ನು ಗ್ರಹಿಸಿ ಅವರು ಆ ಕಠೋರ ಕರ್ತವ್ಯವನ್ನು ಪೂರ್ತಿಗೊಳಿಸುವ ಸಂದೇಶವನ್ನು ಕೊಟ್ಟರು.

ಹೀಗೆ ವಿಜಿಗೀಷು ವೃತ್ತಿಯನ್ನು ಗ್ರಹಿಸುವ ಒಬ್ಬ ಮಹಾಪುರುಷ ಛತ್ರಪತಿ ಶಿವರಾಯನ ಸ್ವರೂಪದಲ್ಲಿ ಆಗ ಜನ್ಮ ತಾಳಿದ್ದರು. ಸಮರ್ಥರು ಕೃಷ್ಣಾತೀರಕ್ಕೆ ಬಂದು ಮುಟ್ಟಿದ ಆ ಸಮಯದಲ್ಲಿ ಮಹಾರಾಷ್ಟ್ರದ ಭೂಮಿಯಲ್ಲಿ ಕಾಣಿಸಿಕೊಳ್ಳ ತೊಡಗಿದ್ದರು. ಅವರ ಕರ್ತೃತ್ವದಿಂದ ಮಹಾರಾಷ್ಟ್ರದ ಭಾಗ್ಯವು ಪ್ರಜ್ವಲಿಸುವುದಿತ್ತು. ಐಹಿಕದಲ್ಲಿ ಸ್ಮರಿಸುವ ಯಾವ ವಿಶೇಷ ವಿಚಾರಗಳನ್ನು ಸಮರ್ಥರು ಮಂಡಿಸಿದರೋ, ಆ ದೃಷ್ಟಿಯಿಂದ ಶಿವರಾಯರ ಜತೆಗೆ ಬಂದ ಅವರ ಸಂಬಂಧವು ವಿಶೇಷ ಅರ್ಥ ಪೂರ್ಣವಾಗಿದೆ.

# ಶಿವರಾಜನನ್ನು ಸ್ಮರಿಸಿರಿ

ಸಮರ್ಥರು ಚಾಫಳದಲ್ಲಿ ಹೊಸ ರಾಮಮಂದಿರವನ್ನು ನಿರ್ಮಿಸಿ ಪೂರ್ತಿಗೊಳಿಸಿದರು. ಅಲ್ಲಿ ರಾಮನವಮಿಯ ಉತ್ಸವವನ್ನು ಅತೀ ವೈಭವದಿಂದ ಜರುಗಿಸಿದರು. ಈ ಘಟನೆಯು ಸನ್ 1648ರಲ್ಲಿ ನಡೆಯಿತು. ಶಿವಾಜಿ ಮಹಾರಾಜರು ತೋರಣ ಕಿಲ್ಲೆಯನ್ನು ಪಡೆದು ಸ್ವರಾಜ್ಯದ ತೋರಣವನ್ನು ಕಟ್ಟಿದರು. ಈ ಘಟನೆಯು ಅದೇ ವರ್ಷ ನಡೆದಿದ್ದು. ಇದೊಂದು ಯೋಗಾಯೋಗವೆಂದು ಹೇಳಬೇಕು. ಇಂಥ ಘಟನೆಯು ಒಮ್ಮಿಂದೊಮ್ಮೆ ಇಲ್ಲವೆ ಒಂದೇ ದಿನದಲ್ಲಿ ಜರುಗುವುದಿಲ್ಲ. ಅದಕ್ಕೂ ಮೊದಲು ಅದರ ಪೂರ್ವಸಿದ್ಧತೆಯನ್ನು ಬಹಳಷ್ಟು ದಿವಸಗಳಿಂದ ಮಾಡಬೇಕಾಗುತ್ತದೆ. ತೋರಣವನ್ನು ಪಡೆಯುವ ಮೊದಲು ಎರಡು ಮೂರು ವರ್ಷಗಳಿಂದ ಶಿವರಾಯರ ಚಟುವಟಿಕೆಗಳು ಪುಣೆಯ ಸಮೀಪದ ಪ್ರದೇಶದಲ್ಲಿ ಪ್ರಾರಂಭವಾಗಿದ್ದವು. ಕೆಲವು ಆತ್ಮೀಯ ಗೆಳೆಯರನ್ನು ಕೂಡಿಕೊಂಡು ರೋಹಿಡೇಶ್ವರನ ಎದುರು ಅವರು 'ಹಿಂದೂ ಸ್ವರಾಜ್ಯ' ಸ್ಥಾಪಿಸುವ ಪ್ರತಿಜ್ಞೆ ಮಾಡಿದ್ದರು. ತಮ್ಮ ಜಹಗಿರಿಯಲ್ಲಿ ಊರೂರಿಗೆ ಹೋಗಿ ವಿಶ್ವಾಸಿಕ ಸಹಕಾರಿಗಳನ್ನು ಕೂಡಿಸಿದ್ದರು. ಸೈನ್ಯವನ್ನು ಸಂಗ್ರಹಿಸಿದ್ದರು. ಅದೇ ಕಾಲಕ್ಕೆ ಮಸೂರ ಶಹಾಪುರಗಳ ಪರಿಸರದಲ್ಲಿ ಸಮರ್ಥರ ಕಾರ್ಯಗಳಿಗೆ ಸ್ವಲ್ಪ ಆ ಸ್ವರೂಪ ಬಂದಿತ್ತು. ಅದಕ್ಕಾಗಿ ಸಾತಾರೆಯಿಂದ ಕೊಲ್ಹಾಪುರದವರೆಗೆ, ಅಷ್ಟು ಭಾಗದಲ್ಲಿ ಅವರ ಸಂಚಾರವು ನಾಲ್ಕು ವರ್ಷಗಳಿಂದ ನಡೆದಿತ್ತು.

ಬೇರೆ ಬೇರೆ ಕ್ಷೇತ್ರಗಳಲ್ಲಿ ಈ ಇಬ್ಬರು ಕರ್ತೃತ್ವಶೀಲ ಪುರುಷರ ಕಾರ್ಯಗಳ ಪ್ರಾರಂಭವು ಒಂದೆರಡು ವರ್ಷಗಳ ಹಿಂದೆ ಮುಂದೆ, ಪರಸ್ಪರ ಅತೀ ನಿಕಟವಾದದಂಥ ಪ್ರದೇಶದಲ್ಲಿ ಆಗಿತ್ತೆಂಬುದು ಇದರರ್ಥವಾಗಿದೆ. ತಮ್ಮ ಧರ್ಮ ಮತ್ತು ಸಂಸ್ಕೃತಿ ಈ ವಿಷಯಗಳ ಪ್ರಖರವಾದ ಅಭಿಮಾನವು ಇಬ್ಬರಲ್ಲಿಯೂ ಇತ್ತು. ತಮ್ಮ ಸಮಾಜದ ದುಸ್ಥಿತಿಯ ನೋವು ಇಬ್ಬರ ಮನಸ್ಸಿನಲ್ಲಿಯೂ ತುಂಬಿತ್ತು. ಸಮಾಜದ ಉದ್ಧಾರಕ್ಕಾಗಿ ಒಬ್ಬ ಪುರುಷನು ಧಾರ್ಮಿಕ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದರೆ, ಇನ್ನೊಬ್ಬ ರಾಜಕೀಯ ಕ್ಷೇತ್ರದಲ್ಲಿ. ಆದರೆ ಕಾರ್ಯಕ್ಷೇತ್ರಗಳು ಈ ರೀತಿ ಭಿನ್ನವಾಗಿದ್ದರೂ ಕೂಡ ಪ್ರತಿಯೊಬ್ಬನಿಗೆ ಎರಡನೆಯವನ ಕ್ಷೇತ್ರದ ಬಗೆಗೆ ಒಂದು ಜೀವಂತವಾದ ಆಸ್ಥೆಯಿತ್ತು. ವಿರಕ್ತ ವೃತ್ತಿಯಿಂದ ತಮ್ಮ ವೈಯಕ್ತಿಕ ಜೀವನವನ್ನು ಸಾಗಿಸುತ್ತಿದ್ದರೂ, ಸಮಾಜದ ಐಹಿಕ ಜೀವನವು ಸುಧಾರಿಸಬೇಕೆಂಬ ಚಿಂತೆ ಸಮರ್ಥರ ಮನಸ್ಸಿನಲ್ಲಿತ್ತು. ಸ್ವರಾಜ್ಯವನ್ನು ಸ್ಥಾಪಿಸುವ ವ್ರತವನ್ನು ಹೊಂದಿದ ತರುಣ ಶಿವಾಜಿ ಮಹಾರಾಜರ ಹೃದಯದಲ್ಲಿ ಸಾಧುಸಂತರ ವಿಷಯದಲ್ಲಿ ಉತ್ಕಟವಾದ ಉದಾರಭಾವವಿತ್ತು

ದೇವರ ಕೈವಾರಿಯಂಥ ಅರಸನಿದ್ದರೆ ಧರ್ಮರಕ್ಷಣೆಯಾಗುವುದೆಂದು ಸಮರ್ಥರು ತಿಳಿದುಕೊಂಡಿದ್ದರು. ಆದರೆ ಹಿಂದೂ ಸ್ವರಾಜ್ಯವನ್ನು ಸ್ಥಾಪಿಸುವ ತಮ್ಮ ಕಾರ್ಯಕ್ಕೆ ಸತ್ಪುರುಷರ ಆಶೀರ್ವಾದವು ಇರಬೇಕೆಂದು ಶಿವರಾಯರ ಮನಸ್ಸಿನ ಬಯಕೆಯಾಗಿತ್ತು.

ಇಂಥ ಸಮಾನಶೀಲ ಇಬ್ಬರು ಪುರುಷರ ಭೇಟಿ ಯಾವಾಗ ಮತ್ತು ಎಲ್ಲಿ ಆಗಿರಬೇಕು ? ಚಾಫಳದ ರಾಮಮಂದಿರವು ನಿರ್ಮಿತವಾದ ಸಮಾರಂಭದಲ್ಲಿ ಶಿವಾಜಿ ಮಹಾರಾಜರು ಉಪಸ್ಥಿತರಿದ್ದರು. ಇಷ್ಟೇ ಅಲ್ಲ ಈ ಮುಂಚೆ ಮಸೂರಿನಲ್ಲಿ ಜರುಗಿದ ರಾಮನವಮಿಯ ಒಂದು ಉತ್ಸವಕ್ಕೆ ಅವರು ಬಂದಿದ್ದರು ಎಂದು ಹೇಳಲ್ಪಟ್ಟಿದೆ. ಮಸೂರ ಮತ್ತು ಚಾಫಳ ಈ ಎರಡೂ ಗ್ರಾಮಗಳು ಶಹಾಜಿ ಮಹಾರಾಜರ ಜಹಗಿರಿಯಲ್ಲಿರುವುದರಿಂದ ಅವರ ಮಗನೆಂದು ಇಂಥ ಒಂದು ವಿಶೇಷ ಕಾರ್ಯಕ್ರಮಗಳಿಗಾಗಿ ಶಿವಾಜಿ ಮಹಾರಾಜರು ಉಪಸ್ಥಿತರಿರುವುದು ಅವಶ್ಯವೆಂದು ಹೇಳಲಾಗುವುದಿಲ್ಲ. ಆದರೆ ಹಾಗೆ ಆಗಿದ್ದರೆ ಈ ಉತ್ಸವಗಳ ಪೈಕಿ ಯಾವುದಾದರೊಂದು ಪ್ರಸಂಗದಲ್ಲಿ ಅವರು ಬಂದಿದ್ದರೆಂದು ತಿಳಿಯಲು ಪೂರ್ಣ ಆಧಾರವಿಲ್ಲ.

ಆದರೆ ಚಾಫಳದ ಉತ್ಸವಕ್ಕೆ ಬಂದಿದ್ದರೂ ಅದರ ಮುಂದಿನ ವರ್ಷ ಅಂದರೆ ಸನ್ 1649ರಲ್ಲಿ ಶಿವಾಜಿ ಮಹಾರಾಜರು ಚಾಫಳಕ್ಕೆ ಸಮರ್ಥರ ಭೇಟಿಗಾಗಿ ಬಂದಿದ್ದರು. ಅವರು ಸಮರ್ಥರಿಂದ ಅನುಗ್ರಹ ಪಡೆದರೆಂದು ವಾಕನೀಸರ ಟಿಪ್ಪಣಿಯಲ್ಲಿ ಉಲ್ಲೇಖವಿದೆ. ವಾಕನೀಸರ ಟಿಪ್ಪಣಿಗಳಲ್ಲಿ ಬಹಳಷ್ಟು ಅಂಶಗಳು ನಿಜವೆಂದು ಇತರ ಐತಿಹಾಸಿಕ ಕಾಗದ ಪತ್ರಗಳ ಆಧಾರದಿಂದ ಪ್ರಸ್ತಾಪಿತವಾಗಿದೆ. ಈ ಅನುಗ್ರಹದ ಸಂಬಂಧವಾಗಿ ಆ ಟಿಪ್ಪಣಿಯಲ್ಲಿದ್ದ ಉಲ್ಲೇಖವು ಮುಂದಿನಂತಿದೆ. "ಶಿವಾಜಿ ಮಹಾರಾಜ ಇವರಿಗೆ ಅನುಗ್ರಹವು ಶಕೆ 1571 ರಲ್ಲಿ ಶಿಂಗಣವಾಡಿಯ ತೋಟದಲ್ಲಿ ವೈಶಾಖ ಶುದ್ಧ ನವಮಿಯ ಗುರುವಾರವಾಯಿತು." ಈ ಟಿಪ್ಪಣಿಯ ಮುಂದೆ ಕೂಡಲೇ ಹೀಗೆ ಹೇಳಲಾಗಿದೆ. "ಇತರ ಶಿವಛತ್ರಪತಿಯ ಪ್ರಕರಣವನ್ನು ವಿಶೇಷವಾಗಿ ಬರೆಯಲಾಗಿದೆ." ಬೇರೆ ಪ್ರಕರಣ ಈವರೆವಿಗೆ ದೊರೆತಿಲ್ಲ. ಸಮರ್ಥರ ದೈನಂದಿನ ಚಟುವಟಿಕೆಗಳ ಸಮಾಚಾರವನ್ನು ಒಬ್ಬ ಕಾರಕೂನನ ಕಡೆಯಿಂದ ಶಿವಾಜಿಯವರಿಗೆ ಕಳುಹಿಸಿಕೊಡಲಾಗುತ್ತಿತ್ತು, ಎಂಬ ಉಲ್ಲೇಖಗಳು ಕೆಲವುಕಡೆಗೆ ದೊರೆಯುತ್ತವೆ. ಆ ನಮೂದಗಳೇ ಇದುವರೆಗೆ ಸಿಕ್ಕಿಲ್ಲ. ಆದರೆ ಮುಂದೆ ಇವರಿಬ್ಬರ ಸಂಬಂಧವು ಎಷ್ಟು ಹತ್ತಿರವಾಗಿತ್ತು ಎಂಬುದರ ಬಗ್ಗೆ ತರ್ಕವನ್ನು ಇಂಥ ಪ್ರಕಾರದ ಉಲ್ಲೇಖಗಳಿಂದ ಮಾಡಲು ಬರುತ್ತದೆ. ವಾಕನೀಸರ ಟಿಪ್ಪಣಿಗಳಲ್ಲಿಯ ಬಿಡಿ ಉಲ್ಲೇಖಗಳ ಆಧಾರದಿಂದ ಸಮರ್ಥರು ಶಿವಾಜಿ ಮಹಾರಾಜರಿಗೆ ಅನುಗ್ರಹವನ್ನು ಕೊಟ್ಟರು. ಈ ಪ್ರಸಂಗದ ವೃತ್ತಾಂತವು ಹನುಮಂತ ಸ್ವಾಮಿಯವರ ಬಖೈರಿನಲ್ಲಿ ಸವಿಸ್ತಾರವಾಗಿ ವರ್ಣಿತವಾಗಿದೆ. ಆ ವೃತ್ತಾಂತದಲ್ಲಿ ಕೆಲವು ಅದ್ಭುತ ಭಾಗಗಳಿವೆ. ಅವುಗಳನ್ನು ಸಾಧ್ಯವಾದಷ್ಟು ಬೇರೆಮಾಡಿ, ಅವುಗಳಲ್ಲಿಯ ಸಾರವನ್ನು ನೋಡಬೇಕಾಗುವುದು.

ಚಾಫಳದಲ್ಲಿ ಹೊಸ ರಾಮಮಂದಿರವನ್ನು ಕಟ್ಟಿಸಿದ ವೃತ್ತಾಂತವು ಕಿವಿಗೆ ಬಿದ್ದಾಗ, ಅದನ್ನು ನಿರ್ಮಿಸಿದ ಸತ್ಪುರುಷನ ದರ್ಶನವನ್ನು ತಾವು ಪಡೆಯಬೇಕೆಂಬ ಇಚ್ಛೆ ಶಿವಾಜಿ ಮಹಾರಾಜರ ಮನಸ್ಸಿನಲ್ಲಿ ಹುಟ್ಟಿತು. ಸದ್ಗುರುವಿಲ್ಲದೆ ಮೋಕ್ಷವು ಪ್ರಾಪ್ತವಾಗದೆಂಬ ವಿಚಾರವನ್ನು ಮಹಾಡದಲ್ಲಿ ಜರುಗಿದ ಒಂದು ಕೀರ್ತನೆಯಲ್ಲಿ ಕೇಳಿದ ಬಳಿಕ, ತಮಗೆ ಸದ್ಗುರುವಿನ ಭೇಟಿ ಲಭಿಸಬೇಕೆಂದು ರಾಜರ ಮನಸ್ಸಿನಲ್ಲಿ ಅತೀವ ಉತ್ಕಟವಾದ ಬಯಕೆ ಮೂಡಿತು. ಮಹಾಡದಿಂದ ಅವರು ಪ್ರತಾಪಗಡಕ್ಕೆ ಬಂದರು. ಸಮರ್ಥರನ್ನು ಗುರುಗಳನ್ನಾಗಿ ಮಾಡಿಕೊಳ್ಳಬೇಕೆಂಬ ದೃಷ್ಟಾಂತವು ಅಲ್ಲಿ ಅವರಿಗಾಯಿತು. ಆಮೇಲೆ ಅವರು ನೇರವಾಗಿ ಚಾಫಳಕ್ಕೆ ಬಂದು ಅಲ್ಲಿ ಮಾಮಲೇದಾರ ನರಸೋಮಲನಾಥ ಅವರನ್ನು ಸಮರ್ಥರ ಬಗೆಗೆ ವಿಚಾರಿಸಿದರು. ಅವರು ಯಾವಾಗಲೂ ಕಾಡಿನಲ್ಲಿ ಸಂಚರಿಸುತ್ತಿರುತ್ತಾರೆಂದು ನರಸೋಮಲನಾಥ ಹೇಳಿದರು. ಇಷ್ಟು ದೊಡ್ಡ ಸತ್ಪುರುಷ ಈ ಭಾಗದಲ್ಲಿ ಸಂಚರಿಸುತ್ತಿರುವಲ್ಲಿ ಇಲ್ಲಿಯವರೆಗೆ ಅವರ ಯಾವುದೇ ಸೇವೆಯನ್ನು ತಮ್ಮಿಂದ ಮಾಡಲಾಗಿಲ್ಲ ಎಂಬ ವ್ಯಥೆಯನ್ನು ರಾಜರು ವ್ಯಕ್ತಪಡಿಸಿದರು. ರಾಜರು ಆಜ್ಞೆ ಮಾಡಿದಂತೆ ರಾಮ ಮಂದಿರದ ನಿರ್ಮಾಣಕ್ಕಾಗಿ ಮುನ್ನೂರು ಹೊನ್ನುಗಳ ಸಹಾಯವು ಸಮರ್ಥರಿಗೆ ಸಲ್ಲಿಸಲಾಗಿತ್ತೆಂದು ಆಗ ನರಸೋಮಲನಾಥರು ಹೇಳಿದರು. ಆದರೆ ಅಷ್ಟಕ್ಕೆ ಶಿವರಾಯರ ಮನಸ್ಸಿಗೆ ಸಮಾಧಾನವಾಗಿರಲಿಕ್ಕಿಲ್ಲ. ಮತ್ತೂ ಏನನ್ನಾದರೂ ತಾವು ಮಾಡಬೇಕೆಂದು ಅವರಿಗೆ ತಿಳಿದಿರಬೇಕು. ಮಾಂಡನದಿ ಮತ್ತು ಹಣಮಂತ ತೊರೆ ಇವುಗಳ ನೀರಿನಿಂದ ದೇವಾಲಯದ ಕಟ್ಟಡಕ್ಕೆ ಅಪಾಯವಾಗುವ ಸಂಭವವಿದೆಯೆಂದು ಅವರಿಗೆ ತಿಳಿದುಬಂದಿತು. ಅಲ್ಲಿ ಒಂದು ಒಡ್ಡನ್ನು ಹಾಕಿಸಬೇಕೆಂದು ಶಿವಾಜಿ ಮಹಾರಾಜರು ನರಸೋಮಲನಾಥರಿಗೆ ಆಜ್ಞಾಪಿಸಿದರು. ಅದಕ್ಕಾಗಿ ಏಳು ನೂರು ಹೊನ್ನುಗಳನ್ನು ಕೊಟ್ಟರು.

ಸಮರ್ಥರನ್ನು ಭೇಟಿಯಾಗಬೇಕೆಂದು ಕೊಂಢವಳಿಯ ಗುಹೆಯಲ್ಲಿ ಹಾಗೂ ಬೇರೆ ಕಡೆಗೆ ಅವರನ್ನು ಹುಡುಕಿದರು. ಆದರೆ ಅವರು ಎಲ್ಲಿಯೂ ದೊರೆಯಲಿಲ್ಲ. ನಿರಾಶರಾಗಿ ಶಿವರಾಯರು ಪ್ರತಾಪಗಡಕ್ಕೆ ಹೋದರು. ಸಮರ್ಥರ ಅನುಗ್ರಹ ಪಡೆಯದೆ ಅನ್ನಗ್ರಹಣ ಮಾಡಲಾರೆನೆಂದು ಅವರು ನಿರ್ಧರಿಸಿ, ಅಲ್ಲಿ ದೇವಿಯ ಮಂದಿರದಲ್ಲಿ ಮಲಗಿಕೊಂಡಾಗ ಸಮರ್ಥರು ಅವರ ಕನಸಿನಲ್ಲಿ ದರ್ಶನ ಕೊಟ್ಟರು. ಆಮೇಲೆ ಶಿವರಾಯರು ಮತ್ತೆ ಚಾಫಳಕ್ಕೆ ಹೊರಟರು. ಮಾಹುಲಿಗೆ ಬರುವಾಗ, ಅದೇ ಸಮರ್ಥರಿಂದ ಬಂದ ಪತ್ರವು ಅವರಿಗೆ ಮುಟ್ಟಿತು. ಅದರ ಉತ್ತರವನ್ನು ತತ್ಕಾಲದಲ್ಲಿ ಕಳುಹಿಸಿ ಶಿವರಾಯರು ಚಾಫಳಕ್ಕೆ ಬಂದರು. ಅಲ್ಲಿಂದ ಒಂದು ಮೈಲಿ ಅಂತರದಲ್ಲಿರುವ ಶಿವಗಣವಾಡಿಯ ಅರಣ್ಯದಲ್ಲಿ ಸಮರ್ಥರಿದ್ದಾರೆಂದು ಅರಿತ ಕೂಡಲೇ ದಿವಾಕರಭಟ್ಟರನ್ನು ಜತೆಗೆ ಕರೆದುಕೊಂಡು ಅಲ್ಲಿಗೆ ಹೋದರು. ಶಿವರಾಯ ಕಳುಹಿಸಿದ ಪತ್ರದ ಉತ್ತರವು ಅದಕ್ಕಿಂತ ಮೊದಲು ಸ್ವಲ್ಪ ಸಮಯದಲ್ಲಿ ಸಮರ್ಥರ ಕೈಗೆ ಬಂದಿತ್ತು. ಅದಕ್ಕಾಗಿ ಅವರು, "ಪತ್ರ ಮತ್ತು ನೀವು ಒಮ್ಮೆಲೇ ಬಂದಿರಿ"

ಎಂದು ಅಂದರು. ರಾಜರು ಸಮರ್ಥರನ್ನು ವಂದಿಸಿದರು ಮತ್ತು ಅನುಗ್ರಹಿಸ ಬೇಕೆಂದು ವಿನಂತಿಸಿಕೊಂಡರು. ಆಮೇಲೆ ಸಮರ್ಥರು ಅವರಿಗೆ ಅನುಗ್ರಹವನ್ನು ದಯಪಾಲಿಸಿದರು. ನೀಳೋ ಸೋನದೇವ ಹಾಗೂ ಬಾಳಾಜಿ ಆವಜೀ ಇವರು ಜತೆಯಲ್ಲಿದ್ದರು. ಅವರು ಕೂಡ ಅನುಗ್ರಹ ಪಡೆದರು.

ಅನುಗ್ರಹ ಪಡೆದ ಬಳಿಕ ಸಮರ್ಥರ ಸಹವಾಸವು ನಿತ್ಯ ಲಭಿಸಬೇಕೆಂಬ ಬಯಕೆ ಯಾಗಿ ಶಿವಾಜಿ ಮಹಾರಾಜರು ತಮ್ಮ ಹತ್ತಿರ ಇರಲು ಅವರಿಗೆ ವಿನಂತಿ ಮಾಡಿ ಕೊಂಡರು. ಈ ವಿನಂತಿಯನ್ನು ಸ್ವೀಕರಿಸುವುದು ಸಮರ್ಥರಿಗೆ ಸಾಧ್ಯವಿರಲಿಲ್ಲ. ಅವರು "ನಿಸ್ಪೃಹತೆಯಿಂದ ವಿಖ್ಯಾತರಾಗಿರಿ" ಇಂಥ ಆಶೀರ್ವಾದವನ್ನು ತಮ್ಮ ಶಿಷ್ಯ ರಿಗೆ ಕೊಡುವಂಥ ಹಾಗೂ ಆ ಉಪದೇಶವನ್ನು ಸ್ವಂತ ಆಚರಣೆಯಲ್ಲಿ ತರುವಂಥ ವ್ಯಕ್ತಿಯಾಗಿದ್ದರು. ಅವರು ಅರಸರಿಗೆ "ನಾವು ಅರಣ್ಯವಾಸಿಗಳು, ನೀವು ರಾಜ ಪುರುಷರು. ನಾವು ನಿಮ್ಮ ಹತ್ತಿರ ನಿತ್ಯ ಇರಲಾಗುವದಿಲ್ಲ" ಎಂದು ಹೇಳಿದರು. ಸಮರ್ಥರು ಈ ವ್ರತವನ್ನು ತಮ್ಮ ಆಯುಷ್ಯದಲ್ಲಿ ತಪ್ಪದೆ ನಿರ್ವಹಿಸಿದ್ದಾರೆ. ಸಮರ್ಥರು ತಮ್ಮ ಅರಣ್ಯವಾಸವನ್ನು ಎಂದಿಗೂ ಬಿಡಲಿಲ್ಲ. ಶಿವಾಜಿ ಮಹಾರಾಜರು ಛತ್ರಪತಿ ಸಿಂಹಾಸನಾಧೀಶ್ವರರಾಗಿ ದೀರ್ಘ ಯಶಸ್ಸು ಹಾಗೂ ಐಶ್ವರ್ಯವನ್ನು ಸಂಪಾದಿಸಿದರು. ಅವರು ಶಿವರಾಯರ ಸಾನ್ನಿಧ್ಯದಲ್ಲಿ ಎಂದೂ ಇರಲಿಲ್ಲ. ಶಿವಛತ್ರಪತಿ ಇಡೀ ಆಯುಷ್ಯ ಕೋಟೆಗಳಿಂದ ಕೋಟೆಗೆ ಹಾಗೂ ರಣರಂಗದಲ್ಲಿ ಸಂಚರಿಸುತ್ತಿದ್ದರೆ ಸಮರ್ಥರು ಒಮ್ಮೊಮ್ಮೆ ಚಾಫಾಪುರದ ಕಡೆಗೆ, ಆದರೊಮ್ಮೆ ಚಂದ್ರಗಿರಿಯ ಬೆಟ್ಟದ ಮೇಲೆ, ಒಮ್ಮೆ ಶಿವಥರದ ಸುಂದರಮಠದಲ್ಲಿ, ಇನ್ನೊಮ್ಮೆ ಹೆಳವಾಕದ ಗುಹೆಯಲ್ಲಿ ಹೀಗೆ ಕಾಡು–ವನಗಳಲ್ಲಿ ಭ್ರಮಣ ಮಾಡುತ್ತಿದ್ದರು.

ಚಾಫಳದಲ್ಲಿ ರಾಮಮಂದಿರ ನಿರ್ಮಾಣವಾದ ಬಳಿಕ ವರ್ಷ ತುಂಬುವುದರೊಳಗೆ ಸಮರ್ಥರು ಪಂಢರಪುರಕ್ಕೆ ಹೋಗಿದ್ದರು. ಅಲ್ಲಿಂದ ಮರಳಿ ಬಂದ ಬಳಿಕ ಕಲ್ಯಾಣ ಸ್ವಾಮಿ, ಅನಂತಕವಿ ಮತ್ತು ಅಕ್ಕಾ ಇವರನ್ನು ಜತೆಯಲ್ಲಿ ಕರೆದುಕೊಂಡು ಅವರು ಶಿವಥರದ ಸುಂದರ ಮಠಕ್ಕೆ ಹೋದರು. ಅಲ್ಲಿ ಹತ್ತು ವರ್ಷ ಏಕಾಂತದಲ್ಲಿರಬೇಕು ಮತ್ತು ವಿರಾಮದಿಂದ ಗ್ರಂಥಲೇಖನ ಮಾಡಬೇಕೆಂದು ಒಂದು ಸಂಕಲ್ಪವು ಸಮರ್ಥರ ಮನಸ್ಸಿನಲ್ಲಿತ್ತು. ಈ ಸಂಕಲ್ಪದ ಸೂಚನೆ "ಹತ್ತು ಸಂವತ್ಸರಗಳು ಹಾಗೂ ಸರ್ವಗ್ರಂಥ" ಇಂಥ ಶಬ್ದಗಳಲ್ಲಿ ಸಾಂಪ್ರದಾಯಿಕ ಗ್ರಂಥಗಳಲ್ಲಿ ಕೆಲವೆಡೆ ಬಂದಿದೆ. ಆದರೆ ಈ ಸಂಕಲ್ಪದಂತೆ ಹತ್ತು ವರ್ಷ ಒಂದೇ ಸ್ಥಳದಲ್ಲಿ ಇರುವುದು ಸಮರ್ಥರಿಗೆ ಸಾಧ್ಯವಾಗಲಿಲ್ಲ. ಉತ್ತರೋತ್ತರವಾಗಿ ಶಿಷ್ಯ ಸಮುದಾಯವು ಬೆಳೆ ಯುತ್ತ ಹೋಯಿತು. ಮಠಗಳ ಸಂಖ್ಯೆಯು ಹೆಚ್ಚುತ್ತ ಹೋಯಿತು. ಆದ ಕಾರಣ ಕೆಲಸದ ಹೊಣೆಗಾರಿಕೆಯು ಹೆಚ್ಚಿತು. ಅದಕ್ಕಾಗಿ ಸಮರ್ಥರು ಮೇಲಿಂದಮೇಲೆ ಒಮ್ಮೆ ಚಾಫಳಕ್ಕೆ ಇನ್ನೊಮ್ಮೆ ಪರಳಿಗೆ ಬರಬೇಕಾಯಿತು. ಇಷ್ಟೇ ಅಲ್ಲದೆ ಮಹಾರಾಷ್ಟ್ರದ ಹೊರಗೂ ಕೂಡ ತೆಲಂಗಾಣ ಮತ್ತು ಕರ್ನಾಟಕಗಳಲ್ಲಿ ಸಂಚರಿಸ ಬೇಕಾಯಿತು. ಸಮರ್ಥರ ಈ ಸಂಚಾರದ ವಿವರವಾದ ವೃತ್ತಾಂತವು ದೊರೆಯುವು

ವಿಲ್ಲ. ಚಾಫಳದ ರಾಮಮಂದಿರ ಸ್ಥಾಪನೆಯಾದ ನಂತರದ ಮೂವತ್ತು ಮೂವತ್ತೊಂದು ವರ್ಷಗಳಲ್ಲಿನ ಘಟನೆಗಳ ವಿವರಗಳು ಸ್ವಲ್ಪ ದೊರೆತಿವೆ. ಆದರೆ ಕೈಗೆ ದೊರೆತ ಆ ಕೆಲ ವಿವರಣೆಗಳಿಂದ ಅವರು ಎಂದಿಗೂ ಒಂದೇ ಸ್ಥಳದಲ್ಲಿ ಬಹಳ ಸಮಯ ಇರುತ್ತಿರಲಿಲ್ಲ ಎಂಬುದು ಕಂಡುಬರುತ್ತದೆ. "ಬ್ರಾಹ್ಮಣನು ಸಂಚರಿಸುವುದು ಸರಿ !" ಈ ವಚನವು ಅವರ ವಿಷಯವಾಗಿಯೇ ಸಾರ್ಥಕವೆಂದು ನಿರ್ಧಾರಿತವಾಗಿದೆ. ಕೆಲ ಸಮಯ ಗೊಂದಲದಲ್ಲಿ ಕೆಲ ಸಮಯ ಏಕಾಂತದಲ್ಲಿ ಹೀಗೆ ಮಹಂತರ ಇರುವಿಕೆ ಇರಬೇಕೆಂದು ಸಮರ್ಥರ ಸೂತ್ರವಿದೆ. ಗೊಂದಲವೆಂದರೆ ಜನರಲ್ಲಿ ವ್ಯವಹರಿಸುವುದು, ಏಕಾಂತವೆಂದರೆ ಕಾಡಿನಲ್ಲಿ ಒಬ್ಬನೇ ಇರುವುದು. ಈ ಎರಡನ್ನೂ ಜತೆ ಮಾಡುವುದು ಬಹಳ ಕಠಿಣವಿದೆ. ಆದರೆ ಸಮರ್ಥರು ತಮ್ಮ ಜೀವನದಲ್ಲಿ ಅವುಗಳನ್ನು ಯಶಸ್ವಿಯಾಗಿ ಆಚರಿಸಿದ್ದಾರೆ. ಇಂಥ ವ್ರತವನ್ನು ಪಡೆದ ಸಮರ್ಥರು ಶಿವಾಜಿ ಮಹಾರಾಜರ ನಿತ್ಯ ಸಹವಾಸದಲ್ಲಿರುವುದು ಸಾಧ್ಯವಿರಲಿಲ್ಲ.

ಸಮರ್ಥರು ತಮ್ಮ ಹತ್ತಿರ ಇರಲು ಸಾಧ್ಯವಿಲ್ಲವೆಂಬುದನ್ನು ಅವರು ತಿಳಿದ ಬಳಿಕವೂ ತಮಗೆ ಒಂದಿಷ್ಟು ಸತ್ಪುರುಷರ ನಿತ್ಯದ ಸಾನ್ನಿಧ್ಯವು ಲಭಿಸಬೇಕೆಂದು ಇಚ್ಛೆ ಶಿವರಾಯರ ಮನಸ್ಸಿನಿಂದ ಹೋಗಿರಲಿಲ್ಲ ಎಂದು ಹೇಳುತ್ತಾರೆ. ಪುಣೆಯಿಂದ ದೇಹೂ ಕೇವಲ ಇಪ್ಪತ್ತು ಮೈಲಿ ದೂರದಲ್ಲಿದೆ. ಅಲ್ಲಿ ತುಕರಾಮ ಮಹಾರಾಜರ ವಾಸ್ತವ್ಯವಿತ್ತು. ರಾಜರು ಅವರಿಗೆ ಪತ್ರ ಬರೆದರು. ತಮ್ಮ ಭೇಟಿಗಾಗಿ ವಿನಂತಿಸಿಕೊಂಡರು. ತುಕಾರಾಮ ಆ ಸಮಯ ಐವತ್ತರ ಗಡಿಯಲ್ಲಿದ್ದರು. ಆಯುಷ್ಯದಲ್ಲಿ ಕೃತಕಾರ್ಯ ಮಾಡಿದ್ದ ಮತ್ತು ಉಪಕಾರಕ್ಕಾಗಿ ಉಳಿದಿದ್ದ ತುಕಾರಾಮ ಅವರು ದೇಹೂದಲ್ಲಿ ವಿಠಲನ ಪಾದಗಳಲ್ಲಿ ವಿರಮಿಸಿದ್ದರು. "ತುಕಾ ಆಕಾಶದಂತೆ..." ಈ ಅನುಭವದ ಆಸ್ವಾದವನ್ನು ಪಡೆಯುತ್ತಿದ್ದರು. ಶಿವಾಜಿ ಮಹಾರಾಜರು ಭೇಟಿಯಾಗುವ ಇಚ್ಛೆಯನ್ನು ವ್ಯಕ್ತಪಡಿಸಿದ ಬಳಿಕ ಅವರು ಕಳುಹಿಸಿದ ಉತ್ತರದಲ್ಲಿ ಸಮರ್ಥರಂತೆಯೇ ಅವರ ಸ್ಪಷ್ಟವಾದ ನಿಸ್ಪೃಹ ವೃತ್ತಿ ಪ್ರಕಟವಾಗಿರುತ್ತದೆ. "ಏನು ಬೇಡುವುದು ನಿನ್ನ ಭೇಟಿಯಾಗಿ ! ಆಶೆಗಳೇ ಹೋಗಿವೆ ಶೂನ್ಯವಾಗಿ !" ಇಂಥ ಪ್ರಶ್ನೆಯನ್ನು ಅವರು ಮಾಡಿದ್ದಾರೆ. ಸ್ವಂತ ಜೀರ್ಣಶೀರ್ಣ ಶರೀರದ ಉಲ್ಲೇಖ ಮಾಡಿ "ತಪಸ್ಸಿನಿಂದ ಜೀರ್ಣ, ಅನಾಕರ್ಷಕ ನಾನು ! ಇಂಥ ದರ್ಶನದಲಿ ಭಾಗ್ಯವೇನು !!" ಎಂಬ ಉದ್ಗಾರವನ್ನು ಅವರು ತೆಗೆದಿದ್ದಾರೆ. ರಾಜರ ದೊಡ್ಡಸ್ತಿಕೆಯನ್ನು ಹೆಚ್ಚಿಸಲು ಐಹಿಕದ ಪರಿವೆಯಿರುವ ಸಮರ್ಥರೇ ಅಧಿಕಾರಿಪುರುಷರೆಂಬುದನ್ನು ತುಕಾರಾಮ ತಿಳಿದಿದ್ದರು. ನಮ್ಮ ಭೇಟಿಯ ಇಚ್ಛೆಯನ್ನು ಮಾಡಬೇಡಿರಿ. "ರಾಮದಾಸರತ್ತ ಬೇಗ ಗಮನ ಹರಿಯಲಿ !" ಎಂದವರು ಸಲಹೆಯನ್ನು ರಾಜರಿಗೆ ಕೊಟ್ಟರು. ಸಮರ್ಥರ ಅನುಗ್ರಹವು ರಾಜರಿಗಾದ ಬಳಿಕ ಒಂದು ವರ್ಷದೊಳಗೆ ತುಕಾರಾಮ ಅವರು ವೈಕುಂಠವಾಸಿಗಳಾದರು. ಅವರು ಅರಸರ ಸನ್ನಿಧಿಯಲ್ಲಿರುವ ಭಾರವನ್ನು ತಮ್ಮ ಮೇಲೆ ಹಾಕಿಕೊಳ್ಳಲಿಲ್ಲ. ಇದು ಅವರ ದೇವರ ಮೇಲಿನ ಶರಣವೃತ್ತಿಗೆ ಹೋಲುವಂತಿದೆ.

ಈ ಅಭಂಗದ ಸರಣಿಯು ತುಕಾರಾಮ ಅವರ ವಾಣಿಗೆ ಸರಿಹೊಂದುವಂತಿದೆ ಎಂಬ ಅಭಿಪ್ರಾಯವನ್ನು ಕೆಲವು ಅಭ್ಯಾಸಿಗಳು ವ್ಯಕ್ತಮಾಡಿದ್ದಾರೆ. ಆದರೂ ಅದರಲ್ಲಿ ಬಂದ ಛತ್ರ ಪತಿ ಹಾಗೂ ಅಷ್ಟಪ್ರಧಾನ ಇಂಥ ಶಬ್ದಗಳ ಆಧಾರ ಪಡೆದು ಈ ಅಭಂಗವು ತುಕಾರಾಮರದೊ ಅಲ್ಲವೋ ಎಂಬ ಸಂದೇಹವನ್ನು ವ್ಯಕ್ತಮಾಡಲಾಗಿವೆ. ಹಾಗೆ ಸಂಶಯಪಡಲು ಅವಕಾಶವಿದೆ. "ನಾಲ್ಕೂ ದಿಕ್ಕು ನಮಗೆ ಭಿಕ್ಷೆಗೆ ಅಧಿಕಾರ!" ಇಲ್ಲವೆ "ಕರದಲಿ ಭಿಕ್ಷಾಪಾತ್ರ ಕೊಟ್ಟಿರುವ ದೇವ!" ಇದರಲ್ಲಿಯ ಉದ್ಗಾರ "ಭಿಕ್ಷಾ ಪಾತ್ರ ಅವಲಂಬನ! ಸುಡಲಿ ನಮ್ಮ ಲಜ್ಜಾಮಯ ಜೀವನ!" ಇವು ತುಕಾರಾಮರ ಪ್ರಸಿದ್ಧ ವಚನಗಳಿಗೆ ವಿರೋಧವಾಗಿವೆ, ಅರ್ಥಾತ್ ಇವೇ ನಿಜ. ವಿಶೇಷ ಸಂದರ್ಭ ಗಳಲ್ಲಿ ತುಕಾರಾಮ ಅವರು ಸ್ವಂತದ ಭಿಕ್ಷೆಯ ಅಧಿಕಾರವನ್ನು ವ್ಯಕ್ತಪಡಿಸುವುದು ಸಾಧ್ಯವಿದೆ. ಎರಡೂ ಬದಿಗಳಿಂದ ತಿಳಿವಳಿಕೆಯಾಗುವುದು ಈ ಅಭಂಗವು ತುಕಾ ರಾಮರದ್ದಾಗಿರಲಿಕ್ಕಿಲ್ಲ.ಯಾವನೋ ಒಬ್ಬ ಕವಿಯು ಈ ಒಂದು ಕಲ್ಪಿತ ಕಥೆಯನ್ನು ವರ್ಣಿಸಿರಬೇಕೆಂದು ಕೆಲವರು ಹೇಳುತ್ತಾರೆ. ಆದರೆ ಹಾಗೆ ತಿಳಿದರೆ ಇಂಥ ಸ್ವರೂಪದ ಆಖ್ಯಾಯಿಕೆಯು ಪ್ರಸಾರವಾಗುವಂಥ ಒಂದಿಷ್ಟು ಘಟನೆ ಜರುಗಿರಬೇಕು. ಸಮರ್ಥರು, ತುಕಾರಾಮ ಮತ್ತು ಶಿವಾಜಿ ಮಹಾರಾಜರು ಇವರ ಪ್ರಕೃತಿಗತ ವಿಶೇಷತೆಗಳಿಂದಲೇ ಇಡೀ ಕಥೆಯು ಹೋಲುವಂತಿದೆ. ಇದು ಆ ದೃಷ್ಟಿಯಿಂದ ಗಮನಿಸಿಯುವಂತಿದೆ.

ಸಮರ್ಥ ಮತ್ತು ಶಿವಾಜಿಮಹಾರಾಜರ ಭೇಟಿ ಬಹಳ ತಡವೆಂದರೆ ಸನ್ 1672 ರಲ್ಲಿ ಆಯಿತೆಂದು ಈ ಅಭಿಪ್ರಾಯವನ್ನು ಆಗ್ರಹಪೂರ್ವಕವಾಗಿ ಮಂಡಿಸುವ ಒಂದು ಪಕ್ಷವಿದೆ. ವಾಕನೀಸರ ಟಿಪ್ಪಣಿಯಲ್ಲಿಯ ಉಲ್ಲೇಖವು ಈ ಸಾಂಪ್ರದಾಯಿಕ ಸ್ವರೂಪ ದ್ದಾಗಿದೆ. ಆದ್ದರಿಂದ ಅದರ ಆಧಾರವು ಉಪಯುಕ್ತವಾಗಿಲ್ಲವೆಂದು ಅವರ ಆಕ್ಷೇಪ ವಾಗಿದೆ. ಭೇಟಿಯು ಬಹಳ ತಡವಾಯಿತೆಂದು ಹೇಳುವುದರಲ್ಲಿ ಎರಡು ಪತ್ರಗಳ ವಿಶೇಷ ಉಪಯೋಗವನ್ನು ಮಾಡುತ್ತಾರೆ. ಭಾಸ್ಕರ ಗೋಸಾವಿ ಶಿವರಾಯರ ಭೇಟಿ ಪಡೆದರು. ಅನಂತರ ದಿವಾಕರ ಗೋಸಾವಿಯವರಿಗೆ ಒಂದು ಪತ್ರ ಬರೆದರು. ಈ ಪತ್ರವು ಸನ್ 1658ರಲ್ಲಿಯದು. ತಾವು ಮಹಾರಾಜರನ್ನು ಭೇಟಿಯಾಗಲು ಹೋದಾಗ "ಸಮರ್ಥರು ಎಲ್ಲಿ ಇರುವರು, ಅವರ ಮೂಲ ಗ್ರಾಮವು ಯಾವುದು?" ಹೀಗೆ ಪ್ರಶ್ನೆಯನ್ನು ಕೇಳಿ ಅವರು ತಮ್ಮನ್ನು ವಿಚಾರಿಸಿದರೆಂದು ಅವರು ಅದರಲ್ಲಿ ಹೇಳಿದ್ದಾರೆ. ಇಂಥ ಪ್ರಶ್ನೆಯನ್ನು ಅವರು ವಿಚಾರಿಸಿದ್ದರೆ ಆ ಅರ್ಥದಲ್ಲಿ ಅಲ್ಲಿಯವರೆಗೆ ರಾಜರಿಗೆ ಸಮರ್ಥರ ಬಗೆಗೆ ಯಾವ ಮಾಹಿತಿ ಗೊತ್ತಿರಲಿಲ್ಲ ಎಂಬ ತಿಳಿವಳಿಕೆಯನ್ನು ಮಾಡಲಾಗುತ್ತದೆ. ಆದರೆ ಭಾಸ್ಕರ ಗೋಸಾವಿಯವರಿಗೆ ಶಿವರಾಯರು ಯಾವ ಪ್ರಶ್ನೆ ಕೇಳಿದರು ಅದರ ಹಿಂದೆ ಯಾವುದೋ ವಿಶೇಷ ಕಾರಣವಿರಬೇಕು. ಬೇರೆ ಅಂಥ ಯಾವುದೋ ಸಂದರ್ಭವು ಇರುವುದು ಸಾಧ್ಯವಿದೆ. ಸಮರ್ಥರ ಮೂಲಗ್ರಾಮದ ವಿಚಾರವನ್ನು ಕುತೂಹಲಕ್ಕಾಗಿ ಮಾಡಿರಬೇಕು. ಅವರು ಎಲ್ಲಿ ಇರುತ್ತಾರೆ, ಇದರ ಅರ್ಥ ಅವರು ಯಾವಾಗಲೂ ಸಂಚರಿಸುತ್ತಿರುತ್ತಾರೆ, ಈಗ ಸಧ್ಯ ಎಲ್ಲಿದ್ದಾರೆ ಎಂಬ

ಅರ್ಥದಲ್ಲಿ ಕೇಳಿರುವುದು ಸಂಭವನೀಯವಾಗಿದೆ. ರಾಜಕೀಯ ದೃಷ್ಟಿಯಲ್ಲಿ ಆ ಸಮಯವು ಅತೀವ ಗೊಂದಲಮಯವಾಗಿತ್ತು. ತಮ್ಮನ್ನು ಭೇಟಿ ಮಾಡಲು ಬಂದ ಮನುಷ್ಯನು ಅಪರಿಚಿತನಾಗಿದ್ದರೆ ಅವನ ವಿಚಾರಣೆಯನ್ನು ಪೂರ್ಣವಾಗಿ ರಾಜನು ಮಾಡಬೇಕೆಂಬ ದೃಷ್ಟಿಯಿಂದ ಇಂಥ ಕೆಲವು ಪ್ರಶ್ನೆಗಳನ್ನು ಅವರು ವಿಚಾರಿಸುತ್ತಿರುವುದು ಸಹಜ ಸಾಧ್ಯವಿದೆ. ಇಂಥ ಒಂದು ಸ್ಪಷ್ಟೀಕರಣವನ್ನು ಈ ಪ್ರಶ್ನೆಯ ಬಗೆಗೆ ಮಾಡುತ್ತಾರೆ. ಅದು ಕೂಡ ವಿಚಾರಿಸುವಂತಿದೆ.

ದಿನಕರ ಗೋಸಾವಿಯವರಿಗೆ ಕೇಶವಗೋಸಾವಿಯವರು ಸನ್ 1672ರಲ್ಲಿ ಬರೆದ ಪತ್ರದ ಒಂದು ನಕಲು ಪ್ರತಿ ದೊರೆತಿದೆ. "ರಾಜೇಶ್ರೀ ಶಿವಾಜಿರಾಜೆ ಭೋಸಲೆ ಇವರು ಸಮರ್ಥರ ಭೇಟಿಗೆ ಬರುವರು ಎಂದು ಬರೆದಿರುವದು ತಿಳಿಯಿತು....ರಾಜರ ಇದು ಮೊದಲನೇ ಭೇಟಿ ಇರುತ್ತದೆ. ಗ್ರಾಮದ ಜನರನ್ನು ಪ್ರಯತ್ನ ಮಾಡಿ ಕರೆತರಬೇಕು. ಉಪಯೋಗವಾಗುವದು. ಗಿಡಗಳು ಬಹಳ ಇವೆ" ಹೀಗೆ ಉಲ್ಲೇಖವು ಆ ಪತ್ರದಲ್ಲಿದೆ. "ಮೊದಲನೇ ಭೇಟಿ" ಈ ಶಬ್ದಗಳ ಮುಖ್ಯ ಆಧಾರವನ್ನು ಆಕ್ಷೇಪಿಸುವವರು ತೆಗೆದುಕೊಂಡಿದ್ದಾರೆ. ಸಮರ್ಥರ ಹಾಗೂ ಶಿವಾಜಿ ಮಹಾರಾಜರ ಮೊದಲ ಭೇಟಿ ಈ ಅರ್ಥದಲ್ಲಿ ಆ ಶಬ್ದಗಳು ಬಂದಿವೆಯೆಂದು ಅವರ ಹೇಳಿಕೆಯಿದೆ. ಆದರೆ ಹಾಗೆ ಅರ್ಥವಿದ್ದರೆ ಸಮರ್ಥ ಹಾಗೂ ಶಿವಾಜಿಯವರ ಪೂರ್ವ ಪರಿಚಯವಿಲ್ಲದೆ ಆ ವಿಷಯದಲ್ಲಿ ಏನು ಮಾಡಬೇಕು, ಈ ವಿಷಯವಾಗಿಯೂ ಮುಂದಿನ ವಾಕ್ಯಗಳಲ್ಲಿ ಏನಾದರೂ ಸೂಚನೆ ಬಂದಿರುತ್ತಿದ್ದವು. ಅಂಥ ಯಾವ ಉಲ್ಲೇಖಗಳೂ ಬಂದಿಲ್ಲ. ಆ ಭಾಗದಲ್ಲಿ ಗಿಡಗಳ ಗುಂಪು ಬಹಳ ಇರುತ್ತವೆ. ಗ್ರಾಮದ ಜನರನ್ನು ಸಹಾಯಕ್ಕಾಗಿ ಕರೆತಂದರೆ ಉಪಯೋಗವಾಗುವುದೆಂದು ಹೇಳಿದ್ದಾರೆ. ಗಿಡಗಂಟೆಗಳನ್ನು ಕಡಿದು ಸ್ಥಳವನ್ನು ಹಸನುಮಾಡಬೇಕೆಂಬ ಆಶಯವು ಅದರಲ್ಲಿ ಸ್ಪಷ್ಟವಾಗಿದೆ.

ಆಗ 'ಮೊದಲನೇ ಭೇಟಿಯಿದೆ' ಈ ಅರ್ಥವು ಆ ಭಾಗದಲ್ಲಿ ಶಿವಾಜಿಮಹಾರಾಜರ ಮೊದಲ ಭೇಟಿ ಇರಬಹುದಾದ ಸಾಧ್ಯತೆಯಿದೆ. ಇತರ ಕೆಲವು ಪ್ರಮಾಣಗಳಿಂದ ಅದು ಅವರಿಬ್ಬರ ಮೊದಲ ಭೇಟಿಯಾಗಿತ್ತೆಂದು ಖಚಿತವಾಗುತ್ತಿದ್ದರೆ ಹಾಗೆ ಅರ್ಥ ಮಾಡುವುದು ಯೋಗ್ಯವಾಗುತ್ತದೆ. ಸನ್ 1648ರ ವರ್ಷದಲ್ಲಿ ಚಾಫಳದ ರಾಮಮಂದಿರ ನಿರ್ಮಾಣದ ವೇಳೆಯಲ್ಲಿ ರಾಜನಿಂದ ಮುನ್ನೂರು ಹೊನ್ನುಗಳು ಸಹಾಯಧನವೆಂದು ಬಂದಿದ್ದವು. ಸನ್ 1658ರಿಂದ ಪ್ರತಿವರ್ಷದ ರಾಮನವಮಿಯ ಉತ್ಸವಕ್ಕೆ ಇನ್ನೂರು ಹೊನ್ನುಗಳನ್ನು ಕಳಿಸಲಾಗುತ್ತಿತ್ತು. ಅದೇ ರೀತಿ ಶಿವಾಜಿ ಮಹಾರಾಜರಿಗೆ ಸಾಧು ಸಂತರ ಭೇಟಿ ಮಾಡುವ ಹಾಗೂ ಅವರನ್ನು ಆದರಿಸುವ ಹವ್ಯಾಸವು ಪ್ರಾರಂಭದಿಂದಲೂ ಇತ್ತೆಂಬ ಸಂಗತಿಯನ್ನು ಗಮನಕ್ಕೆ ತಂದುಕೊಂಡರೆ ಸಾತಾರಾ ರಾಯಗಡ ಸಮೀಪದ ಇಷ್ಟು ಹತ್ತಿರದ ಭಾಗದಲ್ಲಿ ಒಂದು ಸ್ವತಂತ್ರ ಸಂಪ್ರದಾಯವನ್ನು ನಿರ್ಮಿಸುವ, ಬೇರೆ ಬೇರೆ ಗ್ರಾಮಗಳಲ್ಲಿ ಮಠ ಸ್ಥಾಪಿಸುವ ಮತ್ತು ಶಿಷ್ಯ ಸಮುದಾಯವನ್ನು ಕಲೆಹಾಕುವ ಸಮರ್ಥರಂಥ ಕರ್ತವ್ಯಶೀಲ ಸತ್ಪುರುಷರ ಭೇಟಿಯನ್ನು ಅವರು ಇಪ್ಪತ್ಮೂರು, ಇಪ್ಪತ್ನಾಲ್ಕು ವರ್ಷಗಳ ಕಾಲ

ದಲ್ಲಿ ಪಡೆದಿಲ್ಲ ಎಂಬುದು ಕೇವಲ ಅಸಾಧ್ಯವೆಂದು ಸ್ಪಷ್ಟವಾಗಿ ತೋರುತ್ತದೆ.

ಸಮರ್ಥರ ಶಿವರಾಯರ ಮೊದಲ ಭೇಟಿ ಸನ್ 1649ರಲ್ಲಿ ಆಗಿರಲಿ ಇಲ್ಲವೆ ಅದು 1672ರಲ್ಲಿ ಆಗಿರಲಿ, ಈ ಎರಡೂ ಅಭಿಪ್ರಾಯಗಳಲ್ಲಿ ಯಾವುದೋ ಒಂದರ ಪರವಾಗಿ ನಿರ್ವಿವಾದದಿಂದ ಆಯ್ದು ತೆಗೆಯುವ ಕಾಗದಪತ್ರಗಳ ಆಧಾರ ದೊರೆತಿಲ್ಲ. ಇದನ್ನು ಮುಖ್ಯವಾಗಿ ಒಪ್ಪುವಂತಿದೆ. ಆದರೆ ಈ ಇಬ್ಬರ ಮೊದಲ ಭೇಟಿಯ ಬಗೆಗೆ ಯಾವುದಾದರೂ ಲೇಖಿ ಆಧಾರ ಇರಲೇಬೇಕು ಎಂದೂ ಹೇಳಲು ಬರುವುದೇ ಮತ್ತು ಒಂದು ವೇಳೆ ಹಾಗೆ ಪುರಾವೆ ದೊರೆಯದಿದ್ದರೆ ಆ ಭೇಟಿ ಆಗಿಯೇ ಇಲ್ಲವೆಂದು ನಿಷ್ಕರ್ಷೆಯನ್ನು ಮಾಡಬಹುದು? ಈ ಪ್ರಶ್ನೆಗಳನ್ನೇ ವಿಚಾರಣೆಗಾಗಿ ತೆಗೆದುಕೊಳ್ಳುವುದು ಆವಶ್ಯಕವಾಗಿದೆ. ಸಮರ್ಥ ಹಾಗೂ ಶಿವಾಜಿ ಮಹಾರಾಜರ ಭೇಟಿ ಆಗಿದ್ದರೂ ಕೂಡ ಅದರ ಬಗೆಗೆ ಕಾಗದ ಪತ್ರಗಳಲ್ಲಿ ಉಲ್ಲೇಖವಾಗುವ ಯಾವ ಕಾರಣವೂ ಇಲ್ಲ. ಹಾಗೆ ಉಲ್ಲೇಖವಾಗಿದ್ದರೂ ಅದು ಕೇವಲ ಆನುಷಂಗಿಕ ಕಾರಣಗಳಿಂದಲೇ ಸಾಧ್ಯ ಎಂಬುದನ್ನು ಗಮನಿಸಬೇಕು. ಯಾವನೊಬ್ಬ ರಾಜನು ಯಾವನೋ ಸತ್ಪುರುಷನ ಭೇಟಿಯನ್ನು ಪಡೆಯುತ್ತಾನೆ. ಮುಂದೆ ಅವನಿಂದ ಅನುಗ್ರಹವನ್ನು ಪಡೆಯುತ್ತಾನೆ. ಅನೇಕ ಸಲ ಅವನತ್ತ ಹೋಗುತ್ತಾನೆ. ಇಂಥ ಪ್ರಸಂಗಗಳು ಐತಿಹಾಸಿಕ ಕಾಗದಪತ್ರಗಳಲ್ಲಿ ಉಲ್ಲೇಖವಾಗಬೇಕೆಂದು ಯಾರೂ ಹೇಳಲು ಸಾಧ್ಯವಿಲ್ಲ. ಉಲ್ಲೇಖಗಳಾದರೆ ಸರಿ. ಉಲ್ಲೇಖವಾಗದಿದ್ದರೆ ಆ ಇಬ್ಬರ ಸಂಬಂಧದ ವಿಷಯವಾಗಿರುವ ಅನುಮಾನವನ್ನು ಬೇರೆ ಮಾರ್ಗಗಳಿಂದ ಬಗೆಹರಿಸಬೇಕಾಗುತ್ತದೆ.

ಮೊದಲ ಭೇಟಿ ಯಾವಾಗ ಜರುಗಿತು ಇದಕ್ಕೆ ಅಂಥ ಮಹತ್ವವಿಲ್ಲ. ಅದು ಕೆಲ ವರ್ಷಗಳ ಹಿಂದೆ ಮುಂದೆ ಆಗುವ ಪರಿಣಾಮದಿಂದ ಸಮರ್ಥರು ಹಾಗೂ ಶಿವರಾಯ ಇವರ ಪರಸ್ಪರ ಆತ್ಮೀಯತೆಯಲ್ಲಿ ಏನೂ ಹೆಚ್ಚುಕಡಿಮೆಯಾಗುವುದಿಲ್ಲ. ಈ ವಾದದಲ್ಲಿ ಎರಡೂ ಪಕ್ಷಗಳು ಎರಡೂ ಕಡೆಯಿಂದ ಅತಿರೇಕವಾದ ಪಾತ್ರ ವಹಿಸಿದಂತೆ ಕಾಣುತ್ತದೆ. ಅದಕ್ಕೆ ಕಾರಣ ಒಂದೇ ಇದೆ. ಸಮರ್ಥರು ಶಿವರಾಯರ ರಾಜಕೀಯ ಗುರುಗಳಾಗಿದ್ದರು. ಅವರ ಪ್ರೇರಣೆಯಿಂದ ಮತ್ತು ಅವರ ಸತತ ಮಾರ್ಗದರ್ಶನದಿಂದ ಶಿವರಾಯರು ತಮ್ಮ ಸ್ವರಾಜ್ಯ ಸ್ಥಾಪನೆಯ ಮಹಾನ್ ಕಾರ್ಯಕ್ಕೈಗೊಂಡರೆಂದು ಒಂದು ಪಕ್ಷವು ಮಂಡಿಸಿದೆ. ಈ ಅಭಿಪ್ರಾಯವು ಅರ್ಥಾತ್ ಅತಿರೇಕವುಳ್ಳದ್ದಾಗಿದೆ. ಆದರೆ ಅದರ ಪ್ರತಿವಾದವೆಂದು ಶಿವರಾಯರ ಸಮರ್ಥರ ಜತೆಗಾದ ಮೊದಲ ಭೇಟಿಯೇ ಸನ್ 1672ರಲ್ಲಿ ಅಂದರೆ ಅವರ ಸ್ವರಾಜ್ಯ ಸ್ಥಾಪನೆಯ ಕಾರ್ಯವು ಹೆಚ್ಚು ಕಡಿಮೆ ಪೂರ್ಣವಾಗುತ್ತ ಬಂದ ಮೇಲೆ ಆಯಿತೆಂಬ ಅಭಿಪ್ರಾಯವನ್ನು ಅತ್ಯುತ್ಸಾಹದಿಂದ ಮಂಡಿಸಿದ್ದಾರೆ. ಈ ಎರಡೂ ಏಕಾಂಗಿ ಅಭಿಪ್ರಾಯಗಳನ್ನು ಬದಿಗಿಟ್ಟರೆ ಈ ವಾದದಲ್ಲಿಯ ಹಟವನ್ನು ತೆಗೆದು ಹಾಕಲು ಬರುತ್ತದೆ.

ಸಮರ್ಥರು ಹಾಗೂ ಶಿವಛತ್ರಪತಿ ಇವರಿಬ್ಬರೂ ಸ್ವತಂತ್ರ ಕರ್ತೃತ್ವದ, ಸ್ವತಂತ್ರ ವ್ಯಕ್ತಿತ್ವದ, ಸ್ವತಂತ್ರ ದೃಷ್ಟಿಕೋನವಿದ್ದ ಮಹಾಪುರುಷರಾಗಿ ಹೋಗಿದ್ದಾರೆ. ಇಂಥ

ಅಸಾಧಾರಣ ತರಗತಿಯ ಪುರುಷರಿಗೆ ಬೇರೆಯಾದ ಮಾರ್ಗದರ್ಶನದ ಆವಶ್ಯಕತೆ ಇರುವುದಿಲ್ಲ. ಅಪೇಕ್ಷೆಯೂ ಇರುವುದಿಲ್ಲ. ಸಮರ್ಥರು ಹಾಗೂ ಶಿವರಾಯ ಇವರ ಯಾವ ಬಗೆಯ ಸಂಬಂಧ ಇಂದಿದ್ದರೂ ಅದು ಪರಸ್ಪರರಿಗೆ ಪೂರಕ, ಆಶ್ವಾಸಕ ಮತ್ತು ಆನಂದದಾಯಕವಾಗಿದ್ದಿರಬೇಕು. ಈ ಇಬ್ಬರೂ ಪರಸ್ಪರರ ಕರ್ತೃತ್ವಶಕ್ತಿ ಎಷ್ಟು ದೊಡ್ಡದಿದೆ ಎಂಬುದನ್ನು ಅರಿತಿದ್ದರು. ಶಿವರಾಯರು ಸಮರ್ಥರ ಅಸಾಮಾನ್ಯ ಗುಣವನ್ನು ಅರಿತಿದ್ದರು. ಅವರಿಗೆ ಸಮರ್ಥರ ವಿಷಯದಲ್ಲಿ ಎಂಥ ವಿಶೇಷ ಆದರಭಾವ ವಿತ್ತು ಎಂಬುದರ ಆಧಾರವು ಸಮರ್ಥರಿಗಾಗಿ ಅವರು ಮಾಡಿದ ಕಾರ್ಯಗಳಲ್ಲಿ ದೊರೆಯುತ್ತದೆ. ವ್ಯಕ್ತಿಶಃ ಸಮರ್ಥರಿಗಾಗಿ ಮತ್ತು ಅವರ ಚಾಫಳ ಮಠಕ್ಕಾಗಿ ಶಿವರಾಯರು ಎಷ್ಟು ಮಾಡಿದ್ದಾರೋ ಅಷ್ಟನ್ನು ಬೇರೆ ಯಾವ ಸತ್ಪುರುಷನಿಗಾಗಿ ಇಲ್ಲವೆ ಧರ್ಮಕಾರ್ಯಕ್ಕಾಗಿ ಮಾಡಿಲ್ಲವೆಂಬ ಸಂಗತಿ ಪೂರ್ಣವಾಗಿ ಹೇಳುವಂತಿದೆ. ಅವರಿಬ್ಬರ ಪರಸ್ಪರ ಸಂಬಂಧದ ವಿಷಯದಲ್ಲಿ ಎಷ್ಟು ಆಖ್ಯಾಯಿಕೆಗಳು ಹೇಳಲ್ಪಟ್ಟಿ ವೆಯೊ, ಅಷ್ಟು ಬೇರೆ ಯಾವ ಸತ್ಪುರುಷನ ಸಂದರ್ಭದಲ್ಲಿ ಶಿವರಾಯರ ಸಂದರ್ಭದಲ್ಲಿ ಹೇಳಲ್ಪಟ್ಟಿಲ್ಲ. ಸಮರ್ಥರ ಲೇಖನಗಳೇ ಅಕ್ಷರಬದ್ಧವಾದ ಪುರಾವೆ ಗಳೆಂದು ಹೇಳಬೇಕು. ಆ ಲೇಖನಗಳಿಂದ ಅವರ, ಶಿವರಾಯರ ವಿಷಯದಲ್ಲಿದ್ದ ಭಾವ ವನ್ನು ನಾವು ತಿಳಿದುಕೊಳ್ಳಬೇಕಾಗುತ್ತದೆ. ಶಿವರಾಯರು ಹಾಗೆ ಏನನ್ನಾದರೂ ಬರೆದಿರಬೇಕೆಂಬ ಅಪೇಕ್ಷೆಯನ್ನು ಮಾಡಲಾಗುವುದಿಲ್ಲ. ಆದರೆ ಸುದೈವದಿಂದ ಅವರ ಪರವಾಗಿಯೇ ಒಂದು ಪತ್ರ ದೊರೆತಿದೆ.

"ಭಾದ್ರಪದ ತಿಂಗಳು ಪನ್ಹಾಳಕ್ಕೆ ಹೋಗುವಾಗ ಛತ್ರಪತಿ ಸಜ್ಜನಗಡಕ್ಕೆ ಬಂದರು. ಆಶ್ವಿನ ಶುದ್ಧ ದಶಮಿಯ ದಿನ ಪತ್ರ ಬರೆದು ಸ್ವಾಮಿಯವರ ಹತ್ತಿರ ಇಟ್ಟರು." ಹೀಗೆ ಒಂದು ಉಲ್ಲೇಖವು ವಾಕನೀಸರ ಟಿಪ್ಪಣಿಯಲ್ಲಿದೆ. ಸನ್ 1678 ರಲ್ಲಿ ಈ ಪತ್ರವು ಅಂದರೆ ಚಾಫಳ ಮಠಕ್ಕೆ ಖಾಯಂ ಉತ್ಪನ್ನ ಮಾಡಿಕೊಡುವ ಸನದು ಇದೇ ಆಗಿದೆ. "ಶ್ರೀ ಸದ್ಗುರುವರ್ಯ ಶ್ರೀ ಸಕಲತೀರ್ಥರೂಪ ಶ್ರೀ ಕೈವಲ್ಯ ಧಾಮ ಶ್ರೀ ಮಹಾರಾಜ ಶ್ರೀ ಸ್ವಾಮಿಯವರ ಸೇವೆಯಲ್ಲಿ ." ಹೀಗೆ ಈ ಪತ್ರದ ತಲೆಬರಹ ಇರುತ್ತದೆ. ಚಾಫಳ ಮಠದ ನಿತ್ಯ ವೆಚ್ಚಕ್ಕಾಗಿ ನಾವು ಈ ವ್ಯವಸ್ಥೆಯನ್ನು ಏಕೆ ಮಾಡುತ್ತಿದ್ದೇವೆ ಈ ನಮೂದವನ್ನು ಮಾಡುತ್ತಿರುವಾಗ ಆ ಪತ್ರದಲ್ಲಿ ಹಿಂದಿನ ಕೆಲ ಸಂಗತಿಗಳ ನಿರ್ದೇಶಗಳು ಬಂದಿವೆ. "ನಿಮ್ಮ ಮುಖ್ಯ ಧರ್ಮವು ರಾಜ್ಯ ಸ್ಥಾಪನೆ ಮಾಡಿ ಧರ್ಮಸ್ಥಾಪನೆ, ದೇವ ಬ್ರಾಹ್ಮಣರ ಸೇವೆ, ಪ್ರಜೆಗಳ ಪೀಡೆ ದೂರಮಾಡಿ ಪಾಲನೆ ರಕ್ಷಣೆ ಮಾಡಬೇಕು. ಈ ವ್ರತವನ್ನು ಸಂಪಾದಿಸಿ ಆ ಮೂಲಕ ಪರಮಾರ್ಥ ಮಾಡಬೇಕು" ಎಂದು ಈ ಆಜ್ಞೆಯನ್ನು ಮಾಡಿ ಅದರಲ್ಲಿ ಸಮರ್ಥರು ಹೇಳಿದ್ದಾರೆ. ಪರಮಾರ್ಥದ ಬಗೆಗೆ ಆಕರ್ಷಣೆ ಶಿವಾಜಿ ಮಹಾರಾಜರಲ್ಲಿ ಮೊದಲಿನಿಂದಲೂ ಇತ್ತು. ಇಪ್ಪತ್ತನೆಯ ವಯಸ್ಸಿನ ಸುಮಾರಿಗೆ ಅವರು ಸಮರ್ಥರ ಕಡೆಗೆ ಮೊದಲು ಹೋದುದು ಒಬ್ಬ ಸಾಧುಪುರುಷರಿಗೆ ಭೇಟಿಯಾಗಲು ಹಾಗೂ ಅವರ ಉಪದೇಶ ಪಡೆಯಲು ಈ ಉದ್ದೇಶದಿಂದ. ಆದರೆ ಅಲ್ಲಿಯವರೆಗೆ ಸಮರ್ಥರ ಜೀವನ ದೃಷ್ಟಿಯಲ್ಲಿ

ಬದಲಾವಣೆಯಾಗಿತ್ತು. ಅವರು ಕೇವಲ ಪರಮಾರ್ಥಿಯಾಗಿ ಉಳಿದಿರಲಿಲ್ಲ. ಪ್ರಪಂಚ ಪರಮಾರ್ಥದ ಸಮನ್ವಯ ಮಾಡುವ ವಿಚಾರಕ್ಕೆ ಅವರು ಬಂದು ಮುಟ್ಟಿದ್ದರು. ಸ್ವಧರ್ಮ ರಕ್ಷಣೆಗಾಗಿ ಸ್ವಧರ್ಮ ರಾಜನಿರುವುದು ಅವಶ್ಯವೆಂಬುದನ್ನು ಅವರು ಕಂಡುಕೊಂಡಿದ್ದರು. ಶಿವಾಜಿ ಮಹಾರಾಜರು ಭವಿಷ್ಯ ಕಾಲದಲ್ಲಿ ಸ್ವರಾಜ್ಯ ಸಂಸ್ಥಾಪಕರಾಗಿದ್ದಾರೆ, ಅವರ ಹೆಜ್ಜೆ ಆ ದಿಸೆಯಲ್ಲಿ ಬೀಳುತ್ತಲಿವೆ. ಆ ಮಹತ್ಕಾರ್ಯ ವನ್ನು ಸಾಧಿಸುವ ಕ್ಷಮತೆ ಅವರಲ್ಲಿದೆ, ಇವುಗಳನ್ನು ಸಮರ್ಥರು ತಮ್ಮ ಸೂಕ್ಷ್ಮ ದೃಷ್ಟಿಯಿಂದ ಅರಿತರು.

ಈ ಭೇಟಿಯಾಗುವ ಮೊದಲು ಮೂರು ನಾಲ್ಕು ವರ್ಷಗಳಲ್ಲಿ ಶಿವರಾಯ ತೋರಣ, ಚಾಕಣ, ಪುರಂದರ, ಸಿಂಹಗಡ ಈ ಕೋಟೆಗಳನ್ನು ತಮ್ಮ ವಶಕ್ಕೆ ತೆಗೆದು ಕೊಂಡಿದ್ದರು. ರಾಜಗಡವನ್ನು ನಿರ್ಮಿಸಿದ್ದರು. ಶಿವರಾಯರ ಈ ಚಟುವಟಿಕೆಗಳು ಬಿಜಾಪುರದ ಆದಿಲ್‌ಶಾಹಿಯ ಕಣ್ಣಿಗೆ ಬಿದ್ದಿದ್ದವು. ಈ ಸಂಗತಿ ಸಮರ್ಥರ ಕಿವಿಗೆ ಬಿದ್ದಿರಬೇಕು. ಕರಾಡ, ಮಸೂರ, ಶಹಾಪುರ ಈ ಭಾಗದಲ್ಲಿ ಕೆಲ ಸರಕಾರಿ ಅಧಿಕಾರಿ ಗಳ ಜತೆ ಹೆಚ್ಚುಕಡಿಮೆ ಸಂಬಂಧವು ಈ ಮೊದಲು ಬಂದದ್ದು ಆ ದೃಷ್ಟಿಯಿಂದ ಇದು ಗಮನಾರ್ಹವಾಗಿದೆ. ಇಂಥ ಹಿನ್ನೆಲೆಯಲ್ಲಿ ರಾಜರ ಮನಸ್ಸು ಯಾವ ಮಹತ್ವಾಕಾಂಕ್ಷೆಯಿಂದ ಪ್ರೇರಿತವಾಗಿವೆಂಬುದು ಸಮರ್ಥರ ಗಮನಕ್ಕೆ ಬರುವುದು ತೀರ ಸ್ವಾಭಾವಿಕವಾಗಿದೆ. ಅಸಾಮಾನ್ಯ ಪುರುಷರಲ್ಲಿ ಜನರನ್ನು ಪರೀಕ್ಷಿಸುವ ಗುಣ, ಅವರಲ್ಲಿರುವ ಸುಪ್ತ ಶಕ್ತಿಯನ್ನು ಗುರುತಿಸುವ ಸಾಮರ್ಥ್ಯ ಇರುತ್ತದೆ. ಸಮರ್ಥರು ಶಿವಾಜಿ ಮಹಾರಾಜರ ಸಾಮರ್ಥ್ಯವನ್ನು ಗುರುತಿಸಿದರು. ಇದರಲ್ಲಿ ಅಘಟಿತ ಇಲ್ಲವೆ ಅನಪೇಕ್ಷಿತ ಎಂದು ಯಾವುದೂ ಇಲ್ಲ. ರಾಜರಿಗೆ ಪರಮಾರ್ಥದ ಉಪದೇಶ ಬೇಕಾಗಿತ್ತು. ರಾಜ್ಯಸ್ಥಾಪನೆ ಮಾಡಿ ಪ್ರಜೆಗಳ ಪಾಲನೆ ಪೋಷಣೆ ಮಾಡುವುದ ರಲ್ಲಿಯೇ ನಿಮ್ಮ ಪರಮಾರ್ಥವಿದೆ ಎಂದು ಸಮರ್ಥರು ಅವರಿಗೆ ಹೇಳಿದ್ದರು. ಈ ಸಂವಾದ ಜರುಗಿದ ಬಳಿಕ ಸುಮಾರು ಮೂವತ್ತು ವರ್ಷಗಳು ಕಳೆದವು. ಸ್ವರಾಜ್ಯ ಸ್ಥಾಪನೆ ಪ್ರತ್ಯಕ್ಷವಾಯಿತು. ಶಿವರಾಯರಿಗೆ ರಾಜ್ಯಾಭಿಷೇಕವಾಗಿ ಅವರು ಛತ್ರಪತಿ ಯಾದರು. ಇದರಲ್ಲಿಯೂ ನಾಲ್ಕು ವರ್ಷ ಕಳೆದವು. ಇಂಥ ಕೃತಾರ್ಥತೆಯ ಪದವಿಗೆ ಬಂದು ಮುಟ್ಟಿದಾಗ ಸಮರ್ಥರು ಸ್ಥಾಪಿಸಿದ ಆದ್ಯ ಮಠಗಳ ಖರ್ಚುವೆಚ್ಚದ ವ್ಯವಸ್ಥೆಯನ್ನು ಮಾಡುವ ಈ ಪತ್ರವನ್ನು ಶಿವರಾಯರು ಬರೆದರು. ಅದರಲ್ಲಿ ಈ ಮೊದಲಿನ ಕಾಲದ ಘಟನೆಗಳ ಉಲ್ಲೇಖವನ್ನು ಅವರು ಕೃತಜ್ಞಾಪೂರ್ವಕವಾಗಿ ಮಾಡಿದ್ದಾರೆ.

ರಾಜ್ಯ ಸ್ಥಾಪನೆ ಮಾಡಿ ಪ್ರಜೆಗಳ ಪಾಲನೆ,ರಕ್ಷಣೆಗಾಗಿ ಸಂಗ್ರಹಿಸಿದ ಪರಮಾರ್ಥದ ಯಾವ ದಿಸೆಯನ್ನು ಸಮರ್ಥರು ಬಹಳ ವರ್ಷಗಳ ಮೊದಲು ತೋರಿದ್ದರೊ, ಅದೇ ರೀತಿ ಅನಂತರದ ಆಯುಷ್ಯದಲ್ಲಿಯ ಮುನ್ನಡೆಗಳು ಯಶಸ್ವಿಯಾಗಿ ಜರುಗಿದ ಉಲ್ಲೇಖ ಈ ಪತ್ರದಲ್ಲಿ ಬಂದಿದೆ. "ಯಾವ ಯಾವ ಕೆಲಸ ಮಾಡಬೇಕು ಮತ್ತು ದುಷ್ಟರ ನಾಶ ಮಾಡಬೇಕು. ವಿಪುಲ ದ್ರವ್ಯ ಸಂಪಾದಿಸಿ ರಾಜ್ಯ ಪರಂಪರೆ ಅಕ್ಷಯವಾಗು

ವಂಥ ಸ್ಥಳಗಳನ್ನು ಬಲಿಷ್ಠ ಮಾಡಬೇಕು—ಹೀಗೆ ನಾನು ಏನನ್ನು ಮನಸ್ಸಿನಲ್ಲಿ ಭಾವಿಸಿದ್ದೆ, ಅದೀಗ ಸ್ವಾಮಿಗಳ ಆಶೀರ್ವಾದ ಶಕ್ತಿಯಿಂದ ನನ್ನ ಮನೋರಥ ಪೂರ್ತಿಯಾಗಿದೆ" ಎಂದು ಶಿವರಾಯರು ಮುಂದೆ ಹೇಳಿದ್ದಾರೆ. ಏನಾದರೂ ಜರುಗಿದರೆ ಅದು ಸಮರ್ಥರ ಆಶೀರ್ವಾದ ಒದಗಿದೆ ಎಂದು ಶಿವರಾಯರು ಹೇಳುತ್ತಾರೆ. ನಿಜವಾದ ಸ್ಥಿತಿಯೆಂದರೆ, ಎಲ್ಲ ಕರ್ತೃತ್ವ ಶಿವರಾಯರದು, ಎಲ್ಲ ಪರಾಕ್ರಮ ಅವರದು, ಎಲ್ಲ ಯೋಜನೆಗಳು ಅವರವು, ಇವುಗಳಲ್ಲಿ ಆಶೆ-ನಿರಾಶೆಯು ಹಾಗೂ ಸೋಲು ಗೆಲುವಿನ ಎಲ್ಲ ಭಾರವನ್ನು ಹೆಗಲ ಮೇಲೆ ಹೊತ್ತ ಛತ್ರಪತಿಗಳವರದು. ಆದರೆ ಅವರ ವಿನಮ್ರತೆ ದೊಡ್ಡದು. ಅವರು ತಮ್ಮ ಯಶಸ್ಸಿನ ಎಲ್ಲ ಶ್ರೇಯವನ್ನು ಸಮರ್ಥರ ಚರಣಗಳಿಗೆ ಅರ್ಪಿಸಿದರು. ಇದು ಶ್ರೇಷ್ಠ ಪುರುಷರ, ಅಷ್ಟೇ ಶ್ರೇಷ್ಠ ವಿನಯದ ಒಂದು ಉದಾಹರಣೆಯಾಗಿದೆ. ರಾಜ್ಯಾಭಿಷೇಕದ ಧಾರ್ಮಿಕ ವಿಧಿಗಳು ಪೂರ್ತಿಯಾದ ಬಳಿಕ ಮಾತೋಶ್ರೀ ಜೀಜಾಬಾಯಿ ಅವರ ಚರಣಗಳಲ್ಲಿ ಮಸ್ತಕವನ್ನಿಡುವಾಗ "ಮಾಸಾಹೇಬ, ತಮ್ಮ ಆಶೀರ್ವಾದದಿಂದ ಇವೆಲ್ಲವು ಜರುಗಿದವು" ಎಂಬ ಉದ್ಗಾರವನ್ನು ಛತ್ರಪತಿಯವರು ತೆಗೆದ ಬಗೆಗೆ ಹಳೆಯ ಬಖೈರುಗಳಲ್ಲಿ ವರ್ಣಿಸಲಾಗಿದೆ. ಆ ಪ್ರಸಂಗದ ಸ್ಮರಣೆ ಇಲ್ಲಿದೆ.

ಯಾವಾಗಲೋ ಒಮ್ಮೆ ಸಮರ್ಥರು ಭೇಟಿಗೆ ಬಂದಾಗ, "ಇಂದಿನವರೆಗೆ ಏನೇನು ದೊರೆತಿವೆಯೊ ಅವೆಲ್ಲ ಗುರು ಚರಣಗಳಿಗೆ ಸಮರ್ಪಿತ" ಎಂದು ಹೇಳಿ, ಹೀಗೆ ಒಂದು ಕಾಗದದಲ್ಲಿ ಬರೆದು ಆ ಚೀಟಿಯನ್ನು ಶಿವರಾಯರು ಅವರ ಜೋಳಿಗೆಯಲ್ಲಿ ಹಾಕಿದರೆಂದು ಆಖ್ಯಾಯಿಕೆಯಿದೆ. ಛತ್ರಪತಿಗಳ ಪತ್ರದಲ್ಲಿಯ ಮೇಲಿನ ಉಲ್ಲೇಖವನ್ನು ಓದಿದ ಬಳಿಕ ಆ ಕಥೆ ಅಸಂಭವವೆಂದು ತಿಳಿಯುವ ಕಾರಣವಿಲ್ಲ. ಸ್ವಾರ್ಥದಿಂದ ತುಂಬಿದ ಈ ಜಗತ್ತಿನಲ್ಲಿ ಇಂಥವೇ ಘಟನೆಗಳು ಶತ ಶತಮಾನಗಳಿಂದ ಪ್ರತಿಕ್ಷಣ ಜರುಗುತ್ತಿರುತ್ತವೆ. ಅಂಥ ಅಪವಾದಾತ್ಮಕ ಘಟನೆಗಳಿಂದಲೇ ಆ ಎಲ್ಲ ಶತಮಾನಗಳು ಉಜ್ವಲವಾಗಿ ಹೋಗುತ್ತವೆ. ಯಾರ ಜೋಳಿಗೆಯಲ್ಲಿ ಈ ರಾಜ್ಯ ದಾನದ ಭಿಕ್ಷೆಯನ್ನು ಹಾಕಿದನೊ ಆ ಪುರುಷನು ಅಷ್ಟೇ ನಿಸ್ಪೃಹನಾಗಿದ್ದಾನೆ. ಇಂಥ ಶ್ರೇಷ್ಠ ಪದವಿಯಲ್ಲಿದ್ದ ಶಿಷ್ಯನಿಗೆ ಶೋಭಿಸುವಂಥ ಸಿದ್ಧಿ ಪಡೆದ ಗುರು ಇರುತ್ತಾನೆ. ಆ ಚೀಟಿಯನ್ನು ಸಮರ್ಥರು ಶಿವರಾಯರಿಗೆ ಮರಳಿಕೊಟ್ಟರು ಮತ್ತು "ನನ್ನದೆಂದು ಈ ರಾಜ್ಯವನ್ನು ನೀವೇ ನಡೆಸಿರಿ" ಎಂದು ಹೇಳಿದರು. ಸಮರ್ಥರ ಹಾಗೂ ಶಿವರಾಯರ ಸಂಬಂಧವು ಇಷ್ಟು ಘನಿಷ್ಠವಾಗಿದ್ದರೆ, ಚಾಫಳ ಮಠಕ್ಕೆ ಇನಾಮುವನ್ನು ಹಾಕಿಕೊಡಲು ಇಷ್ಟೇಕೆ ತಡವಾಗಬೇಕು, ಯಾವ ಅರ್ಥದಲ್ಲಿ ಅಷ್ಟು ವಿಲಂಬವಾಗಿ ಆ ಉತ್ಪನ್ನವನ್ನು ಹಾಕಿಕೊಟ್ಟರೊ ಆ ಅರ್ಥದಲ್ಲಿ ಸಮರ್ಥರ ಹಾಗೂ ಶಿವರಾಯರ ಪರಸ್ಪರ ಸಂಬಂಧವು ಈ ಮೊದಲು ಬಂದಿರಲಿಕ್ಕಿಲ್ಲ ಎಂಬ ಒಂದು ತಿಳಿವಳಿಕೆಯಿದೆ. ಆದರೆ ವಿಲಂಬವಾದುದರ ಮೂಲವೇ ಸಮರ್ಥರ ನಿಸ್ಪೃಹತೆಯಲ್ಲಿದೆ.

ಉತ್ಸವಕ್ಕೆ ಏನಾದರೂ ಶಾಶ್ವತವಾದ ವ್ಯವಸ್ಥೆಯನ್ನು ಮಾಡಬೇಕೆಂಬ ವಿಚಾರವನ್ನು ಶಿವರಾಯರು ಮೊದಲೇ ಮಾತನಾಡಿ ತೋರಿಸಿದ್ದರು, ಆದರೆ ಸಮರ್ಥರು

ಅದನ್ನು ಗಟ್ಟಿಹಿಡಿದಿರಲಿಲ್ಲ. "ವಿಶೇಷ ಪ್ರಯತ್ನದ ಕಾರಣವೇನು" ಇಂಥ ಪ್ರತಿಕ್ರಿಯೆಯನ್ನು ಆಗನವರು ವ್ಯಕ್ತಪಡಿಸಿದ ಉಲ್ಲೇಖವು ಈ ಪತ್ರದಲ್ಲಿದೆ. ಭಿಕ್ಷಾವೃತ್ತಿಯಿಂದ ಶಿಷ್ಯರಿಗೆ ದೊರೆತ ವಸ್ತುಗಳಿಂದಲೇ ಮಠದ ವೆಚ್ಚಗಳು ಸಾಗಬೇಕೆಂದು ಸಮರ್ಥರ ಅಭಿಪ್ರಾಯವಾಗಿತ್ತು. ವಿರಕ್ತ ಪುರುಷರಿಗೆ ರಾಜಸತ್ತೆಯನ್ನು ಅವಲಂಬಿಸುವಂತಾಗಬಾರದು, ಇದಕ್ಕಾಗಿ ಜಾಗ್ರತರಾಗಿರಬೇಕೆಂದು ಸಮರ್ಥರು ಅರಿತಿದ್ದರು. "ಅರಸರ ಬಾಗಿಲಿಗೆ ಕಾರ್ಯಕರ್ತರು ಹೋಗಕೂಡದು" ಎಂದು ಅವರು ಒಂದು ಸ್ಥಳದಲ್ಲಿ ಹೇಳಿದ್ದಾರೆ. ಅದರಲ್ಲಿಯ ಮರ್ಮವೇ ಇದು. ಸನ್ 1675ರಲ್ಲಿಯ ಘಟನೆ. ಕಲ್ಯಾಣ ಸ್ವಾಮಿಯವರು ಯಾವುದೋ ಕಾರಣದಿಂದ ಛತ್ರಪತಿಯವರ ಕಡೆಗೆ ಹೋಗಿದ್ದರು. ಆ ಸಮಯದಲ್ಲಿ ಅವರು ಶಿವರಾಯರಿಂದ ಕರುಗಳಿದ್ದ ಹನ್ನೊಂದು ಗೋವುಗಳನ್ನು ಬೇಡಿಪಡೆದರು. ಸಮರ್ಥರಿಗೆ ಇದು ಸರಿ ಬರಲಿಲ್ಲ. "ರಾಜ ದರಬಾರದ ಎಲ್ಲ ಅಧಿಕಾರವನ್ನು ದಿವಾಕರ ಗೋಸಾಯಿಯವರಿಗೆ ಕೊಡಲಾಗಿದೆ" ಎಂದು ಅವರು ಕಲ್ಯಾಣರಿಗೆ ಹೇಳಿದರು.

ಯಾರ ಕಡೆಗೆ ಯಾವ ಕೆಲಸವನ್ನು ಒಪ್ಪಿಸಲಾಗಿದೆಯೊ, ಅದನ್ನಷ್ಟೇ ಅವರು ಮಾಡಬೇಕು, ಅದರಂತೆ ಎರಡನೆಯವರ ಕಾರ್ಯಕ್ಷೇತ್ರದಲ್ಲಿ ಯಾರು ಕೈಹಾಕಬಾರದು ಎಂದು ಇದರರ್ಥ. ಶಿವರಾಯರಿಂದ ಮಠದ ಇಲ್ಲವೆ ಇತರ ಯಾವುದೇ ಕೆಲಸವನ್ನು ಮಾಡಿಸಿಕೊಳ್ಳಬೇಕಿದ್ದರೆ, ಅದು ದಿವಾಕರ ಗೋಸಾವಿಯವರಿಂದ ಆಗಬೇಕು. ಕಲ್ಯಾಣರು ಆ ಪ್ರಯತ್ನದಲ್ಲಿ ಬೀಳುವುದು ಸರಿಯಲ್ಲ ಎಂಬುದು ಸಮರ್ಥರ ಹೇಳಿಕೆಯಲ್ಲಿದೆ. ಅದರ ಮುಂದೆ ಅವರು ಹೇಳಿದ್ದಾರೆ : "ಯಾಚಕ ವೃತ್ತಿಯಿಂದ ಏನಾದರೂ ಬೇಡುವುದು, ಅದು ನಿಮ್ಮಂಥ ನಿಸ್ಪೃಹರ ಧರ್ಮವಲ್ಲ." ಶಿವರಾಯರ ರಾಜ್ಯಾಭಿಷೇಕದ ಸಮಯದಲ್ಲಿ ಸಮರ್ಥರು ರಾಯಗಡದ ಸಮಾರಂಭದಲ್ಲಿರಲಿಲ್ಲ. ಈ ಅರ್ಥದಲ್ಲಿ ಇವರಿಬ್ಬರ ವಿಶೇಷ ನಿಕಟ ಸಂಬಂಧವು ಆ ವೇಳೆಯಲ್ಲಿ ಬಂದಿರಲಿಕ್ಕಿಲ್ಲ ಎಂಬ ತರ್ಕವನ್ನು ಮಾಡಲಾಗುತ್ತದೆ. ಹೀಗೆ ತರ್ಕಿಸುವುದು ತಪ್ಪಲ್ಲ. ಆದರೆ ಇಲ್ಲಿ ಎರಡನೆಯ ಬದಿ ಇರುವುದು ಸಾಧ್ಯವಿದೆ. ಇತರ ಕೆಲವು ಪ್ರಮಾಣಗಳಿಂದ ಅದು ಪ್ರಾಪ್ತವಾದರೆ ಅದನ್ನು ಸ್ವೀಕರಿಸುವುದೇ ತರ್ಕದ ಅನುಸರಣೆಯಾಗಿದೆ. ಸಮರ್ಥರ ಹಾಗೂ ಶಿವರಾಯರ ನಿಕಟ ಸಂಬಂಧವು ಪ್ರಸ್ಥಾಪಿತವಾಗಿದ್ದರೂ ಸಹ ಅವರು ರಾಜ್ಯಾಭಿಷೇಕದಂಥ ಉತ್ಸವ ಸಮಾರಂಭದಲ್ಲಿ ಕಾಣದಿರುವುದು ಕೂಡ ಸಾಧ್ಯವಿದೆ. ಹಾಗೆ ಜರುಗಿದ್ದರೆ ಅದರ ಕಾರಣಗಳನ್ನು ಶೋಧಿಸಲು ಬರುತ್ತದೆ. ಸಮರ್ಥರ ನಿಸ್ಪೃಹತೆಯಲ್ಲಿ ಆ ಕಾರಣಗಳು ಸಂಗ್ರಹಿತವಾಗಿವೆ.

ಸನ್ 1677ರಲ್ಲಿಯ ಇನ್ನೊಂದು ಘಟನೆಯನ್ನು ಹಳೆಯ ಗ್ರಂಥಗಳಲ್ಲಿ ಹೇಳಲಾಗಿದೆ. ಛತ್ರಪತಿಯವರು ಆವೇ ಕರ್ನಾಟಕಕ್ಕೆ ಹೋಗಿ ಬಂದಿದ್ದರು. ಅಲ್ಲಿ ಅವರು ಗೋಪುರ ಮೊದಲಾದವುಗಳಿಂದ ಸುಶೋಭಿತವಾದ ವಿಶಾಲ ದೇವಾಲಯಗಳನ್ನು ನೋಡಿದ್ದರು. ಚಾಫಳದಲ್ಲಿರುವ ದೇವಾಲಯವನ್ನು ಕೆಡವಿಸಿ ಆ ಸ್ಥಳದಲ್ಲಿ ಕರ್ನಾಟಕದ ಪದ್ಧತಿಯಂತೆ ಹೊಸ ಸುಂದರ ದೇವಾಲಯವನ್ನು ನಿರ್ಮಿಸಬೇಕೆಂದು

ಅವರ ಇಚ್ಛೆಯಾಗಿತ್ತು. ಅವರು ಸಮರ್ಥರಿಗೆ ಹಾಗೆ ಹೇಳಿದರು. ಆದರೆ ಸಮರ್ಥರು ಒಪ್ಪಲಿಲ್ಲ. ಈಗ ಬೇಡವೆಂದು ಅವರು ಹೇಳಿದರು. "ಮುಂದೆ ಶ್ರೀಯ ಇಚ್ಛೆ ಸಮರ್ಥ" ಎಂಬ ಅವರ ಉದ್ಗಾರವಿದೆ. ಇದು ನಿಸ್ಪೃಹ ಪುರುಷನ ಉದ್ಗಾರವು. ಇಂಥ ನಿಸ್ಪೃಹತೆಯು ಒಡಲಿನಲ್ಲಿ ಚಾಫಳ ಮಠಕ್ಕಾಗಿ ಯಾವುದೇ ವ್ಯವಸ್ಥೆಯನ್ನು ಮಾಡಲು ಸಮರ್ಥರು ಒಪ್ಪುತ್ತಿರಲಿಲ್ಲ. ಮುಂದೆ ಅವರು ವೃದ್ಧರಾದರು. ಎಪ್ಪತ್ತರ ಹತ್ತಿರಕ್ಕೆ ಬಂದರು. ಎಲ್ಲರು ಆಗ್ರಹಪಡಿಸಿದಾಗ ಮಾತ್ರ ಉತ್ಸವಕ್ಕಾಗಿ ಕೆಲವು ಶಾಶ್ವತ ವ್ಯವಸ್ಥೆಯನ್ನು ಮಾಡಲು ಅವರು ಸಮ್ಮತಿ ಕೊಟ್ಟಿದ್ದಾರೆ. "ನಿಮ್ಮ ಮನಸ್ಸಿನಲ್ಲಿ ಶ್ರೀಯ ಸೇವೆ ಜರುಗಲೆಂದು ನಿಶ್ಚಯವಾಗಿದೆ. ಅದನ್ನು ಯಥಾವಕಾಶ ಹೇಗೆ ಹೇಗೆ ನಿಯಮಿಸಬೇಕೋ ಹಾಗೆ ಮಾಡಿರಿ ಮತ್ತು ಮುಂದೆ ಹೇಗೆ ಸಂಪ್ರದಾಯದ ಹಾಗೂ ರಾಜ್ಯದ ವಿಸ್ತಾರವಾಗುವುದೋ ಹಾಗೆ ಮಾಡುತ್ತ ಹೋಗಿರಿ" ಎಂದು ಆ ವಿಷಯಗಳ ಉಲ್ಲೇಖವನ್ನು ಛತ್ರಪತಿಯವರ ಆ ಪತ್ರದಲ್ಲಿ ಮಾಡಲಾಗಿದೆ.

ಸಮರ್ಥರ ಮತ್ತು ಶಿವರಾಯರ ಪರಸ್ಪರ ಸಂಬಂಧಗಳಲ್ಲಿಯ ಪ್ರತಿಯೊಂದು ಪ್ರಸಂಗವನ್ನು ಬರೆದುಕೊಂಡು ಉಲ್ಲೇಖಿಸುವುದಕ್ಕೆ ಸಾಧ್ಯವಿರಲಿಲ್ಲ. ಅದಕ್ಕಾಗಿ ಕಾಗದಪತ್ರಗಳ ಆಧಾರವನ್ನು ಶೋಧಿಸುತ್ತಿರುವಾಗ ಇದು ಪೂರ್ಣವಾಗಿ ನಾವು ಲಕ್ಷ್ಯದಲ್ಲಿಡುವಂತಿದೆ. ಜಗತ್ತಿನಲ್ಲಿ ಬೇರೆಡೆ ಇಂಥ ಸಂಬಂಧಗಳು ಬಂದ ಸ್ಥಳಗಳಲ್ಲಿ ಕೂಡ ಇದೇ ಸ್ಥಿತಿಯಿದೆ. ಇಂದಿನ ಕಾಲದಲ್ಲಿ ಕೂಡ ಇಬ್ಬರು ವ್ಯಕ್ತಿಗಳಲ್ಲಿ ಇಂಥ ಸಂಬಂಧವಿದ್ದರೆ, ಅಲ್ಲಿ ಇದರ ಅನುಭವವನ್ನು ನಾವು ಪಡೆಯಬಹುದು. ಸಮರ್ಥರು ಹಾಗೂ ಶಿವಛತ್ರಪತಿ ಇವರಲ್ಲಿಯ ಪರಸ್ಪರ ಸಂಬಂಧವು ಯಾವ ಸ್ವರೂಪದಲ್ಲಿತ್ತು ; ಈ ಬಗೆಗೆ ಅನುಮಾನವನ್ನು ಕಲ್ಪಿಸುವಾಗ ಅವರಿಬ್ಬರ ಒಟ್ಟು ಆಯುಷ್ಯ, ಜೀವನದ ಬಗೆಗಿನ ಅವರ ದೃಷ್ಟಿಕೋನ ಮತ್ತು ಅವರು ಸ್ವೀಕರಿಸಿದ ಜೀವನದ ಮೌಲ್ಯಗಳು ಇವುಗಳನ್ನು ಒಟ್ಟಾರೆ ಗಮನಕ್ಕೆ ತರುವುದು ಅವಶ್ಯವಿದೆ. ಇದನ್ನು ಮಾಡುತ್ತಿರುವಲ್ಲಿ ಯಾವುದಾದರೊಂದು ಕಲ್ಪಿತ ಅನುಮಾನವನ್ನು ಮಾಡಬಾರದು. ಅದ್ಭುತ ಇಲ್ಲವೆ ಅತಿಶಯೋಕ್ತಿಗಳನ್ನು ಅವಲಂಬಿಸಬಾರದೆಂಬುದು ತಿಳಿದೇ ಇದೆ. ಅವರ ವಿಷಯವಾಗಿ ಐತಿಹಾಸಿಕ ಸತ್ಯವೆಂದು ಒಂದಿಷ್ಟು ಪ್ರಸಂಗವು ಸಪ್ರಮಾಣ ಸಿದ್ಧವಾದರೆ, ಅವರಿಗೆ ಇತಿಹಾಸದ ಅಭಿರುಚಿಯಿದೆ ಮತ್ತು ಸತ್ಯದ ಆದರವಿದೆ ಎಂದು ತಿಳಿಯಬೇಕು. ಅವರು ಅದನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಬೇಕು. ಈ ವಿಷಯದಲ್ಲಿ ಮನಸ್ಸು ಹಟವಾದಿಯಾಗಕೂಡದು, ದೂಷಿತವಾಗಬಾರದು, ಪೂರ್ವಗ್ರಹಗಳಿಂದಲೂ ಅಲಿಪ್ತವಾಗಿರಬೇಕು. ಇಂಥ ಪಥ್ಯಗಳನ್ನು ನಿರ್ವಹಿಸುತ್ತ ಇವರಿಬ್ಬರ ಪರಸ್ಪರ ಸಂಬಂಧದ ಸ್ವರೂಪವನ್ನು ನಿರ್ಧರಿಸುವ ದೃಷ್ಟಿಯಲ್ಲಿ ಛತ್ರಪತಿಯವರ ಈ ಪತ್ರವು ಅತಿಶಯ ಉಪಯುಕ್ತವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಸಮರ್ಥರ ಚಟುವಟಿಕೆಗಳ ಕೇಂದ್ರದ ದೃಷ್ಟಿಯಿಂದ ಚಾಫಳದಷ್ಟೇ ಪರಳಿಗೂ ಮಹತ್ತ್ವವಿದೆ. ಚಾಫಳದ ಮಠವು ಸ್ಥಾಪನೆಯಾದ ನಂತರ ಎರಡು ವರ್ಷದೊಳಗಾಗಿ ಸಮರ್ಥರು ಪರಳಿಗೆ ಬಂದರು. ಅವರು ಯಾವುದೇ ಒಂದು ಸ್ಥಳದಲ್ಲಿ ಸ್ಥಿರವಾಗಿ

ಇರುತ್ತಿರಲಿಲ್ಲ, ಇದಂತೂ ನಿಜ. ಆದರೆ ಅತ್ತಿತ್ತ ಸಂಚರಿಸಿದ ಬಳಿಕ ಚಾಫಳಕ್ಕೂ ಬರುತ್ತಲಿದ್ದರು. ಇಲ್ಲವೆ ಪರಳಿಗೂ ಬರುತ್ತಲಿದ್ದರು. ವಯಸ್ಸಿನ ಅರುವತ್ತೈದು ವರ್ಷ ಕಳೆದರೂ ಬೆಟ್ಟಗಳಲ್ಲಿಯ ಗುಹೆಗಳಲ್ಲಿ ವಾಸಿಸುವ ಸಮರ್ಥರ ಕ್ರಮವು ನಡೆದೇ ಇತ್ತು. ಸನ್ 1674ರಲ್ಲಿ ಮಳೆಗಾಲದ ನಾಲ್ಕು ತಿಂಗಳು ಹೆಳವಾಕದಲ್ಲಿದ್ದಾಗ ಚಳಿಯ ಬಾಧೆಯಾಗಿದ್ದು ಸಮರ್ಥರು ಅಲ್ಲಿಂದ ಹೊರಟರು. ಕುದುರೆ ಮೇಲಿಂದ ಚಾಫಳಕ್ಕೆ ಬಂದರು. ಚಾಫಳಕ್ಕೆ ಸುಖರೂಪವಾಗಿ ಮುಟ್ಟಿದ ಬಳಿಕ ಅವರು ರಘುನಾಥಭಟ್ಟ ಗೋಸಾವಿಯವರಿಗೆ ಬರೆದ ಪತ್ರವು ದೊರೆತಿದೆ. ಅನಂತರದಲ್ಲಿ ಯಾವುದೋ ಸಮಯ, "ಈಗ ವೃದ್ಧಾಪ್ಯ ಕಾಲ ಒದಗಿತು. ಗಿರಿಕಂದರಗಳಲ್ಲಿ ಸಂಚರಿಸುವ ಶ್ರಮವನ್ನು ಇನ್ನು ತೆಗೆದುಕೊಳ್ಳಬಾರದು, ಸಜ್ಜನಗಡದಲ್ಲಿ ಒಂದೇ ಸ್ಥಳದಲ್ಲಿ ಇರಬೇಕು" ಎಂದು ಛತ್ರಪತಿಯವರು ಸಮರ್ಥರಿಗೆ ವಿನಂತಿಯನ್ನು ಮಾಡಿಕೊಂಡರು. ಸಮರ್ಥರು ಕೂಡ ಅದನ್ನು ಒಪ್ಪಿದರು. ಆದುದರಿಂದ ಅವರ ಆಯುಷ್ಯದ ಕೊನೆಯ ವರ್ಷಗಳು ಮುಖ್ಯವಾಗಿ ಸಜ್ಜನಗಡದಲ್ಲಿ ಕಳೆದವು.

ಪರಳಿಕೋಟೆಯ ಹೆಸರನ್ನು ಸಜ್ಜನಗಡ ಎಂದು ಯಾವಾಗ ಖಚಿತವಾಗಿ ಬದಲಿಸಿದರೆಂಬುದನ್ನು ನಿರ್ಣಯಿಸಲಿಕ್ಕೆ ಬರುವುದಿಲ್ಲ. ಆದರೆ ಆ ಕೋಟೆಗೆ ಈ ಹೆಸರು ಸಮರ್ಥರ ವಾಸ್ತವ್ಯದಿಂದ ಪ್ರಾಪ್ತವಾಯಿತೆಂಬುದು ಸ್ಪಷ್ಟವಾಗಿದೆ. ಸಮರ್ಥರು ಅಲ್ಲಿ ಇರತೊಡಗಿದ ಬಳಿಕ ಅವರ ನಿವಾಸಕ್ಕಾಗಿ ಮತ್ತು ಅಲ್ಲಿಯ ಮಠಮಂದಿರಗಳ ವ್ಯವಸ್ಥೆಗಾಗಿ ಅವಶ್ಯವಾದ ಕಟ್ಟಡಗಳು ನಿರ್ಮಾಣಗೊಂಡವು. ಸಮರ್ಥರು ಮಲಗುವುದಕ್ಕಾಗಿ ಶಿವರಾಯರು ಒಂದು ಪಲ್ಲಂಗವನ್ನು ಕೊಟ್ಟಿದ್ದಾರೆ. ಈ ಪಲ್ಲಂಗ, ಸಮರ್ಥರು ಉಪಯೋಗಿಸುತ್ತಿದ್ದ ಯೋಗದಂಡ, ಅದರಲ್ಲಿಯ ಗುಪ್ತ ಖಡ್ಗ, ಅವರ ಪಾದುಕೆ ಇಂಥ ವಸ್ತುಗಳು ಸಜ್ಜನಗಡದಲ್ಲಿ ಇಂದಿಗೂ ನೋಡಲು ದೊರೆಯುತ್ತವೆ. ಕಲ್ಯಾಣರು ಸಮರ್ಥರಿಗಾಗಿ ಉರಮೋಡಿ ನದಿಯಿಂದ ನೀರನ್ನು ತರುತ್ತಿದ್ದ ಬಹಳ ದೊಡ್ಡದಾದ ಒಂದು ದಂಡೆ ಅಲ್ಲಿದೆ. ಸಮರ್ಥರ ವಾಸ್ತವ್ಯಕ್ಕಾಗಿ ಇಂಥ ಸ್ವತಂತ್ರ ವ್ಯವಸ್ಥೆಯನ್ನು ಛತ್ರಪತಿಯವರು ಸಜ್ಜನಗಡದಲ್ಲಿ ಮಾಡಿಕೊಟ್ಟಿದ್ದರೆಂಬ ಸಂಗತಿಯು ಅವರನ್ನು ಶಿವಾಜಿ ಮಹಾರಾಜರು ಗುರುಸ್ಥಾನದಲ್ಲಿ ಮನ್ನಿಸುತ್ತಿದ್ದರೆಂಬುದಕ್ಕೆ ಉದಾಹರಣೆಯಾಗಿದೆ. ಚಾಫಳ ಮಠದ ವ್ಯವಸ್ಥೆಯನ್ನು ಮಾಡುವುದಕ್ಕೆ ಅವರು ಬರೆದ ಪತ್ರದಲ್ಲಿಯೇ "ಶ್ರೀಸದ್ಗುರುವರ್ಯ" ಎಂದು ತಲೆಬರಹದಲ್ಲಿ ಮೊದಲ ಶಬ್ದವಿದೆ. ಛತ್ರಪತಿಯವರು ತಮ್ಮ ಆಯುಷ್ಯದಲ್ಲಿ ಅನೇಕ ಜನ ಸಾಧುಸಂತರನ್ನು ಭೇಟಿಯಾದರು. ಅನೇಕ ದೇವಾಲಯಗಳಿಗೆ ನೆರವು ನೀಡಿದರು. ಆದರೆ ಸಮರ್ಥರ ಸಲುವಾಗಿ ಮತ್ತು ಅವರಿಗೆ ಸಂಬಂಧಿಸಿದ ಚಾಫಳ ಮತ್ತು ಸಜ್ಜನಗಡ ಈ ಎರಡು ಸ್ಥಳಗಳಿಗಾಗಿ ಅವರು ಮಾಡಿದ ವ್ಯವಸ್ಥೆ ಅಪವಾದಾತ್ಮಕವೆಂದು ಹೇಳುವಷ್ಟು ಬೇರೆಯಾಗಿದೆ. ಶಿವರಾಯರು ಹಾಕಿಕೊಟ್ಟ ಈ ಪರಂಪರೆಯನ್ನು ಮುಂದೆ ಸಂಭಾಜಿ, ರಾಜಾರಾಮ ಹಾಗೂ ಶಾಹೂ ಹೀಗೆ ಎಲ್ಲ ಛತ್ರಪತಿಗಳು ನಡೆಯಿಸಿಕೊಂಡು ಬಂದಿದ್ದಾರೆ. ಅನಂತರದಲ್ಲಿಯೂ ಅದು ಹೀಗೆ ನಡೆದುಕೊಂಡು ಬಂದಿದೆ ಎಂದು

ಐತಿಹಾಸಿಕ ಕಾಗದಪತ್ರಗಳ ಸಾಕ್ಷಿಯಿದೆ.

ಛತ್ರಪತಿಗಳ ವತಿಯಿಂದ ಲೇಖಿ ಸ್ವರೂಪದಲ್ಲಿ ಏನಾದರೂ ದೊರೆಯಬಹುದೆಂದು ಶೋಧ ಮಾಡುತ್ತಿರುವಾಗ ಚಾಫಳ ಮಠದ ಸಂದರ್ಭದಲ್ಲಿ ಅವರು ಬರೆದ ಪತ್ರದ ಉಲ್ಲೇಖವನ್ನು ಮಾಡಲಾಯಿತು. ಶಿವರಾಯರ ಬಗೆಗೆ ಸಮರ್ಥರಿಗೆ ಎಷ್ಟು ಪ್ರೇಮ, ಎಂಥ ವಿಶ್ವಾಸ ಮತ್ತು ಎಷ್ಟು ಆದರ ಇವುಗಳ ಅದೆಷ್ಟೋ ಸಾಕ್ಷಿಗಳು ಅವರ ಸಾಹಿತ್ಯದಲ್ಲಿ ನಮಗೆ ದೊರೆಯುತ್ತವೆ. ಈ ಸಂದರ್ಭಗಳಲ್ಲಿ ನಿಯಮಿತವಾಗಿ ಸಮರ್ಥರು ಆಯಾ ಉದ್ಗಾರಗಳನ್ನು ಯಾವಾಗ ಮತ್ತು ಯಾವ ನಿಮಿತ್ತವಾಗಿ ತೆಗೆದರು, ದುರ್ದೈವದಿಂದ ಅವುಗಳನ್ನು ಖಚಿತಮಾಡಿಕೊಳ್ಳಲು ಬರುವುದಿಲ್ಲ. ಹಾಗೆ ಮಾಡಲು ಬರುವಂತಿದ್ದರೆ ಆಯಾ ಉದ್ಗಾರಗಳ ಅರ್ಥಪೂರ್ಣತೆಯನ್ನು ಅಧಿಕ ಯಥಾರ್ಥವಾಗಿ ಅರಿಯಲು ಬರುತ್ತಿತ್ತು. ಆದರೆ ಅವುಗಳನ್ನು ಅರಿಯಲು ಸಾಧ್ಯವಿಲ್ಲದಿದ್ದರೂ ಕೊನೆಯ ನಿರ್ಧಾರ ಕೈಗೊಳ್ಳುವುದರಲ್ಲಿ ಯಾವ ಕೊರತೆಯಾಗದು. ಸಮರ್ಥರು ಒಬ್ಬ ಪರಮಾರ್ಥಿ ಪುರುಷರು, ಜಗತ್ತಿನ ಜಂಜಾಟದಲ್ಲಿ ಬೀಳದವರು. ಆದರೆ ಅವರು ಕ್ಷಾತ್ರಧರ್ಮ ಮತ್ತು ಸೇವಕ ಧರ್ಮ ಇವುಗಳ ಮೇಲೆ ಸ್ವತಂತ್ರ ರಚನೆಗಳನ್ನು ಮಾಡಿದ್ದಾರೆ. ಆ ಪ್ರಕರಣಗಳ ಎಲ್ಲ ಸಂದರ್ಭಗಳು ಶಿವರಾಯರ ರಾಜ್ಯ ಸ್ಥಾಪನೆಯ ಬಗೆಗಿದೆ. ಶಿವಾಜಿ ಮಹಾರಾಜರು ಅನುಗ್ರಹ ಪಡೆಯುವುದಕ್ಕೆ ಅವರತ್ತ ಬರಲು ಹೊರಟಿದ್ದರು. ಅದಕ್ಕಿಂತ ಒಂದಿಷ್ಟು ಮೊದಲು ಸಮರ್ಥರು ಅವರಿಗೆ ಬರೆದ ಪತ್ರದಲ್ಲಿ ಅವರ ಕರ್ತೃತ್ವ ವಿಷಯದ ಬಗೆಗೆ ಸಮರ್ಥರಿಗೆ ಎಂಥ ವಿಶ್ವಾಸವಿತ್ತು ಅದರ ನಿರ್ಮಲ ಪ್ರತಿಬಿಂಬ ಮೂಡಿದೆ.

ಆ ಪತ್ರದಲ್ಲಿ ಆರಂಭದ ತಲೆಬರಹದಲ್ಲಿದ್ದ ಗೌರವಪರ ಓವಿಗಳನ್ನೇ ಬರೆಯುವ ಕೇವಲ ಒಂದು ರೀತಿ ಇರುತ್ತದೆ ಇಲ್ಲವೆ ಅದು ಕೇವಲ ಒಂದು ಉಪಚಾರವಿದೆಯೆಂದು ತಿಳಿಯುವ ಸಾಧ್ಯತೆಯಿದೆ. ಆ ಓವಿಗಳಲ್ಲಿ ಒಂದಿಷ್ಟು ಅಲಂಕಾರವಿರುವುದು ನಿಜ. ಆದರೆ ಅದೇ ವೇಳೆಯಲ್ಲಿ ಮೋರೆ, ಘೋರಪಡೆ ಇಲ್ಲವೆ ನಿಂಬಾಳಕರ ಇವರಂಥ ಇತರ ಯಾವ ಮರಾಠಾ ಸರದಾರರನ್ನು ಉದ್ದೇಶಿಸಿ ಸಮರ್ಥರು ಇಂಥ ಗೌರವಪೂರ್ಣ ಓವಿಗಳನ್ನು ಎಂದೂ ಬರೆದಿಲ್ಲ ಎಂಬುದನ್ನು ಗಮನದಲ್ಲಿಡಬೇಕು. ಶಹಾಜಿ ರಾಜೆಯವರ ಭೇಟಿಯಾಗಿತ್ತು. ಕರ್ನಾಟಕಕ್ಕೆ ಅವರು ಹೋದಾಗ ಶಿವಾಜಿ ಮಹಾರಾಜರ ಮಲಸಹೋದರ ವ್ಯಂಕೋಜಿರಾವ್ ಇವರ ಭೇಟಿಯಾಗಿತ್ತು. ಆದರೆ ಅವರನ್ನುದ್ದೇಶಿಸಿ ಸಮರ್ಥರು ಇಂಥ ಗೌರವ ಪದಗಳನ್ನು ಬಳಸಿದ್ದಾರೆಂದು ತಿಳಿಯುವುದಿಲ್ಲ. ಆದಕ್ಕಾಗಿ ತರುಣ ಶಿವಾಜಿ ಮಹಾರಾಜರ ವಿಷಯದಲ್ಲಿ ಅವರು ಪತ್ರದಲ್ಲಿ ತೆಗೆದ ಉದ್ಗಾರವು ಕೇವಲ ಶಬ್ದಗಳ ಆಡಂಬರಕ್ಕಾಗಿ ಇಲ್ಲವೇ ಕಲ್ಪನಾಶಕ್ತಿಯ ವಿಲಾಸಕ್ಕಾಗಿ ಅಲ್ಲವೆಂಬುದು ಸ್ಪಷ್ಟವಿದೆ. "ಈ ಭೂಮಂಡಲದಲ್ಲಿ ಧರ್ಮರಕ್ಷಕ ಇವನಂತಿಲ್ಲ!" ನಿಮ್ಮಿಂದ ಸಲುವಾಗಿ ಒಂದಿಷ್ಟು ಮಹಾರಾಷ್ಟ್ರ ಧರ್ಮ ಉಳಿದಿದೆ ಹೀಗೆ ಇಂಥ "ಶಿವಕಲ್ಯಾಣ ರಾಜ—"ರಿಗೆ ಸಮರ್ಥರು ಆ ಮೊದಲ ಪತ್ರದಲ್ಲಿ ಹೇಳಿದ್ದಾರೆ. "ನಾನು ನಿಮ್ಮ ದೇಶದಲ್ಲಿ ವಾಸಿಸಿದೆ! ಆದರೆ ವರ್ತಮಾನ ಪಡೆಯಲಿಲ್ಲ! ಋಣಾನು

ಬಂಥ ಮರೆತಿರಬೇಕು! ಕಾರಣ ತಿಳಿಯಲಿಲ್ಲ!!" ಇದು ಅದರಲ್ಲಿಯ ಉದ್ಗಾರವು, ಒಂದು ಆಂತರಿಕ ಪ್ರೇಮದ, ವಾತ್ಸಲ್ಯದ ಸ್ಫೂರ್ತಿಯ ಅವಿಷ್ಕಾರವಿದೆ. ಸಮರ್ಥ ಹಾಗೂ ಶಿವರಾಯ ಪರಸ್ಪರರಲ್ಲಿ ಮುಂದೆ ನಿತ್ಯದ ಹಾಗೂ ಹತ್ತಿರದ ಸಂಬಂಧಗಳು ಪ್ರಸ್ಥಾಪಿತವಾದವು. ಈ ರೀತಿಯ ಉದ್ಗಾರವನ್ನು ಮುಂದಿನ ಪತ್ರಗಳ ಮೂಲಕ ತಿಗೆಯುವ ಯಾವ ಕಾರಣವೂ ಉಳಿಯಲಿಲ್ಲ. ಆದರೆ ಅವರ ವಿಷಯವಾಗಿ ಸಮರ್ಥರ ಭಾವನೆಯು ಅಪ್ರತ್ಯಕ್ಷವಾಗಿ ಕೆಲವು ಕಡೆಗಳಲ್ಲಿ ವ್ಯಕ್ತವಾಗಿದೆ. "ಧರ್ಮಸ್ಥಾಪನೆಯ ನರ! ಆತ ಈಶ್ವರನ ಅವತಾರ!" ಈ ಓವಿಯನ್ನು ಬರೆಯುವಾಗ ಅವರ ಕಣ್ಣೆದುರು ಶಿವಛತ್ರಪತಿಯವರ ಪರಾಕ್ರಮ ಇತ್ತೆಂದು ಹೇಳುವುದರಲ್ಲಿ ತಪ್ಪೇನೂ ಕಾಣದು. ಅಸಾಧ್ಯವೆಂದು ಮೊದಲೇ ತಿಳಿಯುವುದಿಲ್ಲ.

'ಆನಂದವನಭುವನ' ಈ ಹೆಸರಿನ ಸಮರ್ಥರ ಒಂದು ಬಿಡಿ ಪ್ರಕರಣವಿದೆ. ಅದರಲ್ಲಿ ಅನುಷ್ಟುಭ ಛಂದಸ್ಸಿನಲ್ಲಿ ಐವತ್ತೊಂಬತ್ತು ಶ್ಲೋಕಗಳಿವೆ. ಸಮರ್ಥರ ಇತರ ರಚನೆಗಳಲ್ಲಿ ಅನೇಕ ಕಡೆಗೆ ತೋರುವ ಏಕಸೂತ್ರತೆ ಇಲ್ಲಿಯೂ ಇಲ್ಲ. ಆದರೆ ಅದರ ಜತೆ ಸರಳ ಶಬ್ದಗಳಿಂದ ವಾಚಕರ ಮನಸ್ಸು ಹಿಡಿಯುವ ಮತ್ತು ಪ್ರಭಾವ ಬೀರುವ ಸಾಮರ್ಥ್ಯವಿದೆ. "ರಾತ್ರಿಯಲಿ ಕಂಡ ಆ ಕನಸು ನನಸಾಯಿತು!" ಎಂದು ಅವರ ಮನಸ್ಸಿನಲ್ಲಿಯ ಕನಸು ನನಸಾದ ಉಲ್ಲೇಖವು ಅದರಲ್ಲಿದೆ. ಆಯುಷ್ಯದ ಪ್ರಾರಂಭದ ಕಾಲದಲ್ಲಿ ಸಮರ್ಥರು 'ಪರಚಕ್ರ ನಿರೂಪಣ' ಹಾಗೂ 'ದೇವರಿಂದ ಮತ್ತು ಅರಸರಿಂದ ಒದಗಿದ ಸಂಕಟ' ಇಂಥ ರಚನೆಗಳಲ್ಲಿ ದೇಶಕ್ಕೆ ಹಾಗೂ ಸಮಾಜಕ್ಕೆ ಒದಗಿದ ಸರ್ವಾಂಗೀಣ ದುರ್ದೆಶೆಯ ವರ್ಣನೆಯನ್ನು ಮಾಡಿದ್ದಾರೆ. ಮತ್ತೆ ಒಂದಿಷ್ಟು ರಚನೆಗಳಲ್ಲಿ ಈ ದುರವಸ್ಥೆಯನ್ನು ನೀಗಿಸಲು ಅವರು ಈಶ್ವರನ ಕರುಣೆಯನ್ನೇ ಕೋರಿದ್ದರು. ತಮ್ಮ ಈ ಪ್ರಾರ್ಥನೆಯನ್ನು ಈಶ್ವರನು ಕೇಳಿದ್ದಾನೆಂದು ಹೇಳುವ ಮತ್ತು ನೋಡುವ ಭಾಗ್ಯವು ಅವರಿಗೆ ಶಿವರಾಯರು ನಿರ್ಮಿಸಿದ ಸ್ವರಾಜ್ಯದ ರೂಪದಲ್ಲಿ ದೊರೆಯಿತು. ಛತ್ರಪತಿಯವರ ರಾಜ್ಯವು ಧರ್ಮ ಹಾಗೂ ನ್ಯಾಯಕ್ಕೆ ಅನುಸರಿಸಿ ನಡೆಯುವುದಿತ್ತು. ಅವರ ರಾಜ್ಯದಲ್ಲಿ ಯಾವುದೇ ಧರ್ಮದ ಅನುಯಾಯಿಗಳಿಗೆ ಭಯವಿರಲಿಲ್ಲ. ತಮ್ಮ ತಮ್ಮ ಶ್ರದ್ಧೆಯ ಪ್ರಕಾರ ನಡೆಯುವ ಸ್ವಾತಂತ್ರ್ಯವು ಪ್ರತಿಯೊಬ್ಬ ವ್ಯಕ್ತಿಗೆ ಇತ್ತು. ನ್ಯಾಯದ ಪ್ರತಿಷ್ಠೆಯನ್ನು ಕಾಯ್ದುಕೊಳ್ಳಲಾಗುತ್ತಿತ್ತು. ಧರ್ಮದ ಮಾರ್ಗದಿಂದ ಅಂದರೆ ನ್ಯಾಯನೀತಿಯ ಮಾರ್ಗದಿಂದ ಬರುವ ಲಕ್ಷ್ಮಿಯು ಅಂದರೆ ಸಮೃದ್ಧಿಯು ಸಮರ್ಥರಿಗೆ ಬೇಕಾಗಿತ್ತು. "ಇಲ್ಲಿ ಧರ್ಮ ವೃದ್ಧಿಸಿತು ಜತೆಗೆ ರಮಾ !" ಎಂದು ಅವರು ಆನಂದವನಭುವನದಲ್ಲಿ ಹೇಳಿದ್ದಾರೆ. ರಮಾ ಅಂದರೆ ಲಕ್ಷ್ಮಿ. ಈ ಆನಂದವನಭುವನದಲ್ಲಿ ಧರ್ಮ ಬೆಳೆಯಿತು ಮತ್ತು ಆ ಧರ್ಮದ ಆಶ್ರಯದಲ್ಲಿ ಲಕ್ಷ್ಮಿ ಬೆಳೆದಳು. ಅವರು ಇಂಥ ವರ್ಣನೆಯನ್ನು ಆಚರಣದಲ್ಲಿ ಮಾಡಿದ್ದಾರೆ. ಆಯ್ದ ಶಬ್ದಗಳಲ್ಲಿ ನೇರ ಹಾಗೂ ವಿಪುಲ ಅರ್ಥ ಕೊಡುವ ಸಮರ್ಥರ ಕೌಶಲ್ಯವು ಇಲ್ಲಿ ಕಾಣುತ್ತದೆ.

ತಮಗೆ ತೋರುವ ಸಮಾಧಾನವನ್ನು ಸಮರ್ಥರು ಈ ಕಾವ್ಯದಲ್ಲಿ ತೃಪ್ತ

ಮನಸ್ಸಿನಿಂದ ಹೇಳಿದ್ದಾರೆ. ಎಷ್ಟು ಮಾತನಾಡಲಿ, ಎಷ್ಟು ಹೇಳಲಿ, ಎಷ್ಟು ವರ್ಣಿಸಲಿ ಹೀಗೆ ಅವರಿಗಾಗಿದೆ. ಅವರ ಅಂತರ್ಯವನ್ನು ತುಂಬಿ ಬಂದ ಸಂತೋಷವು ಸಾಲಿನಿಂದ ಸಾಲುಗಳಿಗೆ ತುಂಬಿ ಹರಿದಿದೆ. ಆನಂದವನಭುವನವೆಂದರೆ ಅನ್ಯಾಯ ರಾಜ್ಯಕರ್ತೃಗಳ ಪಾಶದಿಂದ ಮುಕ್ತವಾದ ನಮ್ಮ ಭೂಮಿ. ಹೀಗೆ ಮುಕ್ತವಾದ ಈ ಭೂಮಿಯೇ ಪವಿತ್ರ, ಇಲ್ಲಿಯ ನೀರು ಪಾವನ, ಸ್ನಾನ ಸಂಧ್ಯಾಗಳಂಥ ಧರ್ಮ ಕಾರ್ಯಗಳನ್ನು ಮಾಡಲು ಇಲ್ಲವೆ ಜಪತಪಾದಿ ಅನುಷ್ಠಾನ ಮಾಡಲು ಈ ಭೂಮಿಯ ಕ್ಷೇತ್ರಗಳು ಯೋಗ್ಯ ಎಂಬ ಭಾವನೆಯನ್ನು ಸಮರ್ಥರು ವ್ಯಕ್ತಪಡಿಸಿದ್ದಾರೆ. ಪಾವಿತ್ರ್ಯದ ಜತೆಗೆ ಅವರು ಪರಧರ್ಮೀಯರ ಅನ್ಯಾಯಗಳಿಂದ ಪಾರಾಗುವುದನ್ನು ಜೋಡಿಸಿದ್ದಾರೆ. ಇದು ಇಲ್ಲಿಯ ಅಸಾಮಾನ್ಯ ವಿಶೇಷವಾಗಿದೆ. ಪಾವಿತ್ರ್ಯದ ಈ ಸ್ಪಷ್ಟೀಕರಣವು ಮತ್ತೆ ಬೇರೆ ಯಾರ ಮನಸ್ಸಿನಲ್ಲಿ ಮೂಡಿಲ್ಲ. ಆನಂದವನಭುವನವೆಂದರೆ ನಿಜವಾಗಿ ಯಾವ ಪ್ರದೇಶವು, ಕಾಶಿಯೋ, ಏನು ಮಹಾರಾಷ್ಟ್ರವೋ, ಈ ರಚನೆಯನ್ನು ಸಮರ್ಥರು ಯಾವಾಗ ಮಾಡಿದರು, ಪೂರ್ವ ವಯಸ್ಸಿನಲ್ಲಿ ತೀರ್ಥಯಾತ್ರೆಗಾಗಿ ಕಾಶಿಗೆ ಹೋದ ಸಮಯದಲ್ಲಿಯೊ, ಇಳಿವಯಸ್ಸಿನಲ್ಲಿ ಶಿವರಾಯನ ರಾಜ್ಯಸ್ಥಾಪನೆಗೆ ಮೂರ್ತರೂಪ ಬಂದ ಬಳಿಕವೊ, ಈ ರಚನೆಯಲ್ಲಿ ಪೂರ್ವಾರ್ಧದ ನಿಶ್ಚಿತ ಅಭಿಪ್ರಾಯವೇನು, ಅದರ ಸಂಬಂಧವನ್ನು ಉತ್ತರಾರ್ಧದಲ್ಲಿಯ ವರ್ಣನೆಗೆ ಹೇಗೆ ಹೊಂದಿಸಲು ಬರುವುದು–ಹೀಗೆ ಅನೇಕ ಪ್ರಶ್ನೆಗಳು ವಿವಾದಾತ್ಮಕವಾಗಿ ಉಳಿದಿವೆ. ಈಗಲೂ ನಿರುತ್ತರವಾಗಿವೆ. ಆದರೆ ಅದರಲ್ಲಿಯ "ಎಲ್ಲೆಡೆ ಸೈನ್ಯ ಹೊರಟಿತು ಬಂಧ ವಿಮೋಚನೆಗಾಗಿ!" "ಮಹಾ ಪ್ರಯತ್ನ ನಡೆದಿದೆ ಮ್ಲೇಂಛರೂಪಿ ದೈತ್ಯರನು ಮುಳುಗಿಸಲು!" ಅಥವಾ "ದೇಶ ಬಲಿಷ್ಠವಾಯಿತು ಭಾರತದಲ್ಲಿಯ ಎಲ್ಲ ಪಾಪಿಗಳು ನಾಶವಾಗಿ! ಪಾಖಂಡಿಗಳ ಕ್ಷಯವಾಗಿ!" ಈ ರೀತಿಯ ಉದ್ಗಾರಗಳನ್ನು ಶಿವರಾಯರ ಅತುಲನೀಯ ಪರಾಕ್ರಮವನ್ನು ಉದ್ದೇಶಿಸಿ ತೆಗೆದಿದ್ದಾರೆ. ಅವರ ಮೂರ್ತಿ ಕಣ್ಣೆದುರು ನಿಲ್ಲುವಂತಿದೆ. ಈ ವಿಷಯವಾಗಿ ಯಾರೂ ಸಂದೇಹ ವ್ಯಕ್ತಮಾಡಿಲ್ಲ. ಸಮರ್ಥರ ಲೇಖನಗಳಲ್ಲಿ ಶಿವರಾಯರ ತೇಜಸ್ವಿ ಕರ್ತೃತ್ವವು ಯಾವ ಸ್ಥಾನದಲ್ಲಿ ಬರುತ್ತದೆ ಇದು ಆನಂದವನಭುವನ ಈ ಒಂದು ಶಬ್ದಬದ್ಧವಾದ ಆಲೇಖದಲ್ಲಿದೆ.

ಶಿವರಾಯರಿಗೆ ರಾಜ್ಯಾಭಿಷೇಕವಾಗಿ ಹೋದ ನಂತರದ ಘಟನೆಯಿದೆ. ತಮ್ಮ ಅಣ್ಣ ಗಂಗಾಧರನಿಗಾಗಿ ಈ ಹಿಂದೆ ಉಳಿದುಹೋಗಿದ್ದ ಯಾವುದೋ ದೇವರ ಹರಕೆಯನ್ನು ಪೂರೈಸುವುದಕ್ಕಾಗಿ ಸಮರ್ಥರು ಪ್ರತಾಪಗಡಕ್ಕೆ ಭವಾನಿಯ ದರ್ಶನಕ್ಕಾಗಿ ಹೋಗಿದ್ದರು. ಈಕೆ.ತುಳಜಾಪುರದ ಜಗನ್ಮಾತೆ ಸಧ್ಯ ಪಾರಘಾಟದಲ್ಲಿ ಬಂದು ಇರುತ್ತಿದ್ದಾಳೆಂದು ಉಲ್ಲೇಖವನ್ನು ಅವರು ಮಾಡಿದ್ದಾರೆ. ಪ್ರತಾಪಗಡದ ಭವಾನಿಯ ದೇವಾಲಯವು ಹೊಸದಾಗಿ ನಿರ್ಮಿತವಾಗಿದ್ದೆಂದು ಅದನ್ನು ಅನುಲಕ್ಷಿಸಿ ಆ ಉಲ್ಲೇಖವು ಬಂದಿದೆ. ಹರಕೆ ಪೂರೈಸುವ ಸಂದರ್ಭದಲ್ಲಿ ಪ್ರಾರ್ಥನೆ ಮಾಡುವ ರೂಢಿ. ಆಮೇಲೆ ದೇವಿಯಿಂದ ಏನನ್ನಾದರೂ ಬೇಡಿರಬೇಕು. ಸಮರ್ಥರಂಥ ವಿರಕ್ತ ಪುರುಷ

ರಿಗೆ ಬೇಡುವಂಥದ್ದು ಏನಿರಬೇಕು ? ಅವರ ಸ್ವಂತಕ್ಕೆ ಯಾವುದೂ ಬೇಕಾಗಿರಲಿಲ್ಲ. ಆದರೂ ಅವರು ಭವಾನಿಯ ಹತ್ತಿರ ಏನನ್ನೋ ಬೇಡುತ್ತಲಿದ್ದಾರೆ. ಅದನ್ನು ಬೇಡುತ್ತಿರುವಾಗ ಅವರ ಅಂತರ್ಯದ ಬಯಕೆ ವ್ಯಕ್ತವಾಗಿದೆ. "ಒಂದರ ಬೇಡಿಕೆಯೀಗ" ಅಂದರೆ ಹೆಚ್ಚಿನದೇನೂ ಇಚ್ಛೆಯಿಲ್ಲ. ಇದ್ದರೂ ಅದು ಒಂದೇ, ಅದನ್ನೇ ನೀನು ಪೂರ್ಣಮಾಡುವಿ, "ನನಗಾಗಿ ಕೊಡು" ಎಂಬ ಪ್ರಸ್ತಾವನೆಯನ್ನು ಮಾಡಿ ಸಮರ್ಥರು ಹೇಳುತ್ತಾರೆ. "ನೀನು ನಿನ್ನ ಈ ರಾಜನನು ರಕ್ಷಿಸು, ಶೀಘ್ರ ನಮ್ಮತ್ತ ಈಕ್ಷಿಸು !" ಈ ನಿನ್ನವನೇ ಆದ ರಾಜನು, ಅವನನ್ನು ಆದಷ್ಟು ಬೇಗ ನಮ್ಮ ಕಣ್ಣು ನೋಡುತ್ತಿರುವುದರಲ್ಲಿಯೇ ದೊಡ್ಡವನನ್ನಾಗಿ ಮಾಡು ಎಂಬ ಬೇಡಿಕೆಯನ್ನು ಸಮರ್ಥರು ಇಟ್ಟಿದ್ದಾರೆ.

ನಿಜಸ್ಥಿತಿಯೆಂದರೆ ಈ ಸಮಯದಲ್ಲಿ ಶಿವಾಜಿ ಮಹಾರಾಜರು ಸಿಂಹಾಸನಾಧೀಶ್ವರರಾಗಿದ್ದರು. ಆದರೂ ಕೂಡ ಸಮರ್ಥರು ಈ ಪ್ರಾರ್ಥನೆಯನ್ನು ಮಾಡಿದ್ದಾರೆ. ಸ್ವರಾಜ್ಯವು ಮಹಾರಾಷ್ಟ್ರದಲ್ಲಿ ಸ್ಥಾಪನೆಯಾಯಿತು. ಅದರ ಒಂದಿಷ್ಟು ವಿಸ್ತಾರವು ಮಹಾರಾಷ್ಟ್ರದ ಹೊರಗೂ ತಲುಪಿತು. ಆದರೆ ಸಮರ್ಥರ ಕಣ್ಣೆದುರು "ಹಿಂದುಸ್ಥಾನ ಬಲಿಷ್ಠವಾಯಿತು" ಈ ಚಿತ್ರ ನಿಂತಿದೆ. ಎಂತಲೇ ತುಳಜಾಭವಾನಿಯ ಪ್ರಾರ್ಥನೆಯನ್ನು ಮಾಡಿದರು. "ನೀನು ನಿನ್ನ ಈ ರಾಜನನು ರಕ್ಷಿಸು." ಮುಂದೆ ಅದು ಬೇಗ ಆಗಲಿ, ನಮ್ಮ ಕಣ್ಣುಗಳು ನೋಡುವಂತಾಗಲೆಂದು ಹೇಳುತ್ತಾರೆ. ಈ ಸಮಯದಲ್ಲಿ ಸಮರ್ಥರು ಎಪ್ಪತ್ತು ವರ್ಷದವರಾಗಿದ್ದರು. ಆಯುಷ್ಯವು ಹೆಚ್ಚಿಗೆ ಉಳಿಯಲಿಲ್ಲ ಎಂಬುದು ಅವರಿಗೆ ತಿಳಿದಿದೆ. ಪ್ರತಾಪಗಡದ ಭವಾನಿಯ ದರ್ಶನಕ್ಕೆ ಹೋಗುವ ಸಮಯ ಕೇವಲ ಕೌಟುಂಬಿಕ ಅಥವಾ ಮನೆತನದ ಎಂದರೆ ಅಣ್ಣನ ಉಳಿದ ಒಂದು ಹರಕೆಯನ್ನು ಪೂರೈಸುವದಿತ್ತು. ಆದರೆ ಅದನ್ನು ಪೂರೈಸುವ ಕಾಲಕ್ಕೆ ಸಮರ್ಥರ ಮನದಲ್ಲಿ ಬಂದ ಬಯಕೆ ಕೇವಲ ವ್ಯಾಪಕವಾದ ರಾಷ್ಟ್ರೀಯ ಹಿತಕ್ಕೆ ಸಂಬಂಧಿಸಿದ್ದಾಗಿತ್ತು. ಮಹಾರಾಷ್ಟ್ರದಲ್ಲಿ ಸ್ಥಾಪಿತವಾದ ಸ್ವರಾಜ್ಯವು ಹೆಚ್ಚಿಗೆ ದೊಡ್ಡದಾಗಲಿ ಎಂದೇ ಇತ್ತು. ಅವರ ವಿರಾಗಿ ಮನಸ್ಸು ಆ ವಯಸ್ಸಿನಲ್ಲಿ ಯಾವ ಚಿತ್ರಗಳನ್ನು ಕಲ್ಪಿಸಿಕೊಳ್ಳುತ್ತಲಿತ್ತೊ ಅದರ ಸಾಕ್ಷಿಯನ್ನು ದೃಢಪಡಿಸುವ ಈ ಉದ್ಗಾರಗಳಿವೆ.

ಸಮರ್ಥರು ಭವಾನಿಯ ಚರಣಗಳಲ್ಲಿ ಈ ಪ್ರಾರ್ಥನೆಯನ್ನೇನೋ ಸಲ್ಲಿಸಿದರು. ಆದರೆ ದೈವದ ಮನಸ್ಸಿನಲ್ಲಿ ಬೇರೆಯಿತ್ತು.

ಸಮರ್ಥರ ಈ ಪ್ರಾರ್ಥನೆಯ ಬಳಿಕ ಶಿವಛತ್ರಪತಿಯುವರು ಬಹಳ ದಿನ ಬದುಕಲಿಲ್ಲ. ಅದು ನಮ್ಮ ಗಮನಕ್ಕೆ ಬಂದ ಬಳಿಕ ಆ ಉದ್ಗಾರಗಳನ್ನು ಕಣ್ಣೆದುರು ತರುವ ಸಮಯ ನಮ್ಮ ಮನಸ್ಸಿನಲ್ಲಿ ಎಲ್ಲಿಯೋ ಒಂದು ಕಾರುಣ್ಯದ ಸ್ಪರ್ಶವಾಗಿ ಹೋಗುತ್ತದೆ. ಶಿವ ಪ್ರಭುವಿನ ದೇಹಾವಸಾನದ ವಾರ್ತೆ ಕಿವಿಗೆ ಬಿದ್ದ ಮೇಲೆ ಸಮರ್ಥರು ಆ ಕಾರುಣ್ಯದ ಪ್ರತ್ಯಕ್ಷ ಅನುಭವವನ್ನು ಪಡೆಯಬೇಕಾಯಿತು. ಐಹಿಕ ಜೀವನದಲ್ಲಿ ಒಂದಿಷ್ಟು ಘಟನೆಗಳಿಂದ ಹೃದಯ ದುಃಖದಿಂದ ತುಂಬಿ ಹೋಗುವುದು. ಅಂತಃಕರಣದಲ್ಲಿ ಅಸಹ್ಯವೇದನೆಯು ಆವರಿಸುವುದು. ಈ ಅನುಭವವನ್ನು ಇಷ್ಟು ದೀರ್ಘವಾದ

ಆಯುಷ್ಯದಲ್ಲಿಯೇ ಸಮರ್ಥರು ಎಂದೂ ಪಡೆದಿರಲಿಲ್ಲ. ಇಂದು ಆ ಕ್ಷಣವು ಒದಗಿತೆಂದು ತಿಳಿಯಬೇಕು. ಛತ್ರಪತಿಯವರ ನಿಧನದ ಆ ವಾರ್ತೆಯನ್ನು ಕೇಳಿದ ಮೇಲೆ ಸಮರ್ಥರು ಮಾನಸಿಕವಾಗಿ ಕುಸಿದಂತಾದರು. "ಇದು ಈಶ್ವರೇಚ್ಛೆ" ಇಷ್ಟೇ ಉದ್ಗಾರವನ್ನು ತೆಗೆದು, ಅವರು ತಮ್ಮ ನಿವಾಸದಲ್ಲಿ ಹೋಗಿ ಕುಳಿತರು. ಆ ಇಡೀ ತಿಂಗಳು ಹೊರಬರಲಿಲ್ಲ. ವೃದ್ಧಾಪ್ಯದ ಪರಿಣಾಮದಿಂದಾಗಲಿ ಇಲ್ಲವೆ ಶೋಕದ ಅತೀ ಆವೇಗದಿಂದಾಗಲಿ ಸಮರ್ಥರ ಆಮೇಲಿನ ನಡವಳಿಕೆಯಲ್ಲಿ ಚಿತ್ತಚಾಂಚಲ್ಯ ಉಂಟಾಯಿತು. ಅವರು ಸಿಡುಕಿನವರಾಗಿ ನಡೆಯತೊಡಗಿದರು. ಸಿಟ್ಟಿನ ಭರದಲ್ಲಿ ಕೆಲಕೆಲವರ ಮೈಮೇಲೆ ಹೋಗತೊಡಗಿದರು. ಇಂಥ ಉಲ್ಲೇಖಗಳು ಹಳೆಯ ಚರಿತ್ರೆ ಗ್ರಂಥಗಳಲ್ಲಿ ಬಂದಿರುತ್ತವೆ. ಕೆಲವು ಸಮಯ ಕಳೆದ ಬಳಿಕ ಅವರು ತಮ್ಮ ಮನಸ್ಸನ್ನು ನಿಯಂತ್ರಿಸಿಕೊಂಡರು ಬಹಳಷ್ಟು ಶಾಂತರಾದರು.

ಆದರೆ ಸಮರ್ಥರ ಮನಸ್ಸು ನಿಧಾನವಾಗಿ ಸ್ಥಿರವಾಗುತ್ತ ಬಂದಿತ್ತು. ಆದರೂ ಅವರ ಹಣೆಬರಹದ ಭೋಗವು ಇನ್ನೂ ಉಳಿದಿತ್ತು. ಶಿವರಾಯರ ಬಳಿಕ ಸಂಭಾಜಿರಾಜೆ ಛತ್ರಪತಿಯಾದರು. ಛತ್ರಪತಿಗಳ ಕುಟುಂಬದಲ್ಲಿ ಗೃಹಕಲಹದ ಬೆಂಕಿ ಬಹಳ ಕಾಲ ಹೊಗೆಯಾಡುತ್ತಲಿತ್ತು. ಅದರ ಉಗ್ರಶಾಖ ಶಿವರಾಯರಿಗೂ ಅವರ ಕೊನೆ ಕೊನೆಯ ಆಯುಷ್ಯದಲ್ಲಿ ತಾಕಿತ್ತು. ಅವರು ಈ ಜಗತ್ತನ್ನು ಬಿಟ್ಟುಹೋದ ಬಳಿಕ ಆ ಕಲಹದ ಬೆಂಕಿ ಮತ್ತೂ ಪ್ರಜ್ವಲಿಸಿತು.ಅದರಲ್ಲಿ ಮೊದಲಿಗೆ ಬಲಿಯಾದವಳು ರಾಜಾರಾಮ ಮಹಾರಾಜರ ಮಾತೋಶ್ರೀ ಸೋಯರಾಬಾಯಿ. ಅನಂತರ ಅಣ್ಣಾಜಿ ದತ್ತೋ, ಬಾಳಾಜಿ ಆವಜಿ ಚಿಟಣೀಸ ಇಂಥ ಕಾರ್ಯಪಟು ಪುರುಷರಲ್ಲಿ ಕೆಲವರನ್ನು ಆನೆಯ ಕಾಲಲ್ಲಿ ಹಾಕಿ ತುಳಿಸಿದರು. ಕೆಲವರನ್ನು ಧಗಧಗಿಸುವ ಸುಣ್ಣದ ಭಟ್ಟಿಯಲ್ಲಿ ಚೆಲ್ಲಿಸಿದರು. ಇಂಥ ವಾರ್ತೆಗಳು ಕಿವಿಗೆ ಬಿದ್ದ ಬಳಿಕ ಸಮರ್ಥರ ಅಂತಃಕರಣವು ಭಗ್ನವಾಯಿತು. ಇಷ್ಟು ಕಷ್ಟಪಟ್ಟು ಶಿವರಾಯರು ಕಟ್ಟಿದ ಈ ಹಿಂದೂ ಸ್ವರಾಜ್ಯದ ಕಟ್ಟಡಕ್ಕೆ ಬಿರುಕುಬಿಟ್ಟು ಧಕ್ಕೆಯಾಗುತ್ತಲಿದೆ. ಇದನ್ನು ಕಂಡು ಸಮರ್ಥರ ಹೃದಯವು ಭಯದಿಂದ ಕುಪಿತವಾಯಿತು. ಕೇವಲ ನಲವತ್ತರ ಹುಮ್ಮಸ್ಸಿನಲ್ಲಿರುವಾಗ ಇಪ್ಪತ್ತರ ಶಿವಾಜಿರಾಜೆಯವರನ್ನು ಕಂಡಿದ್ದರು. ಆ ವೇಳೆಯಲ್ಲಿ ಅವರ ಮನಸ್ಸಿಗೆ ಎಷ್ಟು ಆಶ್ವಾಸನೆಯನ್ನು ಕೊಟ್ಟಿದ್ದರು ! ಆ ಆಶ್ವಾಸನೆಯ ಬಲದ ಮೇಲೆ ಸಮರ್ಥರು ತಮ್ಮ ಮಠಗಳ ಮತ್ತು ಸಂಪ್ರದಾಯಗಳ ಸಂಸಾರಗಳನ್ನು ನಿರ್ಮಿಸಿದ್ದರು. ಇಂದು ಎಪ್ಪತ್ತೆರಡು ವರ್ಷಗಳ ವಯಸ್ಸಾದ ಮೇಲೆ ಅವರು ಅದೇ ಇಪ್ಪತ್ತನ್ನು ದಾಟಿದ ಸಂಭಾಜಿರಾಜೆಯನ್ನು ನೋಡುತ್ತಿದ್ದರು. ಆದರೆ ಅದು, ಮನಸ್ಸಿನಲ್ಲಿ ಎಷ್ಟೋ ಚಿಂತೆಗಳನ್ನು ನಿರ್ಮಿಸಿತ್ತು. ವ್ಯಕ್ತಿಗತ ಸೇಡಿನ ಭಾವನೆಯಿಂದ ಅಂಧನಾದ ಈ ತರುಣ ಅನನುಭವಿ ಛತ್ರಪತಿಗೆ ನಾಲ್ಕು ವಿವೇಕದ ಮಾತುಗಳನ್ನು ಹೇಳಬೇಕೆಂದು ಸಮರ್ಥರಿಗೆ ಅನ್ನಿಸಿತು.

ಆದರೆ ಸಂಭಾಜಿಗೆ ಏನಾದರೂ ಹೇಳಬೇಕಾದ ಅಧಿಕಾರ ತಮಗಿದೆಯೇ ಎಂಬ ಸಂದೇಹವು ಸಮರ್ಥರ ಮನದಲ್ಲಿ ಮೂಡಿಹೋಗಿದೆ. ಹುಂಬತನದಲ್ಲಿ ನಡೆಯುವ

ಸಂಭಾಜಿಗೆ ಏನಾದರೂ ಸಂಸ್ಕಾರ ದೊರೆಯಲಿ ಎಂದು ಶಿವರಾಯರು ಅವನನ್ನು ಕೆಲವು ದಿನ ಸಮರ್ಥರ ಹತ್ತಿರ ಇಟ್ಟಿದ್ದರು. ಆದರೆ ಅದೇನೂ ಉಪಯೋಗವಾಗಲಿಲ್ಲ. ಆಮೇಲೆ ಇದು ಕೆಲವು ದಿನಗಳಲ್ಲಿ ಗಮನಕ್ಕೆ ಬಂದಿತ್ತು. ಈಗ ಅವರು ರಾಜ್ಯದ ಸೂತ್ರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡ ಬಳಿಕಂತೂ ಅದು ಹೆಚ್ಚಾಗಿ ಸ್ಪಷ್ಟ ವಾಗಿತ್ತು. ಇದೆಲ್ಲವು ಕಣ್ಣೆದುರು ನಿಂತಾಗ ಸಮರ್ಥರ ಜರ್ಜರಿತ ಮನಸ್ಸಿನ ಮೇಲೆ ಸಂದೇಹವು ಆವರಿಸಿಕೊಂಡಿರಬೇಕು. ನಿರಾಶೆಯ ಎಷ್ಟೋ ಭಾರ ಬಿದ್ದಿರಬೇಕು. "ಉದಾಸೀನ ಈ ಕಾಲವನು ಹೇಗೆ ಕಳೆಯಲಿ !" ಎಂದು ರಘುಪತಿಯನ್ನುದ್ದೇಶಿಸಿ ಐವತ್ತು, ಐವತ್ತೈದು ವರ್ಷಗಳ ಹಿಂದೆ ಬರೆದ ಒಂದು ಕರುಣಾಸ್ತೋತ್ರದಲ್ಲಿ ಅವರು ಹೇಳಿದ್ದರು. ಅದೇ ಅನುಭವವನ್ನು ಇಂದು ಮೃತ್ಯುವಿನ ಮುಖದಲ್ಲಿದ್ದಾಗ ಅವರು ಪಡೆಯುತ್ತಿದ್ದರು. ಅವರ ಮನಸ್ಸಿನಲ್ಲಿ ಇಂದು ಕೂಡ ಅಂಥದ್ದೇ ಉದಾಸೀನತೆ ವ್ಯಾಪಿಸಿಕೊಂಡಿತ್ತು. ಅದರ ಸಂಬಂಧ ಮಾತ್ರ ಪಾರಮಾರ್ಥಿಕ ಜೀವನಕ್ಕಾಗಿರಲಿಲ್ಲ. ಆದರೆ ಐಹಿಕ ಜೀವನದಲ್ಲಿಯ ಮಾನವನ ಅಚಲ ದೈವಕ್ಕಾಗಿ ಇತ್ತು. ಕೊನೆಗೆ ಹತ್ತಿರದ ಜನರಲ್ಲಿ ಯಾರೋ ಸೂಚಿಸಿದರು. ಸಂಭಾಜಿ ಮಹಾರಾಜರಿಗೆ ಸಮರ್ಥರು ಪತ್ರವನ್ನು ಬರೆದರು. ಅದರಲ್ಲಿ ಕೇವಲ ಇಪ್ಪತ್ತೊಂದು ಓವಿಗಳಿವೆ. ಯಾವನೋ ಚಿಂತೆಗೀಡಾದ ಹಿರಿಯ ಮನುಷ್ಯ, ತನ್ನ ತಲೆಯ ಮೇಲೆ ಬಿದ್ದ ಹೊಣೆಗಾರಿಕೆಯನ್ನು ಅರಿಯಲಾರದ ತರುಣನಿಗೆ ತಿಳಿಹೇಳುವ ರೀತಿಯಲ್ಲಿ ಬರೆಯುವಂತೆ ಈ ಪತ್ರವಿದೆ.

ಸಂಭಾಜಿ ಪ್ರಕೃತಿಯಿಂದ ಉಗ್ರರಾಗಿದ್ದರು. ಮನೆಯ ಹಾಗೂ ಹೊರಗಿನ ಅನೇಕ ಜನರು ತಮ್ಮ ವಿರೋಧವಾಗಿದ್ದಾರೆಂಬ ಭಾವನೆಯಿಂದ ಆ ಉಗ್ರತೆಗೆ ಇನ್ನೂ ಪ್ರಖರತೆ ಬಂದಿತ್ತು. ಇದು ಸಮರ್ಥರ ಗಮನಕ್ಕೆ ಬಂದಿದೆ. "ಅಖಂಡ ಸಾವಧಾನ ವಾಗಿರಬೇಕು" "ಏಕಾಂತದಲ್ಲಿ ವಿಚಾರ ಮಾಡಬೇಕು." ಎಂದು ಪತ್ರದ ಪ್ರಾರಂಭ ದಲ್ಲಿ ಹೇಳಿದ ಬಳಿಕ "ಹೇಗೂ ಉಗ್ರಸ್ಥಿತಿ ತ್ಯಜಿಸು ! ಸ್ವಲ್ಪ ಸೌಮ್ಯತೆ ಧರಿಸು !" ಇಂಥ ಸೂಚನೆಯನ್ನು ಸಮರ್ಥರು ಕೊಟ್ಟಿದ್ದಾರೆ. ಸಿಟ್ಟಿನ ಭರದಲ್ಲಿ ಕಾರ್ಯಕರ್ತರ ಆಹುತಿಯಾಗುತ್ತಲಿದೆ. ಹೀಗಾಗುತ್ತಿದ್ದರೆ ನಾಳೆ ಸ್ವರಾಜ್ಯದ ಆಡಳಿತವನ್ನು ಯಾರು ನೋಡುವರು, ಅತ್ತ ಗಮನ ಸೆಳೆಯುವುದಕ್ಕೆ "ಕ್ಷಮಿಸುವೆ ಹಿಂದಿನ ಅಪರಾಧವನು ! ರಕ್ಷಿಸಿರೆ ಆಡಳಿತ ಜನರನು !!" ಎಂದವರು ಮುಂದೆ ಹೇಳಿದ್ದಾರೆ. ಎಲ್ಲ ಪತ್ರಗಳು ಹೀಗೆ ವಿಧಾಯಕ ಸೂಚನೆ ಮಾಡುವಂತಿದೆ. ಸಂಭಾಜಿಯವರ ಅವಿವೇಕದ ವರ್ತನೆ ಗಳು ಕಣ್ಣೆದುರು ಸ್ಪಷ್ಟವಾಗಿ ಕಾಣುತ್ತಿರುವುದನ್ನು ನೋಡಿಯೂ ಅವುಗಳ ವಿಷಯ ವಾಗಿ ಸಮರ್ಥರು ಅಧಿಕಾರದ ಧ್ವನಿಯಿಂದ ತಮ್ಮ ಪತ್ರದಲ್ಲಿ ಬರೆದಿಲ್ಲ. "ಜನ ಪ್ರವಾಹದ ಜತೆ ಸಾಗು ! ಅಂದರೆ ನಿರ್ವಹಿಸುವುದು ಕಾರ್ಯಭಾಗ !" "ಒಲಿಸು ಜನರ ಮನಸು ! ಬೇಗ ಪೂರೈಸುವರು ಕೆಲಸ !" "ಬಹಳ ಜನರನು ಸೇರಿಸು ! ಒಂದು ವಿಚಾರ ತುಂಬಿಸು !" ಇಂಥ ಅನೇಕ ಉಪದೇಶಪರ ಸೂತ್ರಗಳು ಈ ಚಿಕ್ಕ ಪತ್ರದಲ್ಲಿ ಹರಡಿಕೊಂಡಿರುತ್ತವೆ. ರಾಜ್ಯವನ್ನಾಳುವ ಪುರುಷರು ಏನನ್ನು ಮಾಡ ಬೇಕು ಮತ್ತು ಹೇಗೆ ವರ್ತಿಸಬೇಕು ಈ ವಿಷಯಗಳ ಬಗೆಗೆ ಇಲ್ಲಿ ಸಮರ್ಥರ ವಿಚಾರ

ಗಳು ಬಂದಿರುತ್ತವೆ. ಶಿವರಾಯರ ಜೀವನದಲ್ಲಿ ಇವೆಲ್ಲ ಪ್ರತ್ಯಕ್ಷವಾಗಿ ಬಂದಿವೆ. ಅವರ ಆದರ್ಶವು ಅನುಕರಣೀಯವಾಗಿದೆ. "ಶಿವರಾಜರನ್ನು ಸ್ಮರಿಸಿರಿ ! ಜೀವ ತೃಣಮಾತ್ರ ತಿಳಿಯಿರಿ !" ಎಂದು ಹೇಳಿ ಸಮರ್ಥರು ಮುಂದೆ ಬರೆಯುತ್ತಾರೆ. "ಸ್ಮರಿಸಿರಿ ಶಿವರಾಜರ ರೂಪವನು ! ಸ್ಮರಿಸಿರಿ ಶಿವರಾಜರ ಪ್ರತಾಪವನು ! ಶಿವರಾಜರ ಸಾಕ್ಷೇಪವನು ! ಭೂಮಂಡಲದಲಿ ॥ ಶಿವರಾಜರ ಹಾಗೆ ನುಡಿ ! ಶಿವರಾಜರ ಹಾಗೆ ನಡೆ ! ಶಿವರಾಜರ ಸ್ನೇಹದ ಬಗೆ ! ಅವನ್ನು ಸ್ಮರಿಸಿರಿ ॥" ಇವರಲ್ಲಿ ಹೆಚ್ಚಿಗೇನು ಹೇಳಲಾಗುವುದು ? ಸಮಾರೋಪದ ಎರಡು ಓವಿಗಳನ್ನು ಬರೆದು ಶಿವಪುತ್ರ ಸಂಭಾಜಿಗೆ ಬರೆದ ಆ ಪತ್ರವನ್ನು ಸಮರ್ಥರು ಪೂರ್ತಿಮಾಡಿದ್ದಾರೆ.

ಛತ್ರಪತಿ ಶಿವರಾಯರು ಸಮರ್ಥರನ್ನು ಗುರುಸ್ಥಾನದಲ್ಲಿ ಮನ್ನಿಸುತ್ತಿದ್ದರು. ಒಂದೇ ಕ್ಷಣದಲ್ಲಿ ತಮ್ಮ ಇಡೀ ರಾಜ್ಯವನ್ನು ಅವರ ಜೋಳಿಗೆಯಲ್ಲಿ ಹಾಕಿದ್ದರು. ಆ ಶಿವರಾಯರ ವಿಷಯವಾಗಿ ಸಮರ್ಥರ ಮನಸ್ಸಿನಲ್ಲಿ ಎಂಥ ಉತ್ಕಟ ಆದರ ಭಾವವಿತ್ತು ಎಂಬುದರ ದರ್ಶನವು ಈ ಪತ್ರದಿಂದ ಆಗುತ್ತದೆ. ಶಿವರಾಯರ ಅಸಾಮಾನ್ಯ ಯೋಗ್ಯತೆಯನ್ನು ಆ ಕಾಲದಲ್ಲಿಯ ಮತ್ತೆ ಬೇರೆ ಯಾವ ಸತ್ಪುರುಷನು ಇಲ್ಲವೆ ವಿದ್ವಾಂಸ ಪುರುಷನು ಇಂಥ ಮಟ್ಟದಲ್ಲಿ ಅರಿತಿದ್ದು ಕಂಡುಬರುವುದಿಲ್ಲ. ಆದಕ್ಕಾಗಿ ಮನಸ್ಸಿನಲ್ಲಿರಬೇಕಾದ ಐಹಿಕರ ಜಾಗ್ರತೆಯ ಬಗೆಗೆ ನಮ್ಮ ದೇಶದಲ್ಲಿ ಅಂಥ ಅರಿವು ಮೂಡಿರಲಿಲ್ಲ. ಸಮರ್ಥರು ಸಂಭಾಜಿ ಮಹಾರಾಜರಿಗೆ ಈ ಪತ್ರವನ್ನು ಶಕೆ 1603ರ ಪೌಷ್ಯ ತಿಂಗಳಿನಲ್ಲಿ ಬರೆದರು. ಆ ಬಳಿಕ ಹೆಚ್ಚು ಕಡಿಮೆ ಒಂದು ತಿಂಗಳು ಸಮರ್ಥರ ವಾಸ್ತವ್ಯವು ಈ ಭೂಮಿಯ ಮೇಲಿತ್ತು. ಅವರ ಕೈಯಿಂದ ಬರೆಯಲ್ಪಟ್ಟ ಲೇಖನ ಇದೇ ಕೊನೆಯದಾಗಿರಬೇಕು.

ಪ್ರವೃತ್ತಿ ಮಾರ್ಗದಿಂದ ಅನುಸರಿಸಿದ ಯಾವ ಒಂದು ಐಹಿಕದಲ್ಲಿಯ ಉಪಾಧಿಯನ್ನು ಮೂವತ್ತಾರು ವರ್ಷಗಳವರೆಗೆ ಸಮರ್ಥರು ಪಡೆದುಕೊಂಡಿದ್ದರೋ, ಅದು ಅವರು ಸಂಭಾಜಿಮಹಾರಾಜರಿಗೆ ಬರೆದ ಆ ಪತ್ರದಿಂದ ಸಮಾಪ್ತವಾಗಿದೆ. ಆಮೇಲೆ ಅವರು ತಮ್ಮ ಚಿತ್ತವನ್ನು ಕೇವಲ ಶ್ರೀರಾಮನ ಚರಣಗಳಿಗೆ ಅರ್ಪಿಸಿದ್ದಾರೆ.

ಶಕೆ 1603ರ ರಾಮನವಮಿಯ ಉತ್ಸವಕ್ಕಾಗಿ ಸಮರ್ಥರು ಚಾಫಳಕ್ಕೆ ಹೋಗಿದ್ದರು. ಅದು ಅವರ ಅಲ್ಲಿಯ ಕೊನೆಯ ಭೇಟಿ. ಸಮರ್ಥರು ಗತಿಸಿದ ಬಳಿಕ ಅವರ ಸಂಪ್ರದಾಯದಲ್ಲಿಯ ಅಧಿಕಾರಕ್ಕಾಗಿ ಉದ್ಧವ ಗೋಸಾವಿ ಹಾಗೂ ದಿವಾಕರ ಗೋಸಾವಿ ಈ ಶಿಷ್ಯರಲ್ಲಿಯೂ ದೊಡ್ಡ ವಾದ ಹುಟ್ಟಿತು. ಕೊನೆಗೆ ಆ ಜಗಳವು ಛತ್ರಪತಿಯವರ ದರಬಾರದವರೆಗೆ ಹೋಯಿತು. ಮುಂದೆ ಸಂಪ್ರದಾಯದಲ್ಲಿ ಹೀಗೆ ಬಿರುಕು ಬಿಡುವ ಸಂಕೇತವು ಕೊನೆಯ ವರ್ಷದಲ್ಲಿ ಸಮರ್ಥರಿಗೆ ತಿಳಿದಿತ್ತು. ಚಾಫಳದಲ್ಲಿಯ ರಾಮಮಂದಿರದ ವ್ಯವಸ್ಥೆಯ ಸಂದರ್ಭದಲ್ಲಿ ಸ್ಥಾನಿಕ ಮಂಡಳಿಯಲ್ಲಿ ಯಾವುದೊ ತಂಟೆ ಹುಟ್ಟಿಕೊಂಡಿತ್ತು. ಕೊನೆಗೆ ಸಮರ್ಥರು ಅತ್ತ ಗಮನ ಕೊಡಬೇಕಾಯಿತು. ಲೌಕಿಕ ವ್ಯವಹಾರ ಸಂಬಂಧದ ಇಂಥ ಪ್ರಸಂಗಗಳಲ್ಲಿ ಅವರು ತಮ್ಮ ಮನಸ್ಸನ್ನು ಆಮೇಲೆ ತೆಗೆದು ಹಾಕಿದ್ದಾರೆ. ಚಾಫಳದಲ್ಲಿ ರಾಮನವಮಿಯ

ಉತ್ಸವವನ್ನು ಪೂರೈಸಿ ಸಜ್ಜನಗಡಕ್ಕೆ ಮರಳಿ ಬಂದ ಬಳಿಕ, ಬರುಬರುತ್ತ ಶಕ್ತಿ ಅಳಿಯುತ್ತ ಹೋಯಿತು. ಕೊನೆಯ ಆರೇಳು ತಿಂಗಳುಗಳಲ್ಲಿ ಅವರು ವಿಶೇಷ ಹೊರಗೆ ಹೋಗುತ್ತಿರಲಿಲ್ಲ. ಯಾರನ್ನೂ ಹೆಚ್ಚಾಗಿ ಭೇಟಿಯಾಗುತ್ತಿರಲಿಲ್ಲ. ಶಿವಾಜಿ ಮಹಾರಾಜರು ಅವರಿಗೆ ಕೊಟ್ಟ ಹಿತ್ತಾಳೆಯ ಖುರಪುಟಗಳ ಪಲ್ಲಂಗದ ಮೇಲೆ, ತಮ್ಮ ಕೋಣೆಯಲ್ಲಿ ಮೂಕರಾಗಿ ಕೂಡುತ್ತಿದ್ದರು.

ಉದ್ಧವಗೋಸಾವಿ ಮತ್ತು ಅಕ್ಕಾ ಇವರು ಮಠದ ಮುಂದಿನ ವ್ಯವಸ್ಥೆಯ ಬಗೆಗೆ ಏನಾದರೂ ಯೋಜನೆಯನ್ನು ಮಾಡಿಡಬೇಕೆಂದು ಸಮರ್ಥರಿಗೆ ಅನೇಕ ಸಲ ಸೂಚಿಸಿ ನೋಡಿದ್ದಾರೆ. ಆದರೆ ಅವರ ಹೇಳಿಕೆಯನ್ನು ಸಮರ್ಥರು ಮನಸ್ಸಿನಲ್ಲಿ ತೆಗೆದುಕೊಂಡಿಲ್ಲ. ಯಾರಾದರೂ ಒಬ್ಬ ಶಿಷ್ಯನ ಆಜ್ಞೆಯಂತೆ ಎಲ್ಲರೂ ನಡೆಯ ಬೇಕೆಂಬ ನಿಯಮವನ್ನು ಹಾಕಿಕೊಡಿರಿ ಎಂಬ ಸೂಚನೆಯನ್ನು ಅಕ್ಕಾ ಮಾಡಿದ್ದಳು. ಬಹಳ ಆಗ್ರಹಪಡಿಸಿದ ಬಳಿಕ "ಶಿಷ್ಯ ಮಂಡಳಿಯ ಮುಖಾಂತರ ಸಂಪ್ರದಾಯವು ಬೆಳೆದಿದೆ. ಅವರಲ್ಲಿ ಯಾರು ಸೇವೆ ಮಾಡುವರೊ, ಅವರ ಮೇಲೆ ದೇವರು ಕೃಪೆ ಮಾಡುವನು" ಎಂದು ಸಮರ್ಥರು ಒಮ್ಮೆ ಹೇಳಿದರು. ಎಲ್ಲ ಭಾರವನ್ನು ಹೊರು ವಂಥ ಯಾವ ಅಧಿಕಾರಿ ಶಿಷ್ಯನು ಅವರಿಗೆ ಕಾಣಿಸಿರಲಿಕ್ಕಿಲ್ಲ. ಇಲ್ಲವೆ ಮನಸ್ಸಿನಲ್ಲಿಯ ಉದಾಸೀನತೆಯ ಕಾರಣದಿಂದ ಅವರು ಹಾಗೆ ಅಂದಿರಬೇಕು. ಎರಡೇ ತಿಂಗಳಲ್ಲಿ ಡೋಮಗಾವದಿಂದ ಕಲ್ಯಾಣರು ಭೇಟಿಗಾಗಿ ಬಂದಿದ್ದರು. ಅವರು ಸಮರ್ಥರ ಪಟ್ಟ ಶಿಷ್ಯರೆಂದು ಹೇಳಲಾಗುತ್ತಿತ್ತು. ಆದರೆ ಸಂಪ್ರದಾಯದ ಹೊಣೆಗಾರಿಕೆಯನ್ನು ಅವರ ಮೇಲೆ ಸಮರ್ಥರು ಒಪ್ಪಿಸಲಿಲ್ಲ. ಮತ್ತೆ ಯಾವಾಗಲೋ ಈ ವಿಷಯ ಹೊರಟಿರಬೇಕು. "ನಮ್ಮ ಪ್ರತಿಜ್ಞೆಯಿದು! ಶಿಷ್ಯರಿಂದ ಏನೂ ಬೇಡಲಾಗದು! ನನ್ನ ನಂತರ ಮುಂದೆ ತಾವೇ ದೇವರನು! ಭಜಿಸುತ್ತ ಹೋಗಿರಿ!!" ಎಂದು ಸಮರ್ಥರು ಹೇಳಿದ ವರ್ಣನೆಯನ್ನು ಭೀಮಸ್ವಾಮಿಯವರು ಮಾಡಿದ್ದಾರೆ. ಈ ಓವಿಯು ದಾಸಬೋಧೆಯಲ್ಲಿ ಹನ್ನೆರಡನೆಯ ದಶಕದ ಕೊನೆಯ ಸಮಾಸದಲ್ಲಿ ಬಂದಿದೆ. ಅದನ್ನು ಭೀಮಸ್ವಾಮಿಯವರು ಅದರಲ್ಲಿಂದ ತೆಗೆದುಕೊಂಡಿರಬೇಕಾದ ಸಂಭವವಿದೆ.

ಎರಡು ವರ್ಷಗಳ ಮೊದಲು ಚಂದಾವರಕ್ಕೆ ಹೋದಾಗ ಸಮರ್ಥರು ಅಲ್ಲಿಯ ಒಬ್ಬ ಶಿಲ್ಪಿಗೆ ಶ್ರೀರಾಮನ ಮೂರ್ತಿಯನ್ನು ತಯಾರಿಸಲು ಹೇಳಿದ್ದರು. ಆ ಮೂರ್ತಿಯು ಶಕೆ 1603ರ ಮಾಘವದ್ಯ ಪಂಚಮಿಗೆ ಸಜ್ಜನಗಡಕ್ಕೆ ಬಂದು ಮುಟ್ಟಿತು. ಮೂರ್ತಿಯ ಸ್ವರೂಪವು ತಮ್ಮ ಮನಸ್ಸಿನಂತಾಗಿರುವುದನ್ನು ಕಂಡು ಸಮರ್ಥರಿಗೆ ಅತೀವ ಸಮಾಧಾನವಾಯಿತು. ತಮ್ಮ ಕೋಣೆಯಲ್ಲಿ ಆ ಮೂರ್ತಿ ಯನ್ನು ಪ್ರತಿಷ್ಠಾಪಿಸಿ ಅವರು ಯಥಾಸಾಂಗವಾಗಿ ಅದರ ಪೂಜೆಯನ್ನು ಮಾಡಿಸಿ ದರು. ಅವರ ನಿರ್ಯಾಣಕ್ಕೆ ಇನ್ನು ಕೇವಲ ನಾಲ್ಕು ದಿನಗಳು ಉಳಿದಿದ್ದವು.

ಕೊನೆಯ ಎಂಟು, ಒಂಬತ್ತು ದಿವಸ ಸಮರ್ಥರು ಹೆಚ್ಚು ಕಡಿಮೆ ಅನ್ನ ನೀರು ತ್ಯಜಿಸಿದ್ದರು. ಮಾಘವದ್ಯ ನವಮಿಯ ದಿವಸ ಬೆಳಗಾಯಿತು. ಸಮರ್ಥರು ಶ್ರೀರಾಮನ ಮೂರ್ತಿಯತ್ತ ದೃಷ್ಟಿಯಿಟ್ಟು ಆಸನದ ಮೇಲೆ ಕುಳಿತರು. ಕೊನೆಯ

ಗಳಿಗೆ ಸಮೀಪಿಸುತ್ತಿರುವುದನ್ನು ತಿಳಿದು ಶಿಷ್ಯರ ಮನಸ್ಸಿನಲ್ಲಿಯ ಅಣೆಕಟ್ಟು ಒಡೆಯಿತು. ಅವರ ದುಃಖವನ್ನು ಕಂಡು ಸಮರ್ಥರು, "ಇಷ್ಟು ದಿವಸ ಅಧ್ಯಾತ್ಮವನ್ನು ಕೇಳಿ ಇದೇ ಫಲವೇನು ?" ಎಂದು ಕೇಳಿದರು. "ಈ ಸಗುಣ ಮೂರ್ತಿಯ ದರ್ಶನವು ಇನ್ನು ಮೇಲೆ ಆಗುವುದಿಲ್ಲ. ಅದಕ್ಕಾಗಿ ದುಃಖ" ಎಂದು ಅಕ್ಕಾ ಹೇಳಿದರು. "ನಿಜ ನನ್ನ ದೇಹ ಹೋಯಿತಲ್ಲ ! ಆದರೆ ನಾನಿರುವೆ ಜಗದಾಕಾರದಲ್ಲಿ !" ಎಂದು ಸಮರ್ಥರು ತಿಳಿ ಹೇಳಿದರು. ಅವರ ಆಧ್ಯಾತ್ಮಿಕ ವಿಚಾರ ಸರಣಿಗೆ ಶೋಭಿಸುವಂಥ ಉದ್ಗಾರವು ಅದಾಗಿತ್ತು. "ಶಿಷ್ಯರಿಗೆ ಇನ್ನು ಮಾರ್ಗದರ್ಶನವನ್ನು ಯಾರು ಮಾಡುವರು ?" ಎಂದು ಅಕ್ಕಾ ವಿಚಾರಿಸಿದರು. ಅದಕ್ಕೆ "ಆತ್ಮಾರಾಮದಾಸಬೋಧ ! ಸಿದ್ಧರೂಪದಲ್ಲಿ ನನ್ನ ಸ್ವರೂಪ ! ಇನ್ನು ಬೇಡ ಈ ಖೇದ ! ಭಕ್ತಜನರೆ !!" ಎಂದು ಸಮರ್ಥರು ಉತ್ತರಿಸಿದ್ದಾರೆ. ಆ ಬಳಿಕ ಇಪ್ಪತ್ತೊಂದು ಸಲ ಹರಹರ ಎಂದು, "ಶ್ರೀ ರಾಮ" ಎಂಬ ಉದ್ಗಾರವನ್ನು ತೆಗೆದು ಸಮರ್ಥರು ದೇಹ ಬಿಟ್ಟರು.

ಇದು ಶನಿವಾರ ದಿನಾಂಕ ಹನ್ನೆರಡು ಫೆಬ್ರವರಿ 1682, ಆ ದಿನ ಮಧ್ಯಾಹ್ನದ ಸಮಯವಾಗಿತ್ತು. ಶಕೆ 1603 ದುರ್ಮುಖ ನಾಮ ಸಂವತ್ಸರ ಮಾಘ ಕೃಷ್ಣ ನವಮಿಯ ತಿಥಿ ಆ ದಿನವಿತ್ತು. ಸಂಪ್ರದಾಯಕರಲ್ಲಿ ಈ ದಿನವನ್ನು ದಾಸನವಮಿ ಎಂದು ಪಾಲಿಸಲಾಗುತ್ತದೆ.

# ಜೀವಿತ ಕಾರ್ಯಗಳ ಫಲ

ಸಮರ್ಥರು ಇಹಲೋಕವನ್ನು ತ್ಯಜಿಸಿ ಫೆಬ್ರವರಿ 1982ಕ್ಕೆ ಮುನ್ನೂರು ವರ್ಷಗಳು ಪೂರ್ಣವಾದವು. ಮಹಾರಾಷ್ಟ್ರದ ಸಾಂಸ್ಕೃತಿಕ ಜೀವನಕ್ಕೆ ಆಕಾರ ಕೊಡುವ ಮತ್ತು ಜೀವನ ವಿಷಯಕ್ಕೆ ಒಂದಿಷ್ಟು ದೃಷ್ಟಿಕೋನ ನೀಡುವ ಕಾರ್ಯವನ್ನು ಮುಖ್ಯವಾಗಿ ಮಾಡಿದ ಐದು ಜನ ಪ್ರಮುಖ ಸಂತರಲ್ಲಿ ಸಮರ್ಥ ರಾಮದಾಸರು ಕೊನೆಯ ಸಂತರಾಗಿದ್ದರು. ಅನಂತರದ ಕಾಲದಲ್ಲಿ ಸಂತರು ಜನ್ಮತಾಳಲಿಲ್ಲವೆಂದಲ್ಲ. ಆ ಪರಂಪರೆಯು ನೇರವಾಗಿ ಇಂದಿನವರೆಗೂ ನಡೆದು ಬರುತ್ತಲಿದೆ. ಆದರೆ ಎಲ್ಲರೂ ಈ ಐವರಲ್ಲಿಯ ಯಾರ ಪರಂಪರೆಯಲ್ಲಿಯಾದರೂ ಇದ್ದಾರೆ. ಸ್ವತಂತ್ರ ಪ್ರಜ್ಞೆಯ, ವಿಚಾರಗಳ ಯಾವುದೇ ಹೊಸ ರೂಪ ತೋರುವ ಮತ್ತು ಸಮಾಜದ ಮೇಲೆ ಪ್ರಭಾವ ಬೀರುವ ಇಂಥ ಸಂತರು ಸಮರ್ಥರ ನಂತರ ಆಗಿದ್ದು ಕಂಡುಬರುವುದಿಲ್ಲ.

ಸಮರ್ಥರ ಮೊದಲು ನಾಲ್ವರೇ ಸಂತರು. ಮಹಾರಾಷ್ಟ್ರದಲ್ಲಿ ಸರ್ವಾಧಿಕ ಪ್ರಸಾರವಿದ್ದ ಮತ್ತು ಇಂದಿಗೂ ಕೂಡ ಇರುವ ಆ ವಾರಕರಿ ಪಂಥಕ್ಕೆ ಅವರ ಸಂಬಂಧವಿದೆ. ಬಹಿಣಾಬಾಯಿಯ ಅತಿಶಯ ಪ್ರಸಿದ್ಧವಾದ ಒಂದು ಅಭಂಗದಲ್ಲಿ "ಜ್ಞಾನದೇವರೇ ಅಡಿಪಾಯ ಹಾಕಿದರು" ಇಲ್ಲಿಂದ ಪ್ರಾರಂಭ ಮಾಡಿ "ತುಕಾ ಕಲಶವಾದರು" ಈ ಶಬ್ದಗಳಲ್ಲಿ ವಾರಕರಿ ಪಂಥದ ಕಥೆಯ ಸಫಲ ಹಾಗೂ ಸಂಪೂರ್ಣ ವರ್ಣನೆಯನ್ನು ಮಾಡಲಾಗಿದೆ. ಆ ನಾಮಾವಳಿಯಲ್ಲಿ ಸಮರ್ಥರ ಹೆಸರು ಸಮಾವೇಶವಾಗಿಲ್ಲ. ಆದರೆ ಒಟ್ಟಿಗೆ ವಿಚಾರ ಮಾಡಿದರೆ ಅದು ತಪ್ಪೆಂದು ತಿಳಿಯಲಾಗುವುದಿಲ್ಲ. "ಭಜನೆ ಮಾಡಿರಿ ಸಾವಕಾಶ" ಎಂದು ಆ ಅಭಂಗದ ಕೊನೆಯಲ್ಲಿದೆ. ಮನುಷ್ಯನ ಆಯುಷ್ಯದಲ್ಲಿಯ ಸಾರ್ಥಕತೆಯು ವಾರಕರಿ ಪಂಥದ ದೃಷ್ಟಿಯಿಂದ ಸಂಗ್ರಹಿತವಾದ ಬಗೆಗೆ ಆ ಸಮಾರೋಪ ಶಬ್ದಗಳಲ್ಲಿ ಸೂಚಿತವಾಗಿದೆ ಎಂದು ಹೇಳುವ ರೀತಿಯಲ್ಲಿದೆ. ಸಮರ್ಥರೇ ಭಕ್ತರಾಗಿದ್ದರು ಮತ್ತು ಪಾರಮಾರ್ಥಿಕ ಚಟುವಟಿಕೆಗಳ ಮಧ್ಯೆ ಭಕ್ತಿಯ ಸಾಧನೆಗೆ ವಿಶೇಷ ಮಹತ್ತ್ವವನ್ನು ಕೊಟ್ಟಿದ್ದರು. ಆದರೆ ಅವರ ಜೀವನದ ಸ್ವರೂಪವನ್ನು ಸಮಗ್ರವಾಗಿ ನೋಡಿದರೆ, ಕೇವಲ "ಸಾವಕಾಶ ಭಜನ" ಮಾಡುತ್ತ ಇರುವಂಥ ತಮ್ಮ ಜೀವನದ ಇಡಿ ಕರ್ತವ್ಯವನ್ನು ಅವರು ಒಪ್ಪುತ್ತಿರಲಿಲ್ಲ ಎಂಬುದು ಸಹಜ ಗಮನಕ್ಕೆ ಬರುತ್ತದೆ.

ಸಮರ್ಥರ ವ್ಯಕ್ತಿತ್ವವೇ ವಿಶೇಷವಾಗಿದೆ. ಅವರ ಜೀವನದ ಬಗೆಗಿನ ದೃಷ್ಟಿಕೋನವೇ ಬೇರೆ. ಅಲ್ಲದೆ ಅವರು ಆರಂಭದಿಂದ ಕೊನೆಯವರೆಗೆ ನಿವೃತ್ತಿಶೀಲ ಹಾಗೂ ಪರಮಾರ್ಥ ಪ್ರವಣರಾಗಿದ್ದರು. ಆದರೂ ಅವರ ಜೀವನದಲ್ಲಿ ಒಂದು ಮಹತ್ತ್ವದ ಪರಿವರ್ತನೆ ಒದಗಿ ಬಂದಿದೆ. ಅತ್ತ ಕೂಡ ಗಮನಹರಿಸಬೇಕಾಗುತ್ತದೆ.

ಈ ಪರಿವರ್ತನೆ ಒದಗಲು ಸಮರ್ಥರು ತೀರ್ಥಯಾತ್ರೆಗಾಗಿ ಹೊರಟಿದ್ದ ಬಳಿಕ ಅವರು ಮಾಡಿದ ಸಂಚಾರವು ಕಾರಣವಾಗಿದೆ. ತೀರ್ಥಯಾತ್ರೆಯಲ್ಲಿದ್ದಾಗ ಈ ದೇಶದ ಹಾಗೂ ಸಮಾಜದ ದುರವಸ್ಥೆಯನ್ನು ಸಮರ್ಥರು ಕಂಡರು. ಆದ್ದರಿಂದ ಅವರೆಲ್ಲ ದೃಷ್ಟಿ ಬದಲಾಯಿತು. ಈ ದೇಶದ ಹೀನಸ್ಥಿತಿಯನ್ನು ಕಂಡು ಅವರು ಗಲಿಬಿಲಿಗೊಂಡರು. ಅವರಿಗೆ ಅದು ಒಂದು ಸಾಕ್ಷಾತ್ಕಾರವೇ ಆಯಿತೆಂದು ತಿಳಿಯಬೇಕು.

ಇದು ಸಮರ್ಥರಿಗಾದ ಎರಡನೆಯ ಸಾಕ್ಷಾತ್ಕಾರವೆಂದು ಹೇಳಬೇಕಾಗುತ್ತದೆ. ಅದರ ಸ್ವರೂಪವೇ ಬೇರೆಯಿತ್ತೆಂಬುವನ್ನು ಗಮನದಲ್ಲಿಡಬೇಕಾಗುವುದು. ಹನ್ನೆರಡು ವರ್ಷಗಳ ಅನುಷ್ಠಾನವನ್ನು ಸಮಾಪ್ತಗೊಳಿಸುವ ಸಮಯ ಪ್ರಭುರಾಮಚಂದ್ರನ ದರ್ಶನವಾದುದು, ಅದು ಅವರಿಗಾದ ಪ್ರಥಮ ಸಾಕ್ಷಾತ್ಕಾರ. ಈ ಸಾಕ್ಷಾತ್ಕಾರವು ಆಧ್ಯಾತ್ಮದ ಪ್ರದೇಶದಲ್ಲಿ ಜರುಗಿತ್ತು. ಅವರು ನಿವೃತ್ತಿ ಮಾರ್ಗದಿಂದ ಹೋದುದು, ವೈರಾಗ್ಯದ ಸಾಧನೆಯನ್ನು ಮಾಡಿದ್ದು, ಈ ಮಾಯಾತ್ಮಕ ಹಾಗೂ ಮಿಥ್ಯೆಯೆಂದು ತಿಳಿಯಲಾಗುವ ಸಂಸಾರದತ್ತ ಬೆನ್ನು ತಿರುಗಿಸಿದ್ದು, ಇವುಗಳಿಗಾಗಿ ಇದು ಪ್ರಾಪ್ತವಾಯಿತು. ತೀರ್ಥಯಾತ್ರೆಯ ಕಾಲದಲ್ಲಿ ಇಡೀ ದೇಶವು ಅಧೋಗತಿಗೆ ಮುಟ್ಟಿದ ಹಾಗೂ ಎಲ್ಲ ಸಮಾಜವು ಭಯಗ್ರಸ್ತ, ದೀನ ಮತ್ತು ಕರ್ತವ್ಯವಿಮುಖವಾಗಿ ಹೋದ ದರ್ಶನವು ಅವರಿಗಾಯಿತು. ಆ ಸಾಕ್ಷಾತ್ಕಾರವು ಐಹಿಕ ಜೀವನದಲ್ಲಿಯದಿತ್ತು. ಜನರಿಗೆ ತಿನ್ನಲು ಅನ್ನವಿಲ್ಲ, ತೊಡಲು ಬಟ್ಟೆಯಿಲ್ಲ. ಪ್ರಪಂಚದಲ್ಲಿಯ ಈ ದೈನ್ಯವು ಸಮರ್ಥರಿಗೆ ಕಂಡಿತ್ತು. ಅದು ಆಧ್ಯಾತ್ಮದಲ್ಲಿಯ ಸಿದ್ಧಾಂತದ ಪರೀಕ್ಷೆಯಲ್ಲಿ ಮಿಥ್ಯೆಯಾಗಿರಬೇಕು. ಆದರೆ ದುಃಖ ಭೋಗದ ದೃಷ್ಟಿಯಲ್ಲಿ ಸತ್ಯವಾಗಿತ್ತು.

ಭಾರತದಲ್ಲಿ ಪವಿತ್ರವೆಂದು ಹೇಳಲ್ಪಡುವ ತೀರ್ಥಗಳನ್ನು ನೋಡಬೇಕೆಂಬ ಧಾರ್ಮಿಕ ಪ್ರೇರಣೆಯಿಂದ ಹೊರಬಿದ್ದ ಸಮರ್ಥರಿಗೆ ಆ ಯಾವುದೋ ಒಂದು ಕ್ಷಣದಲ್ಲಿ ಹೀಗೆ ಸ್ಫುರಣವಾಗಿತ್ತು. ಈ ಐಹಿಕದಲ್ಲಿಯ ಜನರ ದುಃಖವು ಕಳೆದುಹೋಗಬೇಕು. ಭವಸಾಗರದಲ್ಲಿ ಮುಳುಗಿದ್ದ ಜೀವಿಗಳಿಗೆ ಯಾವುದಾದರೂ ಮೋಕ್ಷಪ್ರಾಪ್ತಿಯ ಮಾರ್ಗವನ್ನು ತೋರಿಸುತ್ತ, ಹಾಗೇ ಪ್ರಪಂಚದಲ್ಲಿಯ ಈ ದುಃಖವನ್ನು ದೂರ ಮಾಡುವ ಮಾರ್ಗವನ್ನು ಈ ಜನರಿಗೆ ಯಾರಾದರೂ ಸೂಚಿಸಬೇಕು. ಆದರೂ ಕೂಡ ಇದು ತಮ್ಮದೇ ಒಂದು ಕರ್ತವ್ಯವಾಗಿದೆ ಎಂದು ಭಾವಿಸಿದ ಆ ಕ್ಷಣ ಅವರ ಆಯುಷ್ಯದಲ್ಲಿ ಒಂದು ವಿಶೇಷ ಪ್ರಕಾರದ ಸಾಕ್ಷಾತ್ಕಾರವೇ ಆಗಿತ್ತು. ಸಮರ್ಥರಿಗಿಂತ ಮೊದಲು ಬೇರೆಯಾವ ಸಂತರಿಗೆ ಈ ಎರಡನೆಯ ಸಾಕ್ಷಾತ್ಕಾರವು ಆಗಿತ್ತೆಂದು ತೋರುವುದಿಲ್ಲ. ಸಮರ್ಥರಿಗೆ ಅದು ಆಯಿತೆಂಬುದು ಅವರ ಅಸಾಮಾನ್ಯ ವಿಶೇಷತೆ ಎಂದು ಹೇಳಬೇಕಾಗುತ್ತದೆ. ಅನಂತರದ ತಮ್ಮ ಆಯುಷ್ಯದಲ್ಲಿ ಸಮರ್ಥರು ಸಮಾಜದ ಐಹಿಕ ಪ್ರಪಂಚದತ್ತ ಗಮನಹರಿಸಿದರು. ಸಮಾಜದ ಈ ಪ್ರಪಂಚವನ್ನು ಸುಧಾರಿಸಬೇಕು, ಮಾರ್ಗಕ್ಕೆ ಹಚ್ಚಬೇಕು ಇದು ಅವರ ಅನಂತರದ ಜೀವಿತದ ಉದ್ದೇಶವಾಯಿತು. ಅದಕ್ಕಾಗಿ ಸಮರ್ಥರು ಮಂಡಿಸಿದ ವಿಚಾರಗಳು ಬಹಳ ವಿಶೇಷವಾಗಿದ್ದವು. ಅನಂತರದ ತಮ್ಮ ಆಯುಷ್ಯದಲ್ಲಿ ಕೇವಲ ಪರಮೇಶ್ವರನ ಚಿಂತನೆ ಮಾಡು

ತ್ತಿರುವ ಈ ಪುರುಷನಿಗೆ ಯಾವುದೇ ದುಃಖವನ್ನು ನಿವಾರಿಸಿಬಿಡುವ ಒಂದೇ ಮಾರ್ಗವು ತಿಳಿದಿತ್ತೆಂದು ಭಾಸವಾಗುತ್ತದೆ. ಅದೆಂದರೆ ಪರಮೇಶ್ವರನಿಗೆ ಶರಣಾಗುವುದು, ಅವನ ಮೇಲೆ ಭಾರಹಾಕುವುದು. ಆದರೆ ಸಮರ್ಥರು ಈಶ್ವರನ ಮೇಲೆ ಭಾರ ಹಾಕದೆ ಮನುಷ್ಯ ಪ್ರಯತ್ನದ ಮೇಲೆ ಎಲ್ಲ ಭಾರವನ್ನು ಹಾಕಿದರು.

"ಧರ್ಮೋ ರಕ್ಷತಿ ರಕ್ಷಿತಃ" ಎಂಬ ಒಂದು ಮಾತಿದೆ. ಧರ್ಮವು ನಮ್ಮನ್ನು ರಕ್ಷಿಸಬೇಕೆಂದು ಬಯಕೆಯಿದ್ದರೆ ಮೊದಲು ನಾವು ಧರ್ಮವನ್ನು ರಕ್ಷಿಸಬೇಕು. ಹೀಗೆ ಆ ವಚನದ ಅರ್ಥವಿದೆ. ಆ ವಚನದಲ್ಲಿಯ ಈ ಆಶಯವು ತರ್ಕದ ಹೊರತಾಗಿಲ್ಲ. ಶಸ್ತ್ರದ ಸಹಾಯದಿಂದ ತಮ್ಮ ರಕ್ಷಣೆಯಾಗಬೇಕೆಂದಿದ್ದರೆ ಶಸ್ತ್ರಧಾರಿ ಪುರುಷನು, ಆ ಶಸ್ತ್ರವು ತನ್ನ ಕೈಯಲ್ಲಿರಬೇಕು ಮತ್ತು ಅದು ಶತ್ರುವಿನ ಕೈಗೆ ಹೋಗಬಾರದು ಎಂಬುದನ್ನು ಕಣ್ಣಲ್ಲಿ ಎಣ್ಣೆಹಾಕಿಕೊಂಡು ನೋಡಬೇಕು. ಮನುಷ್ಯನು ಯಾವ ಯಾವ ಸಾಧನಗಳನ್ನು ಉಪಯೋಗಿಸುವನೊ ಅವೆಲ್ಲವುಗಳಿಗೆ ಈ ನಿಯಮವು ಸರಿಹೊಂದುತ್ತದೆ. ಸಾಧನಗಳನ್ನು ಜತನ ಮಾಡಬೇಕಾಗುತ್ತದೆ, ಅವುಗಳ ರಕ್ಷಣೆಯನ್ನು ಮಾಡಬೇಕಾಗುತ್ತದೆ. ಅದೇ ಧರ್ಮದ ವಿಷಯವಾಗಿಯೂ ಇದೆ. ಹೀಗೆ ಈ ಧರ್ಮದ ರಕ್ಷಣೆಯು ಆಗಬೇಕಾದರೆ ಸ್ವಧರ್ಮದ ಬಗೆಗೆ ಅಭಿಮಾನಪಡುವ ಸಾಮರ್ಥ್ಯಶಾಲಿ ಅರಸನಿರಬೇಕು. ಧರ್ಮದ ದೃಷ್ಟಿಯಿಂದಿರುವ ಈ ರಾಜ್ಯಗಳ ಮಹತ್ತ್ವವನ್ನು ಸಮರ್ಥರು ಅರಿತುಕೊಂಡಿದ್ದರು.

ರಾಜಕಾರಣವು ಧರ್ಮ ಹಾಗೂ ಸಂಸ್ಕೃತಿಯ ರಕ್ಷಾಕವಚವಿದ್ದಂತೆ. ಅರಸ ಅಸಮರ್ಥನಾಗಿದ್ದರೆ ಪ್ರಜೆಗಳ ಹಾನಿಯಾಗುತ್ತದೆ. ಅದು ಅವರ ಪಾಪವೆಂದು ತಿಳಿಯಬೇಕು. "ಅದೇ ಮಹಾ ಪಾಪ, ದೇವರಿಗೆ ಯಾಕೆ ತಿಳಿಯದು!" ಇಂಥ ಉದ್ಗಾರವನ್ನು ಸಮರ್ಥರು, ಕರ್ತವ್ಯಶೂನ್ಯನಾದ ಅರಸ ಮತ್ತು ಜಾಗೃತನಾದ ಅರಸ ಈ ಇಬ್ಬರಲ್ಲಿಯ ಅಂತರವನ್ನು ಹೇಳುತ್ತ ತೆಗೆದಿದ್ದಾರೆ. ರಾಜ್ಯಗಳು ಶಕ್ತಿಯ ಪ್ರಭಾವದಿಂದ ನಿರ್ಮಾಣವಾಗುತ್ತವೆ. ಅದಕ್ಕಾಗಿ "ಸಮುದಾಯದ ಹವ್ಯಾಸ" ಪಡೆಯಬೇಕಾಗುತ್ತದೆ. ಇಂಥ ಸಮುದಾಯ ಇರಬೇಕೆಂದು ಪ್ರಯತ್ನ ಮಾಡಬೇಕಾಗುತ್ತದೆ. ಬಹಳ ಜನರನ್ನು ಒಲಿಸಿಕೊಳ್ಳಬೇಕಾಗುತ್ತದೆ. ಸಮಾಜದಲ್ಲಿ ಜಾಗೃತಿಯಾಗುವಂತೆ ನೋಡಬೇಕಾಗುತ್ತದೆ. ಇದೆಲ್ಲವನ್ನು ಸಮರ್ಥರು ಅರಿತಿದ್ದರು; ಅದಕ್ಕಾಗಿಯೇ ಚಾಫಳಕ್ಕೆ ಬಂದು ಮುಟ್ಟಿದ ಬಳಿಕ ಆ ಸಮಯ ಅವರು ಮಾಡಿದ ಉಪದೇಶಗಳು ಈ ದಸೆಯಲ್ಲಿದ್ದವು.

ಆ ಕಾಲದ ಆಪತ್ತಿನಿಂದ ಸಮಾಜವನ್ನು ಪಾರು ಮಾಡುವ ಸಲುವಾಗಿ ಸಮರ್ಥರು ಶೋಧಿಸಿದ ಮಾರ್ಗ ಹಾಗೂ ತಿಳಿಸಿದ ವಿಚಾರಗಳು ಐಹಿಕ ಮಟ್ಟದವುಗಳೇ ಆಗಿದ್ದವು. ಪರಮಾರ್ಥವನ್ನು ಅರಿತುಕೊಂಡಿದ್ದರೂ ಐಹಿಕವನ್ನು ನಿರಾಕರಿಸದ, ಐಹಿಕದಲ್ಲಿಯ ಪ್ರಶ್ನೆಗಳನ್ನು ಬಿಡಿಸುವ ಸಲುವಾಗಿ ದೇವರ ಆಶ್ರಯವನ್ನು ಪಡೆದರೂ "ಸಾಮರ್ಥ್ಯವಿದೆ ಚಳವಳಿಯಲ್ಲಿ" ಇದನ್ನು ಗುರುತಿಸುವ, ಆ ಚಳವಳಿಯನ್ನು ಸಿದ್ಧಪಡಿಸುವ ಸಲುವಾಗಿ "ಪ್ರಯತ್ನವೇ ಯಶಸ್ಸು ಅದಕ್ಕಾಗಿ ಯತ್ನಿಸು" ಈ

ಪ್ರತ್ಯಕ್ಷ ಕೃತಿಯ ಮಾರ್ಗವನ್ನು ತೋರುವ, ಇಂಥ ಸ್ವರೂಪಗಳ ಶಿಕ್ಷಣವನ್ನು ಸಮರ್ಥರು ಕೊಟ್ಟಿದ್ದಾರೆ. ಮಹಾರಾಷ್ಟ್ರದಲ್ಲಿ ಆತನಕ ನಡೆದುಬಂದ ಸಂತರ ಪರಂಪರೆಯನ್ನು ವಿಚಾರಿಸಿದರೆ, ಇವು ಎಲ್ಲವೂ ಬೇರೆಯಾಗಿವೆ. ಆಗಿನ ಸಮಾಜಕ್ಕೆ ಅವು ಒಂದಿಷ್ಟು ವಿಪರೀತವಾಗಿಯೇ ಕಾಣುವ ಸಾಧ್ಯತೆಯಿದೆ.

ಪಾರಲೌಕಿಕಕ್ಕಾಗಿ ಮನೆಮಾರು ಬಿಟ್ಟ ಈ ಸಾಧು ಪುರುಷ, ಇದನ್ನು ಹೀಗೇಕೆ ಹೇಳುತ್ತಾನೆ, ಎಂಬುದು ಜನರ ಮನಸ್ಸಿನಲ್ಲಿ ಬಂದು ಹೋಗಿರಬೇಕು. ಶತ ಶತಮಾನಗಳಾದ ಪ್ರಪಂಚದ ಮಿಥ್ಯಾತ್ವದ ಪ್ರವಚನಗಳನ್ನು ಮತ್ತು ನಿವೃತ್ತಿಯ ಉಪದೇಶಗಳನ್ನು ಆಲಿಸುವ ರೂಢಿಯಿದ್ದ ಸಮಾಜಕ್ಕೆ ಇದೆಲ್ಲವನ್ನು ಕೇಳುವಾಗ "ಏನೋ ತಪ್ಪುತ್ತಲಿದೆ. ಇದೇನು ಸರಿಯಿಲ್ಲ" ಎಂದು ಕಂಡಿರಬೇಕು. ಸಮರ್ಥರ ವ್ಯಕ್ತಿತ್ವವೇ ಪ್ರಭಾವಿಯಾಗಿತ್ತೆಂದು ಹೇಳಬೇಕು, ಇಲ್ಲವೆ ಆ ಕಾಲದ ಯಾವುದೋ ಮಹಿಮೆಯಾಗಿತ್ತೆಂದು ಹೇಳಬೇಕು. ಸಮರ್ಥರ ಪ್ರಯತ್ನವಾದದ, ಶಕ್ತಿಯನ್ನು ಉಪಾಸನೆ ಮಾಡುವ, ಆತ್ಮವಿಶ್ವಾಸವನ್ನು ಪಡೆಯುವ, ವಿಜಿಗೀಷು ವೃತ್ತಿಯನ್ನು ಪಡೆದ ಈ ಉಪದೇಶವು ಸಮಾಜದಲ್ಲಿ ಎಲ್ಲಿಯಾದರೂ ಮುಟ್ಟಿರಬಹುದು. ಅವರಿಗೆ ದೊರೆತ ಅನೇಕಾನೇಕ ಶಿಷ್ಯರಿಂದ ಹಾಗೂ ಅವರು ಸ್ಥಾಪಿಸಿದ ಬೇರೆ ಬೇರೆ ಸ್ಥಳಗಳಲ್ಲಿಯ ಮಠಗಳಿಂದ ಅಷ್ಟನ್ನು ಅನುಮಾನಿಸಲಾಗುತ್ತದೆ.

ಸಮರ್ಥರ ಈ ಉಪದೇಶವನ್ನು ಸಮಾಜವು ಅರಿತುಕೊಂಡಿತೆ ? ಸಮಾಜದ ಮನಸ್ಸಿನಲ್ಲಿ ಅದು ಆಳವಾಗಿ ಪ್ರವೇಶಿಸಿ ಅಲ್ಲಿ ಬೇರುಬಿಟ್ಟಿತೆ ? ಅದರ ಪರಿಣಾಮವಾಗಿ ಈ ಸಮಾಜದ ಜೀವನ ವಿಷಯಕ ದೃಷ್ಟಿಕೋನವು ಯಾವುದೇ ಪ್ರಮಾಣದಲ್ಲಿ ಯಾದರೂ ಪರಿವರ್ತನಗೊಂಡಿತೆ ? ಅದು ಅತೀ ಜಾಗರೂಕ ಹಾಗೂ ಪುರುಷಾರ್ಥ ಆಯಿತೆ ? ಐಹಿಕ ವಿಷಯದ ಕೇವಲ ಮಿಥ್ಯಾಬುದ್ಧಿಯನ್ನು ಮತ್ತು ಅದರಲ್ಲಿ ಹುಟ್ಟುವ ಉದಾಸೀನತೆಯನ್ನು ತ್ಯಜಿಸಿತೆ ? ಅತ್ಯಂತ ನಿಷ್ಠೆಯ ಪ್ರಯತ್ನವನ್ನು ಮತ್ತು ಸರ್ವ ವಿಷಯಗಳಲ್ಲಿ ಎಚ್ಚರ ಇವುಗಳ ಅಂಗೀಕಾರವನ್ನು ಅದು ಮಾಡಿತೆ ? ನಿತ್ಯದಲ್ಲಿ ಕಾಣಿಸಿಕೊಳ್ಳುವ ಕಾಲಕಾಲದ ಆಹ್ವಾನಗಳನ್ನು ಅದು ಸ್ವೀಕರಿಸಿತೆ ? ಪ್ರಾರಬ್ಧವಾದದ ಆಶ್ರಯವನ್ನು ಬಿಟ್ಟು, ಈಶ್ವರೀ ಅವತಾರದ ದಾರಿ ನೋಡದೆ ಸ್ವತಃ ಪ್ರಯತ್ನಿಸುವ, ಮುಗ್ಧ ಶ್ರದ್ಧೆಯ ಆಶ್ರಯ ಪಡೆಯದೆ ಬುದ್ಧಿಬಾರದ ದಾರಿ ಹಿಡಿಯುವ, ಪರಮಾರ್ಥವೇ ಅಂತಿಮ ಸಾಫಲ್ಯವೆಂದು ತಿಳಿದರೂ ಐಹಿಕತೆಯನ್ನು ಅಲಕ್ಷಿಸದ, ಆದರೂ ಐಹಿಕವನ್ನು ಸರಿಯಾಗಿ ನಿರ್ವಹಿಸಿದರೆ ಪಾರಲೌಕಿಕ ಮಟ್ಟದಲ್ಲಿ ನಿಃಶ್ರೇಯಸ್ಸನ್ನು ಸಾಧಿಸಲು ಬರುವ, ಹೀಗೆ ಪ್ರಪಂಚ ಪರಮಾರ್ಥ ವಿವೇಕದ ಯಾವ ಉಪದೇಶವನ್ನು ಸಮರ್ಥರು ತಮ್ಮ ಆಯುಷ್ಯದ ಉತ್ತರಾರ್ಧದಲ್ಲಿ ಮೂರು ತಪಗಳಲ್ಲಿ ಸತತ ಮಾಡಿದರೊ, ಅದನ್ನು ಸಮಾಜವು ಅರಿತುಕೊಂಡಿತೆ ?

ಇಂಥ ಎಲ್ಲ ಪ್ರಶ್ನೆಗಳ ಉತ್ತರಗಳನ್ನು ಪೂರ್ತಿ ಒಪ್ಪಿಕೊಳ್ಳುವುದು ಬಹಳ ತೊಂದರೆ ದಾಯಕವಿದೆ. ಅವುಗಳನ್ನು ಒಪ್ಪದಿರುವ ಬಗೆಗೆ ಇತಿಹಾಸದ ಸಾಕ್ಷ್ಯವಿದೆ. ಸಮರ್ಥರ ವಿಚಾರಗಳು ಸಮಾಜದಲ್ಲಿ ತೀರ ಕಡಿಮೆ ಭಾಗದವರೆಗೆ ಮುಟ್ಟಿರುತ್ತವೆಂಬುದು

ಕಟುವಾದರೂ ಸತ್ಯವಾಗಿದೆ. ಅದನ್ನು ಅಲ್ಲಗಳೆದು ಯಾವ ಉಪಯೋಗವಿಲ್ಲ.

ಸಮರ್ಥರ ವಿಚಾರಗಳು ನಮ್ಮ ಸಮಾಜದ ಎಲ್ಲ ಸ್ತರಗಳವರೆಗೆ ತಲುಪುವಲ್ಲಿ ಪ್ರಾರಂಭದಲ್ಲಿಯೆ ಕೆಲ ಆತಂಕಗಳು ಬಂದವು. ಮುನ್ನೂರು ವರ್ಷಗಳ ಮೊದಲಿನ ಆ ಕಾಲದಲ್ಲಿ ಸಮರ್ಥರ ಶಿಕ್ಷಣ ಇಡೀ ಸಮಾಜಕ್ಕೆ ಮುಟ್ಟುವುದು ಅಸಾಧ್ಯವಾಗಿತ್ತು. ಅದು ಕೇವಲ ಉಚ್ಚವರ್ಣಿಯರಲ್ಲಿ ಮುಟ್ಟಿತು. ಅಲ್ಲಿಯೋ ಒಂದಿಷ್ಟು ಸೀಮಿತವಾಗಿ ಅರಿವು ಮೂಡುವುದು ಮಾತ್ರ ಸಾಧ್ಯವಿತ್ತು. ನೂರಾರು ವರ್ಷಗಳಿಂದ ನಡೆದು ಬಂದ ಮತ್ತು ದೃಢಮೂಲವಾಗಿದ್ದ ಜನ್ಮಪ್ರಾಧಾನ್ಯ ಜಾತಿ ವ್ಯವಸ್ಥೆಯ ಚೌಕಟ್ಟನ್ನು ಪಡೆದುಕೊಂಡೇ ಆ ಸಮಯದ ಎಲ್ಲ ಸಮಾಜವು ಜಾಗೃತವಾಗಿತ್ತು. ಸಮರ್ಥರು ಕೂಡ ಅದಕ್ಕೆ ಅಪವಾದವಾಗಿರಲಿಲ್ಲ. ಆ ಚೌಕಟ್ಟಿನ ಸೀಮೆ ಅವರ ಗಮನಕ್ಕೆ ಬಂದಿರಲಿಲ್ಲ. ಅದಕ್ಕಾಗಿ ಅದನ್ನು ದಾಟಬೇಕಾದ ಮಾರ್ಗವನ್ನು ಶೋಧಿಸುವ ವಿಚಾರವೇ ಅವರ ಮನಸ್ಸಿನಲ್ಲಿ ಹುಟ್ಟಲು ಸಾಧ್ಯವಾಗಲಿಲ್ಲ. ಆದರೆ ಬ್ರಾಹ್ಮಣತ್ವದ ಪರಂಪರಾಗತ ಪರಿಸರದಲ್ಲಿ ಹುಟ್ಟಿದ್ದರೂ ಕೂಡ ಅವರು ಎಲ್ಲ ಸಮಾಜದ ಕಲ್ಯಾಣ ವನ್ನು ಚಿಂತಿಸುತ್ತಿದ್ದರೆಂಬುದನ್ನು ನಾವು ಮರೆತರೆ, ಅವರ ಮೇಲೆ ದೊಡ್ಡ ಅನ್ಯಾಯ ವಾಗುವುದು. ನಾವು ಮಾಡಬೇಕಾದ ಕೆಲಸ ಅದಲ್ಲ.

ನಮ್ಮ ಸಮಾಜದ ಧುರೀಣತ್ವವು ಬ್ರಾಹ್ಮಣ ಮತ್ತು ಕ್ಷತ್ರಿಯ ಈ ಎರಡು ವರ್ಗಗಳ ಕಡೆಗಿದೆ. ಆ ವರ್ಗಗಳು ಈ ಸಮಾಜದ ಒಳಿತು ಕೆಡುಕುಗಳ ಬಗೆಗೆ ಹಾಗೂ ಭವಿಷ್ಯದ ಚಿಂತೆಯನ್ನು ವಹಿಸಿಕೊಳ್ಳಬೇಕೆಂದು ಸಮರ್ಥರ ನಿಲುವಾಗಿತ್ತು. ಒಂದಿಷ್ಟು ದೊಡ್ಡ ಕುಟುಂಬದಲ್ಲಿ ಹಿರಿತನ ವಹಿಸಿದವರು ಎಲ್ಲರ ಹಿತವನ್ನು ಸಾಧಿಸುವ ಸಂದರ್ಭದಲ್ಲಿ ಹೊಣೆಗಾರಿಕೆಯು ಇತರ ಕನಿಷ್ಠ ವ್ಯಕ್ತಿಗಳಿಗಿಂತ ದೊಡ್ಡವರೆಂದು ತಿಳಿಯುವಂತೆ ಇದಾಗಿದೆ. ಆ ಕಾಲದ ದೃಷ್ಟಿಯಿಂದ ಸಮರ್ಥರ ಈ ಪಾತ್ರ ಅನುಚಿತ ವಾಗಿತ್ತೆಂದು ತಿಳಿಯಲು ಬರುವುದಿಲ್ಲ. ಇಂದಿನ ಇಪ್ಪತ್ತನೆಯ ಶತಮಾನದಲ್ಲಿ ಸಮಾಜ ರಚನೆಯ ವಿಷಯದಲ್ಲಿ ಸಂಕಲ್ಪಗಳನ್ನು ಕಣ್ಣಮುಂದೆ ಇಟ್ಟುಕೊಂಡು, ಇಲ್ಲವೆ ಇಂದು ಸರ್ವಮಾನ್ಯವಾದ ಪರಿಭಾಷೆಯನ್ನು ಉಪಯೋಗಿಸಿ ಆ ಹಿನ್ನೆಲೆಯಲ್ಲಿ ಸಂಕುಚಿತತೆಯ ಮುದ್ರೆಯನ್ನೊತ್ತುವುದು ಯೋಗ್ಯವಾಗದು. ಸ್ವಂತ ತರ್ಕದ ಇಲ್ಲವೆ ಜಾತಿಯ ಸೀಮೆಯನ್ನು ಕಂಡುಕೊಂಡು ಇರುವುದು, ಸ್ವಂತದ ಜಾತಿಯ ವಿಶೇಷ ಪ್ರೇಮವಿರುವುದು ಮತ್ತು ಅದು ಇರುವಲ್ಲಿಯೇ ಅನ್ಯ ಜಾತಿಯ ದ್ವೇಷ ಮಾಡದೇ ಇರುವುದು, ನಮ್ಮ ಜತೆಗೆ ಇತರ ಎಲ್ಲ ಜಾತಿಗಳ ಮತ್ತು ಕೊನೆಗೆ ಎಲ್ಲ ಸಮಾಜಗಳ ಕಲ್ಯಾಣದತ್ತ ದೃಷ್ಟಿ ಹಾಕುವುದು, ಇಷ್ಟನ್ನೇ ಸಾಧಿಸುವುದು ಆ ಕಾಲದಲ್ಲಿ ಸಾಧ್ಯವಿತ್ತು. ಜಾತಿಗಳ ಹೆಸರು ಗುರುತುಗಳು ಅಳಿಸಿ ಹೋದ ದಿನವೇ ಈ ಸಮಾಜದಲ್ಲಿ ಸುವರ್ಣ ದಿನ. ಆದರೆ ಹಾಗೆ ಆಗದು. ಎಲ್ಲಿಯವರೆಗೆ ಜಾತಿಯ ನೆನಪು ಅಳಿಸುವುದಿಲ್ಲವೋ ಅಲ್ಲಿಯವರೆಗೆ ಇದರಲ್ಲಿ ಬೇರೆ ಒಂದಿಷ್ಟು ಅಧಿಕ ಹಿತಕಾರಕ ಹಿನ್ನೆಲೆಯನ್ನು ಕಣ್ಣೆದುರು ತರಲು ಬರುವುದಿಲ್ಲ.

ಇತರ ರಾಷ್ಟ್ರಗಳನ್ನು ಒಂದಿಷ್ಟೂ ದ್ವೇಷಿಸದೆ ಇಂದು ನಾವು ನಮ್ಮ ದೇಶವನ್ನು

ಪ್ರೀತಿಸುತ್ತೇವೆ. ನಮ್ಮ ದೇಶದ ಮೇಲೆ ಯಾರಾದರೂ ಆಕ್ರಮಣ ಮಾಡಿದರೆ ಅದರ ಪ್ರತಿಕಾರವನ್ನು ಮಾಡುತ್ತೇವೆ. ಅದೇ ವೇಳೆಯಲ್ಲಿ ವ್ಯಾಪಕವಾಗಿ ಮಾನವತೆಯ ಜ್ಯೋತಿಯನ್ನು ಮನಸ್ಸಿನಲ್ಲಿ ಬೆಳಗಿಸುತ್ತೇವೆ. ಸಂಕುಚಿತತೆಯ ಮುದ್ರೆಯನ್ನು ಒತ್ತಲು ಬರುವ ಇಂಥ ರಾಷ್ಟ್ರೀಯತೆ ಹಾಗೂ ವ್ಯಾಪಕವಾಗಿ ನಿಚ್ಚಳವಾಗಿ ಹೇಳ ಬಹುದಾದ ವಿಶಾಲ ಮಾನವತೆ ಈ ಎರಡು ಭಾವನೆಗಳು ಒಂದೇ ಕಡೆಗೆ ಇರಬಲ್ಲವು. ಇವುಗಳನ್ನು ಸ್ವೀಕರಿಸುವುದು ನಮಗೆ ತೊಂದರೆಯಾಗುವುದಿಲ್ಲ. ಹಿಂದಿನ ಕಾಲದಲ್ಲಿ ಪ್ರಜ್ಞಾವಂತ ಮತ್ತು ವಿಚಾರವಂತ ಪುರುಷರು ವರ್ಣಭಾವನೆ ಹಾಗೂ ಸಮಾಜ ಭಾವನೆ ಈ ಎರಡರಲ್ಲಿಯ ಸಮತೋಲನವನ್ನು ಹಾಗೇ ಕಾಪಾಡಿಕೊಂಡಿದ್ದಾರೆ. ಸಮರ್ಥರು ಅಂಥ ವ್ಯಕ್ತಿಗಳಲ್ಲಿ ಒಬ್ಬರು. ಅವರು ತತ್ಕಾಲೀನ ವ್ಯವಸ್ಥೆಗೆ ಅನುಸರಿಸಿ ತಮ್ಮ ಬ್ರಾಹ್ಮಣ್ಯವನ್ನು ನಿರ್ವಹಿಸಿಕೊಂಡಿರ ಬೇಕು. ಅದರ ಅಭಿಮಾನವನ್ನು ಹಿಡಿ ದಿರಬೇಕು. ಆದರೆ ಅದೇ ವೇಳೆ ಎಲ್ಲ ಸಮಾಜದ ಹಿತಕ್ಕಾಗಿ ಕಲ್ಯಾಣ ಬುದ್ಧಿಯನ್ನು ಅವರು ಜಾಗೃತಗೊಳಿಸಿದ್ದರು. ಇದನ್ನು ಮರೆಯಲಾಗದು. ಛತ್ರಪತಿ ಶಿವರಾಯರು ಒಂದಿಷ್ಟು ಈಶ್ವರೀ ಅವತಾರವೆಂದು ಸಮರ್ಥರು ತಿಳಿದರು. ಅವರಿಗೆ ಅಂಥ ವ್ಯಾಪಕ ಬುದ್ಧಿ ಇರಲಾರದೆ ಇದು ಸಾಧ್ಯವಿರಲಿಲ್ಲ. ಅದೇ ರೀತಿ ಪ್ರಪಂಚದಲ್ಲಿ ಎಲ್ಲ ಕಡೆಯಿಂದ ಬೇಸತ್ತು ಹೋದ ಈ ಜನರಿಗೆ"ಎಲ್ಲಿ ಹೋಗುವಿರಿ,ಏನು ಮಾಡುವಿರಿ.ಇದೇ ತಿಳಿಯದು" ಎಂಬ ಉದ್ಗಾರವನ್ನು ಒಂದು ವಿಲಕ್ಷಣವಾದ ವ್ಯಾಕುಲತೆಯಿಂದ ತೆಗೆದು, ಅದಕ್ಕಾಗಿ ಅವರು ಈಶ್ವರನ ಕರುಣೆಯನ್ನೇ ವಿನಂತಿಸಿಕೊಳ್ಳುತ್ತಿರಲಿಲ್ಲ. "ಕಲ್ಯಾಣ ಮಾಡು ದೇವಾ." ಈ ಅವರ ಪ್ರಾರ್ಥನೆಯಲ್ಲಿ "ಜನಹಿತ ಸಾಧಿಸು!!" ಈ ಶಬ್ದ ಯೋಜನೆ ಯಲ್ಲಿ ಜನ ಅಂದರೆ ಅನೇಕ ಜಾತಿ, ಉಪಜಾತಿಗಳಲ್ಲಿ ಜನಸಂದಣಿ ತುಂಬಿದಂಥ ನಮ್ಮ ಎಲ್ಲ ಸಮಾಜವು ಇರುತ್ತದೆ. ಒಂದು ವಿಶೇಷ ಮಟ್ಟದಲ್ಲಿ ಇರಬೇಕು. ಆದರೆ ಸಮರ್ಥರು ಮಾಡಿದ ಆ ಆರ್ತ ವಿನಂತಿಯಲ್ಲಿಯ ಅವರ ಕರುಣೆಯ ವಾಸ್ತವತೆಯು ಜ್ಞಾನೇಶ್ವರರ 'ಪ್ರಸಾದದಾನ' ಈ ರೀತಿಯದಿದೆ. "ವಿಶ್ವದಲ್ಲಿರುವ ನಾರಾಯಣ! ನಾಗಲಿ ಅವನ ಪೂಜಾಪರಣ! ಸಂತಸಪಡಿರಿ ಈ ಕಾರಣ!." ಎಂದು ಸಮರ್ಥರ ದಾಸಬೋಧೆಯಲ್ಲಿ ಒಂದು ಉದ್ಗಾರವಿದೆ (15.9.25). ಇವರಲ್ಲಿ ಎಲ್ಲ ಮಾನವ ರೂಪಗಳಲ್ಲಿ ಒಬ್ಬ ಈಶ್ವರನು ನಟಿಸಿದ್ದಾನೆ ಎಂಬ ಅದ್ವೈತ ಸಿದ್ಧಾಂತ ಮತ್ತು ಪರೋಪಕಾರ ಇವೇ ಕೊನೆಗೆ ಎಲ್ಲ ಧರ್ಮಗಳ ರಹಸ್ಯಗಳು. ಇದೇ ನೀತಿ ವಿಚಾರ ಈ ಎರಡರ ಸಮನ್ವಯವು ಹೀಗೆ ಸುಸ್ಪಷ್ಟವಾಗಿದೆ. ಭಜನವೆಂದರೇನು ಇದನ್ನು ಹೇಳುತ್ತಿರುವಾಗ ಒಂದು ಬಿಡಿ ರಚನೆಯಲ್ಲಿ ಸಮರ್ಥರು ವಿವರಿಸುತ್ತಾರೆ. "ಭೇಟಿ ಯಾಗಿರಿ ಯಾವನೇ ಒಬ್ಬನನು! ಹೊಲೆಯ ಮಹಾರ ಚರ್ಮಕಾರ! ಸಂತುಷ್ಟ ಗೊಳಿಸಿರಿ ಅವರ ಮನಸನು! ಇದರ ಹೆಸರು ಭಜನ!!" ಇಲ್ಲಿ ಭಕ್ತಿಯ ಅಂತರ್ಗತ ಎಂದು ವರ್ಣಿಸಲಾದ ಮಾನವ ಮಾತ್ರದ ಅಂತಃಕರಣವನ್ನು ಆಕರ್ಷಿಸುವ ಕಲ್ಪನೆ ಯನ್ನು ನೇರ ಅಸ್ಪೃಶ್ಯರೆಂದು ತಿಳಿಯುವ ಮಹಾರ, ಸಮಗಾರರವರೆಗೆ ಒಯ್ದು ಮುಟ್ಟಿಸಲಾಗಿದೆ. ಸಮರ್ಥರ ಈ ರೀತಿಯ ಉದ್ಗಾರಗಳು ಅವರ ಸಮಾಜದ ಬಗೆಗಿನ

ಪ್ರಜ್ಞೆ ಎಷ್ಟು ವ್ಯಾಪಕವಾಗಿರಬಲ್ಲುದು ಎಂಬುದರ ಉದಾಹರಣೆಗಳಾಗಿವೆ.

ಆದರೆ ಇಷ್ಟು ಉದಾರತೆ ಮತ್ತು ವ್ಯಾಪಕಬುದ್ಧಿ ಸಮರ್ಥರಲ್ಲಿ ಇದ್ದರೂ ಆ ಸಮಯದ ಒಟ್ಟಿನ ಪರಿಸ್ಥಿತಿಯೇ ಹೀಗೆ ಇತ್ತು. ಅವರ ಬೋಧನೆ ಒಂದು ವಿಶಿಷ್ಟ ವೃತ್ತದ ಹೊರಗೆ ಮುಟ್ಟುವುದು ಸಾಧ್ಯವಿರಲಿಲ್ಲ. ಅವರ "ಮರಾಠರನ್ನು ಒಗ್ಗೂಡಿಸಿರಿ!" ಈ ಉದ್ಗಾರವು ಸಮಸ್ತ ಮರಾಠರಿಗೆ ತಿಳಿದಿದೆಯೋ ಇಲ್ಲವೋ ಅದು ಕೂಡ ಸಂದೇಹ. "ಹಿಂದುಸ್ಥಾನ ಬಲಪಡಿಸಿರಿ!" ಈ ಶಬ್ದಗಳಲ್ಲಿ ಮಹಾರಾಷ್ಟ್ರದ ಪ್ರಾದೇಶಿಕ ಪ್ರೇಮವನ್ನು ಮತ್ತು ಸೀಮೆಯನ್ನು ದಾಟುವ ಆಶಯವು ಯಾರಿಗಾದರೂ ತಿಳಿದಿತ್ತೆಂಬುದರ ಆಶೆಯನ್ನೇ ಮಾಡಲಾಗದು. ಆದರೆ ಈ ದೌರ್ಭಾಗ್ಯವು ಒಬ್ಬರೇ ಸಮರ್ಥರದಲ್ಲ. ಅದು ಛತ್ರಪತಿಗಳವರದೂ ಇತ್ತು. ಹಿಂದೂ ರಾಜ್ಯವಾಗಬೇಕು ಇದು ದೇವರ ಇಚ್ಛೆ ಎಂಬ ಉದ್ಗಾರವನ್ನು ಅವರ ರಣಧುರಂಧರರಾದ ತಂದೆ ಶಹಾಜಿ ರಾಜೆಯವರಿಗೆ ಕೂಡ ಎಂದೂ ತಿಳಿದಿರಲಿಲ್ಲ. ಛತ್ರಪತಿಗಳವರಿಗಿಂತಲೂ ಕೆಲ ಬಗೆಯಲ್ಲಿ ಅಧಿಕ ಶೂರರಾದ ಪುತ್ರ ಸಂಭಾಜಿಯವರಿಗೆ ಅದು ತಿಳಿದಾಗ ಬಹಳ ತಡವಾಗಿತ್ತು. ಉದಾತ್ತ ವಿಚಾರಗಳ ಕರೆಯನ್ನು ಯಾರಾದರೂ ಕೊಟ್ಟರೂ ಅದು ಎಲ್ಲರ ಅಂತಃಕರಣದವರೆಗೆ ಮುಟ್ಟುವುದು ಎಂದೇನಿಲ್ಲ.

ಸಮರ್ಥರ ಉಪದೇಶಗಳು ಎಲ್ಲ ಸಮಾಜದವರೆಗೆ ಮುಟ್ಟಲು ಇನ್ನೊಂದು ದೊಡ್ಡ ಆತಂಕವಿತ್ತು. ಸಮರ್ಥರ ಆಹ್ವಾನವು ಬುದ್ಧಿವಂತರಿಗೆ ಇತ್ತು. ಅವರಿಗೆ ವಿಚಾರಗಳನ್ನು ಹೇಳಬೇಕಾಗಿತ್ತು. ವಿವೇಕವನ್ನು ಕಲಿಸಬೇಕಾಗಿತ್ತು. ಈ ಆಹ್ವಾನದ ಭಾರ ಹೊರುವುದಿರಲಿ, ಆದರೆ ದುರ್ದೈವದಿಂದ ಆ ಕಾಲದಲ್ಲಿ ಅದನ್ನು ಸರಿಯಾಗಿ ತಿಳಿದುಕೊಳ್ಳುವ ಕ್ಷಮತೆಯೇ ನಮ್ಮ ಸಮಾಜದಲ್ಲಿರಲಿಲ್ಲ. ಶ್ರದ್ಧೆಯಿಂದ ಭಾವಿಸುವುದನ್ನಷ್ಟೇ ಸ್ವೀಕರಿಸುವ ರೂಢಿ ನಮ್ಮ ಸಮಾಜದಲ್ಲಿ ದೀರ್ಘಕಾಲದಿಂದಲೂ ಇತ್ತು. ಪರಮಾರ್ಥದ ಬ್ರಹ್ಮವಿದ್ಯೆಯು ಇಲ್ಲವೆ ಮೋಕ್ಷ ಸಾಧನೆಯ ವಿಚಾರಗಳನ್ನು ಕೇವಲ ಶ್ರದ್ಧೆಯ ಬಲದ ಮೇಲೆ ನಮಗೆ ತಿಳಿಯಲು ಬರುತ್ತದೆ.ಅವುಗಳಲ್ಲಿ ಕೇವಲ ಮನಸಾ ವಿಶ್ವಾಸವನ್ನಿಟ್ಟರೆ ಸಾಕು. ಅವುಗಳಲ್ಲಿ ಹೆಚ್ಚಿಗೇನು ಮಾಡದೆ ಇಲ್ಲವೆ ಸಾಧಿಸದೆ, ಆದರೆ ಪೂರ್ವಪುಣ್ಯದ ಪ್ರಭಾವದ, ಪ್ರಾರಬ್ಧದ ಇಲ್ಲವೆ ಪೂರ್ವ ಸಂಚಯದ ಆಧಾರ ಪಡೆದು ಬರುತ್ತದೆ. ಸಮರ್ಥರು ಹೇಳುತ್ತಲಿದ್ದ ಐಹಿಕದಲ್ಲಿಯ ವಿಚಾರಗಳ ವಿಷಯದಲ್ಲಿ ಹಾಗೆ ಮಾಡಲು ಬರುತ್ತಿರಲಿಲ್ಲ. ದೈನಂದಿನ ಬದುಕಿಗೆ ಪ್ರತ್ಯಕ್ಷ ಸಂಬಂಧವಿದ್ದ ವಿಚಾರಗಳನ್ನು ಮಾತ್ರ ಸ್ವತಃ ಆಚರಣೆಯಲ್ಲಿ ತರುವುದು ಒಂದೇ ಪರ್ಯಾಯವಾಗಿತ್ತು. ಆ ಪರ್ಯಾಯವನ್ನು ಸಹಜವಾಗಿ ಸ್ವೀಕರಿಸಲು ನಮ್ಮ ಸಮಾಜವು ಆ ರೀತಿ ಸಿದ್ಧವಾಗಿರಲಿಲ್ಲ,

ಸಮರ್ಥರ ಮೊದಲಿನ ಕಾಲದಲ್ಲಿ ಸಂತರ ಉಪದೇಶಗಳ ವಿಷಯವಾಗಿಯೂ ಇದೇ ಅನುಭವ ಬಂದಿತ್ತು. ಈಶ್ವರನ ಪ್ರಾಪ್ತಿಯಾಗುವುದಕ್ಕೆ ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನ ಮಾಡುವ ಕಾರಣವಿಲ್ಲ. ಇಲ್ಲವೆ ಮನೆಮಾರು ಬಿಟ್ಟು ಅರಣ್ಯಕ್ಕೆ ಹೋಗುವ ಮತ್ತು ಸನ್ಯಾಸವನ್ನು ತೆಗೆದುಕೊಳ್ಳುವ ಆವಶ್ಯಕತೆಯಿಲ್ಲ.

ನಮ್ಮ ಪಾಲಿಗೆ ಬಂದ ಕರ್ಮಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡುತ್ತ ಇರಿ ಮತ್ತು ಭಕ್ತಿಯ ಸುಲಭ ಮಾರ್ಗಗಳನ್ನು ಅವಲಂಬಿಸಿರಿ, ಎಂಬ ಈ ಪಾರಲೌಕಿಕ ಕಲ್ಯಾಣ ಮಾರ್ಗವನ್ನು ತೋರುವ ಜ್ಞಾನೇಶ್ವರರ ಉಪದೇಶವು ಸಮಾಜಕ್ಕೆ ಒಪ್ಪಿತು. ಅದನ್ನು ಅನುಸರಿಸಿತು. ಆದರೆ ಅದೇ ವೇಳೆಯಲ್ಲಿ ಐಹಿಕ ಜೀವನದಲ್ಲಿ ಮುಟ್ಟುವ ಅವರ ವಿನಂತಿಯನ್ನು ಸಮಾಜವು ಅನುಸರಿಸಲಿಲ್ಲ. ಈ ವಿಷಯವಾಗಿ ಜ್ಞಾನೇಶ್ವರರಿಗೂ ಯಶಸ್ಸು ದೊರೆಯಲಿಲ್ಲ. ಶಾಂತ ಮನಸ್ಸಿನಿಂದ ಇದನ್ನು ವಿಚಾರಿಸಿದರೆ ಗಮನಕ್ಕೆ ಬರುತ್ತದೆ. ಜ್ಞಾನೇಶ್ವರರು ಈ ಜಗತ್ತಿನಲ್ಲಿ ಒಂದು ಸಂಕಲ್ಪಶೂನ್ಯ ವೃತ್ತಿಯಿಂದ ವ್ಯವಹರಿಸುತ್ತಿದ್ದರು. ಆದ್ದರಿಂದ ಯಶ ಹಾಗೂ ಅಪಯಶ ಈ ಎರಡರಲ್ಲಿ ಅವರು ಅತೀತರಾಗಿದ್ದರು, ಅದು ಬೇರೆ.

ಚೋಖಾಮೇಳಾ ಮತ್ತು ಬಂಕಾ ಮಹಾರ ಇಂಥ ಅಸ್ಪೃಶ್ಯರೆಂದು ತಿಳಿಯಲ್ಪಡುವ ಜಾತಿಯ ವ್ಯಕ್ತಿಗಳವರೆಗೆ ಜ್ಞಾನೇಶ್ವರರ ವ್ಯಾಪಕ ಕರುಣೆ ಮುಟ್ಟಿತ್ತು. ಹೀಗೆ ಅವರ ಜೀವನ ಗಾಥೆಯಿದೆ. ಆದರೆ ಸಮಾಜವು ಅವರು ಹೇಳಿದ ಪರಮಾರ್ಥದ ಕ್ಷೇತ್ರದಲ್ಲಿಯ ಭಕ್ತಿಯನ್ನು ಸ್ವೀಕರಿಸಿತು. ಐಹಿಕದಲ್ಲಿಯ ಸಮಾನತೆಯನ್ನು ಸ್ವೀಕರಿಸಲಿಲ್ಲ. ಏಳುನೂರು ವರ್ಷಗಳು ಕಳೆದುಹೋದ ಬಳಿಕ ಇಂದಿಗೂ ಕೂಡ ಆಳಂದಿಯಿಂದ ಪಂಢರಪುರಕ್ಕೆ ಹೋಗುವ ಪಲ್ಲಕ್ಕಿಯಲ್ಲಿ ಅಸ್ಪೃಶ್ಯರೆಂದು ಗಣಿಸಲ್ಪಡುವವರ ಭಜನಾ ದಿಂಡಿಗೆ ಇತರರ ಸರಿಸಮಾನ ಸ್ಥಾನ ದೊರೆಯುವುದಿಲ್ಲ. ಅಲ್ಲಿ ಜ್ಞಾನೇಶ್ವರರಂಥವರ ಪುಣ್ಯವೇ ಲೋಪವಾಗುತ್ತದೆ. ಪಂಢರಪುರದ ಭೀಮಾ ತೀರದ ಮರಳಿನಲ್ಲಿ ನಾಮಘೋಷಣೆ ಮಾಡುತ್ತಿರುವ ಸಮಯ ಮರೆತು ಬಿಡಲಾಗುವ ಜಾತಿಯ ವಿಷಯ, ಮರಳನ್ನು ಬಿಡುವಾಗ ಮತ್ತೆ ಅದರ ಸ್ಮರಣೆಯಾಗುತ್ತದೆ. ಆಯಾ ವಾರಕರಿಗಳು ತಮ್ಮ ಊರಿನ ಅಗಸೆ ಮುಟ್ಟುವುದರಲ್ಲಿ ಆ ಜಾತಿ ಭಾವನೆಯು ಮೊದಲಿನಷ್ಟೇ ಕಠೋರವಾಗುತ್ತದೆ. ರಾಜ್ಯಗಳು ಬಂದವು ಮತ್ತು ಹೋದವು. ಹೊಸ ಯುಗದ ಹೊಸ ವಿದ್ಯೆ ಬಂದಿತು. ಮನೆಮನೆಗೂ ವಿಜ್ಞಾನದ ಪ್ರವೇಶವಾಯಿತು. ಶಾಸ್ತ್ರೀಯ ಜ್ಞಾನದ ಮೇಲೆ ಆಧಾರಿತ ನವ ಮನ್ವಂತರವು ದಿಕ್ಕನ್ನು ಬೆಳಗಿತು. ಆದರೆ ಶತಶತಮಾನದ ಆ ಹಳೆಯ ಸಂಕೋಲೆ ಇನ್ನೂ ಕಳಚಿ ಬೀಳದು. ಯಾರ ಚರಣಗಳಿಗೆ ನಾವು ಭಕ್ತಿಭಾವದಿಂದ ತಲೆಯನ್ನು ಇಡುತ್ತೇವೆಯೋ, ಆ ಪುಣ್ಯಪಾವನರಾದ ಸತ್ಪುರುಷರಿಗೆ ನಮ್ಮ ಈ ವರ್ತನೆಯು ಕಲಂಕವನ್ನುಂಟು ಮಾಡುತ್ತದೆ. ಇದು ಯಾರ ಗಮನಕ್ಕೂ ಬರುವುದಿಲ್ಲ.

ಇದು ಕೇವಲ ಜ್ಞಾನೇಶ್ವರರಿಗಷ್ಟೇ ಅಲ್ಲ. ಯಾವುದೋ ಚಿಕ್ಕ ಬಾಲಿಕೆಯ ನಿರಾಗಸ ಹಟವನ್ನು ಪೂರೈಸುವ ಸಲುವಾಗಿ ಏಕನಾಥರು ಮಹಾರರ ಓಣಿಗೆ ಹೋದರು, ಇಲ್ಲವೆ ಶ್ರಾದ್ಧದ ದಿನ ಪಿತೃಗಳಿಗಾಗಿ ಕುದಿಸಿದ ಅನ್ನವನ್ನು ಬಾಗಿಲಲ್ಲಿ ನಿಂತ ಶೂದ್ರರನ್ನು ಅತಿಥಿಯೆಂದು ಭಾವಿಸಿ ಅವರಿಗೆ ನೀಡಿದರು, ಇಂಥ ಆಖ್ಯಾಯಿಕೆಗಳು ಇರುತ್ತವೆ. ಆದರೆ ಅವುಗಳ ಜತೆಗೆ ಇಂಥ ಕಥೆ ಕೂಡ ಇದೆ. ಏಕನಾಥರ ಈ ಬಗೆಯ 'ಸುಧಾರಕ' ವರ್ತನೆಯಿಂದ ಅವರ ಮಗ ಹರಿಪಂಡಿತನು ಮನೆ ಬಿಟ್ಟು

ಹೋದನು. ನಾಥಭಾಗವತಕ್ಕೆ ಜ್ಞಾನೇಶ್ವರಿಯ ತರುವಾಯ ಮಾನ್ಯತೆ ದೊರೆಯಿತು. ಅದನ್ನು ನೂರು ಎಂಟು ಸಲ ಪಾರಾಯಣ ಮಾಡಿದರೆ ಭಗವಂತನ ದರ್ಶನವಾಗುತ್ತದೆ ಎಂಬ ನಂಬುಗೆಯನ್ನು ಇಡುವ ಮಾತ್ರಕ್ಕೆ ಆ ಶ್ರದ್ಧೆ ತಲುಪಿತು. ಒಂದು ವೇಳೆ ಹೀಗೆ ಹೇಳುವುದು ಸರಿಯೆಂದು ನಿರ್ಧರಿಸಿದರೆ, ಪಾರಾಯಣದ ಇಂಥ ಮಹತ್ತ್ವವನ್ನು ಯಾರೋ ಹೇಳಿದರೆಂದು ಆ ಬಗೆಯ ಶ್ರದ್ಧೆ ಲಭಿಸಿತು. ಆದರೆ ಇಂಥ ಅಪಾರ ಶ್ರದ್ಧೆ ಯಾವ ಪುರುಷನ ಗ್ರಂಥಕ್ಕೆ ಲಭಿಸಿತೋ, ಅವರ ಜೀವನದಲ್ಲಿಯ ಸಾಮಾಜಿಕ ಕರುಣೆಯ ಅಂಗವಾಗಿ ಹೋಲುವ ಉದಾಹರಣೆಗಳನ್ನು ನಮ್ಮ ಸಮಾಜವು ಸುಮ್ಮನೆ ಕೇಳಿತು ಮತ್ತು ಅತ್ಯಂತ ಶಾಂತ ರೀತಿಯಿಂದ ಬದಿಗೆ ಸರಿಸಿತು.

ಶಿವಛತ್ರಪತಿಯವರ ಎಲ್ಲ ಋಣವನ್ನು ಮಹಾರಾಷ್ಟ್ರವು ಮಾನ್ಯ ಮಾಡಿತು. ಅವರ ಪರಾಕ್ರಮದ ಯಥಾಶಕ್ತಿ ಅನುಕರಣ ಮಾಡಿತು. ಆದರೆ ಮುಸಲ್ಮಾನನಾಗಿ ಪರಿವರ್ತಿಸಿದ ನೇತಾಜಿಪಾಲ್ಕರನನ್ನು ಶುದ್ಧಗೊಳಿಸಿ ತೆಗೆದುಕೊಂಡಿತು ಮತ್ತು ಪರ ಧರ್ಮಕ್ಕೆ ಹೋದ ಬಜಾಜಿ ನಿಂಬಾಳಕರನನ್ನು ಸ್ವಧರ್ಮದಲ್ಲಿ ಸೇರಿಸಿಕೊಂಡಿತು. ಅವನ ಜತೆ ಸ್ವತಃ ವಿವಾಹ ಸಂಬಂಧ ಮಾಡಿದರು. ಇದರಲ್ಲಿಯ ರಹಸ್ಯ ಯಾರ ಗಮನಕ್ಕೂ ಬಂದಿಲ್ಲ. ದೃಢವಾಗಿ ಹೋದ ಈ ಪರಂಪರೆಯ ಬಂಧನವು ಹರಿದು ಹೋಗಬೇಕೆಂದು ಪ್ರಾಚೀನ ಕಾಲದ ಗೌತಮಬುದ್ಧನಿಂದ ಇಂದಿನ ಯುಗದ ಮಹಾತ್ಮಾ ಗಾಂಧೀಜಿಯವರೆಗೆ ಅನೇಕರು ಆಮರಣವಾಗಿ ಪ್ರಯತ್ನ ಮಾಡಿದರು. ಆದರೆ ಉಪಯೋಗವು ತೀರ ಕಡಿಮೆಯಾಯಿತು. ನಮಗೆ ಸಮಾಜವು ಏನನ್ನು ಕಲಿಸಬಲ್ಲುದು ಮತ್ತು ಏನನ್ನು ಕಲಿಸಲಾರದು ಇವು ಮನಸ್ಸನ್ನು ಅಸ್ವಸ್ಥಗೊಳಿಸುವ ಚಿತ್ರಗಳಿವೆ. ಕೆಲವು ಬುದ್ಧಿವಂತ ವಿದ್ಯಾರ್ಥಿಗಳಿಗೆ ಅನೇಕ ಕಠಿಣ ವಿಷಯಗಳು ಸಹಜ ತಿಳಿಯುವುವು. ಆದರೆ ಭೂಗೋಲದಂಥ ಇಲ್ಲವೆ ಗಣಿತದಂಥ ಒಂದಿಷ್ಟು ವಿಷಯಗಳು ಅವನ ಬುದ್ಧಿಯಲ್ಲಿ ಸೇರುವುದೇ ಇಲ್ಲ. ಹೀಗೆ ಈಜಾತಿಬದ್ಧ ಹಾಗೂ ರೂಢಗ್ರಸ್ತ ಹಿಂದು ಸಮಾಜದ ಅವಸ್ಥೆಯಿದೆ. ಯಾವವು ಕೇವಲ ಶ್ರದ್ಧೆಗೆ ಒಳಗಾಗುತ್ತವೆಯೋ ಹಾಗೂ ನಡೆದು ಬಂದ ಪರಂಪರೆಗೆ ಹೊಂದುತ್ತವೆಯೋ ಅಷ್ಟನ್ನು ನಮ್ಮ ಸಮಾಜವು ಸ್ವೀಕರಿಸುತ್ತದೆ. ಬುದ್ಧಿಯ ಒರೆಗಲ್ಲಿಗೆ ತಿಕ್ಕಿ ನೋಡುವ ಒಂದಿಷ್ಟು ಹೊಸ ವಿಚಾರಗಳಿದ್ದರೆ ಅವು ಎಷ್ಟೇ ಹಿತಕಾರಕವಿದ್ದರೂ, ಯೋಗ್ಯವಿದ್ದರೂ ಈ ಸಮಾಜವು ಸ್ವೀಕರಿಸಲಾರದು. ಅದೆಷ್ಟೋ ಶತಮಾನಗಳಿಂದ ಅದು ಹೀಗೇ ಜರುಗುತ್ತ ಬಂದಿದೆ.

ಒಟ್ಟಿನ ಸಮಾಜದ ಹೋಗಲಿ, ಸಮರ್ಥರಿಗೆ ದೊರೆತ ಶಿಷ್ಯರಲ್ಲಿ ಎಷ್ಟು ಜನರಿಗೆ ಅವರ ವಿಚಾರಗಳ ಅರ್ಥವಾಗಿತ್ತು ಹಾಗೂ ಅವರಲ್ಲಿ ಅದೆಷ್ಟು ಜನರೊಳಗೆ ಆ ವಿಶೇಷ ವಿಚಾರಗಳನ್ನು ಸಮಾಜದವರೆಗೆ ತೆಗೆದುಕೊಂಡು ಹೋಗಿ ತಲುಪಿಸುವುದಕ್ಕೆ ಅವಶ್ಯವಾದ ವ್ಯಕ್ತಿತ್ವವಿತ್ತು, ಇದೇ ಒಂದು ಪ್ರಶ್ನೆಯಿದೆ. ಉದ್ಧವ, ಕಲ್ಯಾಣ, ದಿವಾಕರ ಇಂಥ ಸಮರ್ಥರ ಶಿಷ್ಯರ ಹೆಸರುಗಳನ್ನು ಕಣ್ಣೆದುರು ತಂದರೆ ಅವರೊಳಗೆ ಯಾರಲ್ಲಿ ಸಮರ್ಥರ ತೇಜಸ್ಸಿನ ಧಗಧಗಿಸುವ ಶಕ್ತಿ ಇತ್ತೆಂಬುದು ಕಂಡುಬಂದಿಲ್ಲ. ಆ ಶಿಷ್ಯರು ಮಾಡಿದ ರಚನೆಗಳು ಮತ್ತು ಅವರು ಸವೆಸಿದ ಆಯುಷ್ಯ ಇವುಗಳ ಮೇಲೆ ಕೇವಲ

ಒಂದು ದೃಷ್ಟಿ ಹಾಕಿದರೆ ಇದು ಲಕ್ಷ್ಯಕ್ಕೆ ಬರುತ್ತದೆ. ಎಲ್ಲಿಯವರೆಗೆ ಸಮರ್ಥರಂಥ ದೀಪ್ತಿಮಾನ ಸೂರ್ಯನ ಪ್ರಕಾಶವಿತ್ತೋ, ಅಲ್ಲಿಯವರೆಗೆ ಈ ಎಲ್ಲ ಶಿಷ್ಯರ ಜೀವನಗಳು ಹೆಚ್ಚುಕಡಿಮೆ ಬೆಳಗಿದವು. ಆ ಪ್ರಕಾಶವು ಮರೆಯಾದ ಮೇಲೆ ಮತ್ತೆ ಎಲ್ಲೆಡೆ ಮೊದಲಿನಂತೆಯೇ ಕತ್ತಲೆ ಪಸರಿಸಿತು. ಸಮರ್ಥರು ಮಠಗಳನ್ನು ನಿರ್ಮಿಸಿದ್ದು ಅಲ್ಲಿ ಕೇವಲ ನಾಮಸ್ಮರಣೆ, ಭಜನೆ ಪೂಜೆ ಇಲ್ಲವೆ ದಾಸಬೋಧೆಯ ಪಾರಾಯಣ ಆಗುತ್ತಿರಲಿ ಎಂದಷ್ಟೇ ಅಲ್ಲ. ಈ ಮಠಗಳಲ್ಲಿ ತಮ್ಮ ಶಿಷ್ಯರು ನಿತ್ಯ ಸಮಾಜದ ಕಾರ್ಯ ಮಾಡುತ್ತಿರಲಿ ಮತ್ತು ಅಲ್ಲಿನ ಅವರ ವಾಸ್ತವ್ಯದಿಂದ ಸುತ್ತ ಮುತ್ತಲಿನ ಸಮಾಜಕ್ಕೆ ನಿತ್ಯ ಜಾಗೃತಿಯ ಹೊಸ ದಿಕ್ಕು ತೋರಲಿ ಎಂಬುದೇ ಅವರ ಮುಖ್ಯ ಉದ್ದೇಶವಾಗಿತ್ತು. ಆದರೆ ಅದು ಹಾಗಾಗಲಿಲ್ಲ.

ಸಮರ್ಥರ ವಿಚಾರಗಳಲ್ಲಿಯ ವಿಶೇಷ ದೆಸೆಗಳನ್ನು ಶಿಷ್ಯರು ಸರಿಯಾಗಿ ತಿಳಿದಿದ್ದರೆ, ಹನುಮಜಯಂತಿಯ ಉತ್ಸವ ಹಾಗೂ ರಾಮಜನ್ಮದ ಸಮಾರಂಭ ಇವುಗಳಿಗೆ ರೂಢ ಕರ್ಮ ಕಾಂಡದ ಮತ್ತು ಸಾಂಪ್ರದಾಯಿಕ ಆಚಾರದ ಸ್ವರೂಪವು ಮುಂದೆ ಪ್ರಾಪ್ತ ವಾದಂತೆ ಆಗುತ್ತಿರಲಿಲ್ಲ. ಅವುಗಳಲ್ಲಿ ವಿಶೇಷ ಚೈತನ್ಯವು ಮೂಡಿ ಬರುತ್ತಲಿತ್ತು. ಹಾಗೆ ಆಗಲಿಲ್ಲ. ಸಮರ್ಥರು ತೀರಿಕೊಂಡ ಬಳಿಕ ಸ್ವಲ್ಪ ಕಾಲದಲ್ಲಿಯೇ ಅವೆಲ್ಲ ನಿರ್ಜೀವ ಹಾಗೂ ಯಾಂತ್ರಿಕವಾಗಿ ಹೋದವು. ಪ್ರತಿಯೊಬ್ಬ ವ್ಯಕ್ತಿ ತನ್ನ ಬುದ್ಧಿ ಯಿಂದ ವಿಚಾರ ಮಾಡಬೇಕೆಂಬುದು ಸಮರ್ಥರ ಮಹತ್ವಾಕಾಂಕ್ಷೆಯಾಗಿತ್ತು. ಆದರೆ ಅವರ ಚರಿತ್ರೆಯನ್ನು ಬರೆದ ಶಿಷ್ಯ ಸಂಪ್ರದಾಯದವರೇ, ಆ ಚರಿತ್ರೆಯಲ್ಲಿ ಅನೇಕ ಚಮತ್ಕಾರಗಳನ್ನು ಹಾಗೂ ಅವೆಷ್ಟೋ ನಿರರ್ಥಕ ಕಥೆಗಳನ್ನು ಸೇರಿಸಿದರು. ಅದರಲ್ಲಿ ಹೀಗೆ ತುಂಬಿ ಹೋದ ಸಮರ್ಥರ ಜೀವನಚರಿತ್ರವು ಇಂದು ನಮ್ಮವರೆಗೆ ಬಂದು ಮುಟ್ಟಿದೆ. ಮೋಸದ ಗುರುವಿನ ವ್ಯರ್ಥ ಚಮತ್ಕಾರಗಳ ಮೇಲೆ ಚಾಟಿ ಏಟು ಕೊಡುವ ಸಮರ್ಥರ ಹೆಸರಿನ ಮೇಲೆ ಅನೇಕ ಚಮತ್ಕಾರಗಳನ್ನು ಹೇಳುತ್ತ ಹೋದರು. ಆ ಚಮತ್ಕಾರಗಳು ಹಾಗೇ ಅವರ ಕರ್ತೃತ್ವದ ಪುರಾವೆಗಳೆಂದು ತಿಳಿಯ ತೊಡಗಿದವು. ಸ್ವರಾಜ್ಯವನ್ನು ಕಟ್ಟಲು ಇಡೀ ಆಯುಷ್ಯ ಪ್ರಯತ್ನಗಳ ಪರಾಕಾಷ್ಠೆ ಪಡುವ ಶಿವಛತ್ರಪತಿಗಳು ಕೂಡ ಇದರಿಂದ ಬಿಡುಗಡೆಯಾಗಿಲ್ಲ. ಸಮರ್ಥರ ಹೊಟ್ಟೆ ನೋವಿನ ವ್ಯಥೆ ಗುಣವಾಗಬೇಕೆಂದು ಅವರೇ ಹುಲಿಯ ಹಾಲು ತರಲು ಅರಣ್ಯ ಸೇರಬೇಕಾಯಿತು. ಸಮರ್ಥರಿಗಾಗಿ ತಯಾರಿಸುವ ಎಲೆಯಡಿಕೆ ನಿತ್ಯ ಯಾವುದರಲ್ಲಿ ಅರೆಯಲ್ಪಡುತ್ತಿತ್ತೋ ಆ ಕಲಬತ್ತು ಎಂದು ತಿಳಿದ ಭೋಲಾರಾಮನು ಸ್ವಂತ ತಲೆಯನ್ನು ಕೊಯ್ದುಕೊಂಡು ಅದನ್ನು ಅವರ ಕೈಯಲ್ಲಿ ಕೊಡಲು ಮುಂದೆ ಮಾಡಿದುದನ್ನು ಅವರು ಡವಡವಿಸುವ ಹೃದಯದಿಂದ ನೋಡಬೇಕಾಯಿತು. ಸಮರ್ಥರ ಕಥೆಗಳೆಂದು ಮುಂದಿನ ಪೀಳಿಗೆಯವರು ಹೇಳುತ್ತ ಹೋದ ಎಲ್ಲವು ಬಹಳಷ್ಟು ಈ ಪ್ರಕಾರದವುಗಳಾಗಿದ್ದವು. ಅವರ ವಿಚಾರ ಸಂಪತ್ತಿನಲ್ಲಿ ಲಕಲಕ ಹೊಳೆಯುವ ಮುತ್ತುಗಳ ಅರಿವನ್ನು ಯಾರೂ ಇಟ್ಟಿಲ್ಲ.

ಸಮರ್ಥರು ಈ ಭೂಮಿಯ ಮೇಲೆ ಬಂದರು ಮತ್ತು ಹೋದರು. ಅವರು

ಮಾಡಿದ ಪ್ರಯತ್ನವಾದದ ಪುರಸ್ಕಾರದಿಂದ ಹಾಗೂ ಪ್ರಪಂಚ ಪರಮಾರ್ಥ ವಿವೇಕಗಳ ಉಪದೇಶದಿಂದ ಸಮಾಜದಲ್ಲಿ ಕೆಲಸಮಯ ಒಂದಿಷ್ಟು ಜಾಗೃತಿಯಾಯಿತು. ಸ್ವಲ್ಪ ವೇಳೆಯಲ್ಲಿ ಮತ್ತೆ ಮೊದಲಿನಂತೆ ಸ್ಥಿರಸ್ಥಾವರವಾಯಿತು. ಸಮರ್ಥರು ಈ ಭೂಮಿಯ ಮೇಲೆ ಬಂದಿರಲೇ ಇಲ್ಲ ಎನ್ನುವಷ್ಟು ಸ್ಥಿರಸ್ಥಾವರವಾಯಿತು.

ಐಹಿಕತೆಯಲ್ಲಿ ಮುಂದೆ ಹೋಗುವ, ಆ ವಿಶೇಷ ವಿಚಾರಗಳನ್ನು ಮಂಡಿಸುವ ಒಂದಿಷ್ಟು ಪ್ರಾಯಶ್ಚಿತ್ತವು ಸಮರ್ಥರಿಗೂ ದೊರೆಯಿತು. ಸಮರ್ಥರ ಗಣನೆಯನ್ನು ಮಹಾರಾಷ್ಟ್ರದಲ್ಲಿ ಆಗಿ ಹೋದ ಐದು ಜನ ಪ್ರಮುಖ ಸಂತರಲ್ಲಿ ಮಾಡಲಾಗುತ್ತದೆ. ಸಂತರೆಂದು ಯಾರಿಗೆ ಅನ್ನಬೇಕು ? ಕೇವಲ ಆಧ್ಯಾತ್ಮಿಕ ಜೀವನವನ್ನು ಯಾರು ಸಾಗಿಸುತ್ತಾರೋ ಅವರು ಸಂತರು. ಸಮರ್ಥರು ಇಂಥ ಸಂತರೆಂಬುದು ವಾದಾತೀತವಾಗಿದೆ. ಹನ್ನೆರಡನೆಯ ವರುಷಕ್ಕೆ ಮನೆಯ ಕಡೆಗೆ ಬೆನ್ನು ತಿರುಗಿಸಿ ಅವರು ಒಟ್ಟಿಗೆ ಹೊರಬಿದ್ದರು. ಮತ್ತೆ ಅವರು ಎಂದೂ ಸಂಸಾರದತ್ತ ಮನಸ್ಸು ತಿರುಗಿಸಿ ನೋಡಲಿಲ್ಲ. ಅವರು 'ವಿಶ್ವದ ಚಿಂತೆ' ಮಾಡಿದರೇನೋ ಸರಿ. ಆದರೆ ಸ್ವಂತಕ್ಕಾಗಿ "ದಾಸ ಬೆಟ್ಟದಲ್ಲಿರುವನು" ಇದೇ ತಮ್ಮ ಜೀವನದ ಸ್ವರೂಪವನ್ನು ಕೊನೆಯವರೆಗೂ ಕಾಯ್ದುಕೊಂಡರು. ಆದರೆ ಇಂಥ ಪರಮಾರ್ಥಿ ಪುರುಷನ ಸಂತ ಪದವಿಯು ಕೆಲವೆಡೆ ಸಂಶಯಾಸ್ಪದವಾಗಿ ಕಾಣುತ್ತದೆ. ಅದು ಹಾಗೇಕೆ ಕಾಣಬೇಕು ? ಆದರೆ ಪರಮಾರ್ಥಿ ಎಂದು ಹೇಳಿಕೊಳ್ಳುವ ಈ ಸತ್ಪುರುಷ ಐಹಿಕದ ವಿಚಾರ ಮಾಡಿದರು. ರಾಜ್ಯಗಳು ಯಾವ ಬಲದಿಂದ ನಿಲ್ಲುತ್ತವೆ ಹಾಗೂ ಅದಕ್ಕಾಗಿ ಸಾಮರ್ಥ್ಯದ ಉಪಾಸನೆಯನ್ನು ಹೇಗೆ ಮಾಡಬೇಕು, ಇದನ್ನು ತಿಳಿಸಿದರೆಂದು ಅವರ ಬಗೆಗೆ ಸಂದೇಹ. "ಬಹಳ ಜನರನ್ನು ಕೂಡಿಸಬೇಕು, ಒಂದು ವಿಚಾರವನ್ನು ತುಂಬಬೇಕು" ಮತ್ತು ಮ್ಲೇಂಛರ ಮೇಲೆ "ಪ್ರಯತ್ನದಿಂದ ಆಕ್ರಮಿಸಬೇಕು" ಎಂದು ಹೇಳಿದ್ದಾರೆಂದು, "ಧರ್ಮಕ್ಕಾಗಿ ಮಡಿಯಬೇಕು" ಎಂಬ ಸಂದೇಶವನ್ನು ಕೊಟ್ಟಿದ್ದಾರೆಂದು ಕೂಡ ಅವರ ಬಗೆಗೆ ಸಂದೇಹ ಉಂಟಾಗಿರಬೇಕು.

ಸತ್ವಪೂರ್ಣವಾಗಿ ಹೇಳುವಂಥ ಸತ್ಪುರುಷನು ಐಹಿಕ ಜೀವನದ ವಿಷಯವಾಗಿ ಹೀಗೆ ಸ್ಪಷ್ಟವಾಗಿ ಹಾಗೂ ಖಂಡತುಂಡ ವಿಚಾರಗಳನ್ನು ಸುಸ್ಪಷ್ಟ ಶಬ್ದಗಳಲ್ಲಿ ಮಂಡಿಸುವುದು ಒಂದಿಷ್ಟು ವಿಪರೀತವಾಗುವುದೆಂದು ತಿಳಿಯಲಾಯಿತು. ಮತ್ತೆ ಅದರ ಪರಿಣಾಮವೇನಾಯಿತು ? ಆದರೆ ಸಮರ್ಥರ ಪರಮಾರ್ಥವು ಕೊನೆಯತನಕ ಉಳಿಯಿತು. "ಪಾರಮಾರ್ಥಿಕರಿಂದ ರಾಮದಾಸರ ಪರಾಭವ" ಎಂದು ಪ್ರಾ. ಶ್ರೀ. ಮ. ಮಾಟೆ ಅವರು ಮಾಡಿದ ಆ ಪರಾಭವದ ಸ್ವರೂಪವು ಹೀಗಿದೆ. ಆದರೆ ಈ ಪರಾಭವವು ಹೀಗೆ ಒಂದೇ ಕಡೆಯದಲ್ಲ. ಸಮರ್ಥರು ಪರಾಭೂತರು ಹಾಗೂ ಅವರ ಜತೆ ಸಮಾಜವೂ ಪರಾಭೂತ ಹೀಗೆ ಈ ಕಥೆಯಿದೆ. ಸಮರ್ಥರು ಪರಾಭೂತ, ಕಾರಣ ಅವರು ಹೇಳಿದ ಪ್ರಯತ್ನವಾದವನ್ನು ಮತ್ತು ಪ್ರಪಂಚ ಪಾರಮಾರ್ಥ ವಿವೇಕವನ್ನು ಸಮಾಜವು ಸ್ವೀಕರಿಸಲಿಲ್ಲ. ಸಮಾಜ ಪರಾಭೂತ; ಕಾರಣ ಸಮರ್ಥರ

ವಿವೇಕಾಶ್ರಿತ ಉಪದೇಶದ ಅನುಕರಣೆಯನ್ನು ಮಾಡಲಾರದೆ, ಅದು ಆಕ್ರಮಣಕಾರರೆದುರು ಸೋಲನ್ನು ಅನುಭವಿಸಬೇಕಾಯಿತು.

ಕಳೆದ ಸಾವಿರ, ಹದಿನೈದು ನೂರು ವರ್ಷಗಳಲ್ಲಿ ಕ್ರಮವಾಗಿ ಆಗುತ್ತಿರುವ ನಮ್ಮ ಸಮಾಜದ ಪರಾಗತಿಯ ಮೂಲವೇ ಕೊನೆಗೆ ಇದರಲ್ಲಿದೆ. ಪರಂಪರೆಯ ಮೇಲೆ ಅವಲಂಬಿಸಿದ ಶ್ರದ್ಧಾಭಾವನೆಗಳನ್ನು ಸೇರಿಸಿ ಹೇಳಿದರೆ ಅವು ನಮ್ಮ ಸಮಾಜದಲ್ಲಿ ಎಲ್ಲಿಯಾದರೂ ಮುಟ್ಟುತ್ತವೆ. ವಿವೇಕನಿಷ್ಠ ಬುದ್ಧಿವಾದಗಳನ್ನು ಸೇರಿಸಿ ಏನನ್ನಾದರೂ ಹೇಳಿದರೆ, ಅವು ಮಾತ್ರ ಮುಟ್ಟುವುದಿಲ್ಲ. ಪರಮಾರ್ಥ ಸಿದ್ಧಿ ಇದು ಜೀವನದ ಕೊನೆಯ ಸಾಫಲ್ಯವಿದ್ದರೆ ಐಹಿಕತೆಯನ್ನು ಅಲ್ಲಗಳೆಯಲಾಗುವುದಿಲ್ಲ. ಹಾಗೆ ಇದನ್ನು ಅಲ್ಲಗಳೆದರೆ ಪ್ರಪಂಚ ಮುಳುಗುತ್ತದೆ ಮತ್ತು ಪರಮಾರ್ಥವೇ ಸಾಧಿಸುವುದಿಲ್ಲ ಎಂದು ಹೇಳಲಿಕ್ಕೆ ಸಮರ್ಥರು ತಮ್ಮ ಇಡೀ ಆಯುಷ್ಯವನ್ನು ವೆಚ್ಚ ಮಾಡಿದರು. ಇಂದಿನ ಸಮಯ ಅದರ ಸರ್ವಾಧಿಕ ಮಹತ್ವವನ್ನು ಅರಿಯಬೇಕಾಗಿದೆ. ಆ ಸಾಮಾಜಿಕ ಸಮತೆಯ ಜತೆ ಸಂಬಂಧವನ್ನು ಜತೆಗೂಡಿಸುವ ವಿಚಾರಗಳನ್ನು ಸಮರ್ಥರು ಹೇಳಿದಂತೆ ಕಾಣುವದಿಲ್ಲ. ಅವರ ಮನಸ್ಸಿನ ಓಟ ಅಲ್ಲಿಯವರೆಗೆ ಮುಟ್ಟಬೇಕೆಂಬ ಅಪೇಕ್ಷೆಯನ್ನು ನಾವು ಮಾಡಲು ಸಾಧ್ಯವಿಲ್ಲ. ಅದು ಮುನ್ನೂರು ವರ್ಷಗಳ ಹಿಂದಿನ ಕಾಲವಿತ್ತೆಂಬುದು ಗಮನದಲ್ಲಿಡಬೇಕು. ನಮ್ಮ ದೇಶದಲ್ಲಿ ಯಾರಿಗೆ ಯಾವುದನ್ನು ತಿಳಿಸಲು ಆಗದೋ,ಅದು ಸಮರ್ಥರ ಮನಸ್ಸಿನಲ್ಲಿ ಏಕೆ ಬಂದಿರಲಿಲ್ಲ— ಹೀಗೆ ಪ್ರಶ್ನೆಯನ್ನು ಕೇಳಲು ಬರುವುದಿಲ್ಲ. ಇದರ ಮೇಲೆ ಸಮರ್ಥರ ಜೀವಿತ ಕಾರ್ಯಗಳ ಅಂತಿಮ ಮೌಲ್ಯಮಾಪನ ಮಾಡುವುದು ಯೋಗ್ಯವಾಗುವುದಿಲ್ಲ. ಮಾನವನ ಮೂಲಭೂತ ಪ್ರತಿಷ್ಠೆಯ, ಸಾಮಾಜಿಕ ಸಮತೆಯ ಆ ವಿಚಾರಗಳನ್ನು ಸಮಾಜದ ಮನಸ್ಸಿನಲ್ಲಿ ಮೂಡಿಸಬೇಕೆಂದು ಇಂದು ಅನೇಕ ಬಗೆಯ ಪ್ರಯತ್ನಗಳು ನಡೆದಿವೆ. ಆದರೆ ಅದರಲ್ಲಿ ಬರಬೇಕಾದ ಯಶಸ್ಸು ಬಾರದೆಂದು ಅನುಭವವಾಗಿದೆ. ಸಮರ್ಥರು ಕೊಟ್ಟ ಪ್ರಪಂಚ ಪರಮಾರ್ಥ ವಿವೇಕದ ಉಪದೇಶದಲ್ಲಿ ಆಗ ಒದಗಿದ ಅಪಯಶ ಹಾಗೂ ಸಮತೆಯ ಚಳುವಳಿಯಲ್ಲಿ, ಇಂದು ದೊರೆಯುವ ಅತೀ ಕಡಿಮೆಯಾದ ಪ್ರತಿಫಲದಲ್ಲಿ, ಈ ಎರಡರ ಮೂಲದಲ್ಲಿರುವ ಕಾರಣಗಳು ಅವೇ ಆಗಿರುತ್ತದೆ. ಐಹಿಕತೆಯ ಮತ್ತು ಸಮತೆಯ ಈ ವಿಚಾರಗಳು ನಮ್ಮ ಸಮಾಜದಲ್ಲಿ ಮೂಲವನ್ನು ಬೇಗ ಹಿಡಿಯುವುದಿಲ್ಲ. ಈ ದೇಶದ ಇತಿಹಾಸದಲ್ಲಿ ಹೀಗೆ ದೀರ್ಘಕಾಲದ ಸಾಕ್ಷಿಯಿದೆ.

ಹೀಗಿದ್ದರೂ ನಿರಾಶರಾಗುವ ಕಾರಣವಿಲ್ಲ. ಸಮರ್ಥರು ಯಾವ ಐಹಿಕತೆಯ ಬಗೆಗೆ ಹೇಳುವ ಪ್ರಯತ್ನ ಮಾಡಿದರೋ, ಅದು ಅರ್ವಾಚೀನ ಶಾಸ್ತ್ರೀಯ ಯುಗದ ಆಗಮನದಿಂದ ಮತ್ತು ಹೊಸ ಶಿಕ್ಷಣದ ಪ್ರಸಾರದಿಂದ ಇಂದು ನಮ್ಮ ಸಮಾಜದಲ್ಲಿ ಪ್ರಖರವಾಗಿ ಜಾಗೃತವಾಗುತ್ತಲಿದೆ. ಹೀಗೆಯೇ ಇನ್ನೂ ಸ್ವಲ್ಪ ಕಾಲ ಹೋಗಬೇಕಾಗುವುದು. ಸಮತೆಯ ಮೌಲ್ಯವೇ ಈ ಸಮಾಜದಲ್ಲಿ ಪ್ರತಿಷ್ಠಿತವಾಗುವುದು. ಐಹಿಕತೆ ಮತ್ತು ಸಮತೆ ಇವು ಇಂದಿನವರೆಗಿನ ಇತಿಹಾಸದಲ್ಲಿ ದುರ್ಲಕ್ಷಿತವಾಗಿದ್ದು

ಜೀವನ ಮೌಲ್ಯಗಳಲ್ಲಿ ಪ್ರಸ್ಥಾಪಿತವಾಗುವವು. ಆಗ ಸಮಾಜದ ಸಾಂಸ್ಕೃತಿಕ ಏಕಾತ್ಮತೆಯ ಹಾಗೂ ಉಜ್ವಲ ಭವಿತವ್ಯದ ಎಲ್ಲ ದಾರಿಗಳು ನಿಜವಾದ ಅರ್ಥದಲ್ಲಿ ಮುಕ್ತವಾಗುತ್ತವೆ. ಈ ಕನಸು ಎಂದು ನನಸಾಗುವುದೋ ಅದೇ ಒಂದು ಸುವರ್ಣ ದಿನ. ಈ ದೇಶದ ಭಾವಿ ಇತಿಹಾಸಕಾರರು ಯಾವಾಗ ಈ ಮೌಲ್ಯಗಳ ಪ್ರಸ್ಥಾಪನೆಯ ಶೋಧ ಮಾಡುವರೋ, ಆಗ ಇತರ ಅನೇಕ ಮಹಾಪುರುಷರು ಅದಕ್ಕಾಗಿ ಮಾಡಿದ ಪ್ರಯತ್ನಗಳ ತಾಳನೋಳ ನೋಡುತ್ತಿರುವಾಗ, ಅದರ ಜತೆ ಸಮರ್ಥ ರಾಮದಾಸರ ಉಪದೇಶಗಳ ಉಲ್ಲೇಖವನ್ನು ಅವರು ಮಾಡಲೇಬೇಕಾಗುತ್ತದೆ.

ಮುದ್ರಕರು : ಶ್ರೀ ಸದ್ಗುರು ಪ್ರಿಂಟರ್ಸ್, ರಾಮಾನುಜ ರಸ್ತೆ, ಮೈಸೂರು—570 004